ಮನೋಹರ ಗ್ರಂಥಮಾಲೆಯ ೬೪ನೆಯ ಕುಸುಮ

# ಚಕ್ರದೃಷ್ಟಿ

## ( ವ್ಯಕ್ತಿಪರೀಕ್ಷೆ )

ಬರೆದವರು:

**ನಾ. ಕಸ್ತೂರಿ**

ಮನೋಹರ ಗ್ರಂಥ ಪ್ರಕಾಶನ ಸಮಿತಿ

ಧಾರವಾಡ

ಫೆಬ್ರುವರಿ ೧೯೪೪.

ಬೆಲೆ: ೧-೮-೦

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು.

ಶ್ರೀ. ದ ರಾ ಬೇಂದ್ರೆ. ಎಂ ಎ

ಶ್ರೀ. ವಿ ಕೃ ಗೋಕಾಕ ಬಿ ಎ (ಆಕ್ಸನ್)

ಶ್ರೀ. ರಂ ಶ್ರೀ ಮುಗಳಿ ಎಂ. ಎ ಬಿ. ಟಿ.

ಸಂಪಾದಕ

**ಜಿ. ಬಿ. ಜೋಶಿ**


ಪ್ರಕಾಶಕರು

**ಜಿ. ಬಿ. ಜೋಶಿ,**

ಮನೋಹರ ಗ್ರಂಥಮಾಲಾ, ಧಾರವಾಡ

ಮುದ್ರಕರು

**ಉಷಾ ಪ್ರೆಸ್**

ಮೈಸೂರು

ಮನೋಹರ ಗ್ರಂಥಮಾಲೆಯ ಶಾಖಾ ಕಚೇರಿಗಳು

ನೀಲಗಿರಿ ರೋಡ್, ಮೈಸೂರು.

ಸ್ಟೇಶನ್ ರೋಡ್, ಗದಗ

# ಕೃತಜ್ಞತೆ

ಹೊಸ ಮಾದರಿಯ ಕೃತಿಯಾದ ಈ 'ಚಕ್ರದೃಷ್ಟಿ'ಯನ್ನು ಶ್ರೀಮಾನ್ ನಾ ಕಸ್ತೂರಿಯವರು ಮನೋಹರ ಗ್ರಂಥಮಾಲೆಗಾಗಿ ಬರೆದುಕೊಟ್ಟು ಮಾಲೆಯನ್ನು ಗೌರವಿಸಿದ್ದಕ್ಕಾಗಿ ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ

'ಚಕ್ರದೃಷ್ಟಿ'ಯ ಒಳದೃಷ್ಟಿಯೂ ಕಾಣಿಸುವಂತೆ ಮುನ್ನುಡಿಯ ತಿಳಿಗನ್ನಡಿಯನ್ನು ಹಿಡಿದ ಶ್ರೀಮಾನ್ ವಿನಾಯಕ ಗೋಕಾಕರಿಗೂ ನಾನು ಉಪಕೃತನಾಗಿದ್ದೇನೆ

ಹೊದಿಕೆ ಚಿತ್ರ ಬರೆದುಕೊಟ್ಟ ಗೆಳೆಯ ರಾಘವೇಂದ್ರರಿಗೂ ಕರಡು ನೋಡಿಕೊಟ್ಟ ಶ್ರೀಮಾನ್ ಚೌಡಪ್ಪನವರಿಗೂ, ಸಕಾಲದಲ್ಲಿ ಮುದ್ರಿಸಿ ಕೊಟ್ಟ ಉಷಾ ಪ್ರೆಸ್ಸಿನವರಿಗೂ ನನ್ನ ವಂದನೆಗಳು, ನೆನಕೆಗಳು

—ಸಂಪಾದಕ

---

## ಶ್ರೀ. ನಾ ಕಸ್ತೂರಿಯವರ ಇತರ ಗ್ರಂಥಗಳು

**ಹಾಸ್ಯ**
ಗಾಳಿಗೋಪುರ
ಯದ್ವಾ–ತದ್ವಾ

**ಚರಿತ್ರೆ**
ದಿಲ್ಲೀಶ್ವರನ ದಿನಚರಿ
ಮದುವೆ
ಮಕ್ಕಳ ಮೈಸೂರು ಚರಿತ್ರೆ

**ಕಥೆ**
ಪಾತಾಳದಲ್ಲಿ ಪಾಪಚ್ಚಿ
ಕೆಂಪನ ನವರಾತ್ರಿ

**ನಾಟಕ**
ಗಗ್ಗಯ್ಯನ ಗಡಿಬಿಡಿ
ಏಕಚಕ್ರ
ರಾಮಕೃಷ್ಣಯ್ಯನ ದರ್ಬಾರು
ಮೂಕಾಸುರ ವಧೆ
ನಂದಿಗ್ರಾಮ

**ಅಚ್ಚಿನಲ್ಲಿ**
ಡೊಂಕು ಬಾಲ
ಪಿಶಾಚಿಗಳು
" ಜನ--ಮನ "

# ಓದುಗರಿಗೆ

ಶ್ರೀಮಾನ್ ಜಿ ಬಿ ಜೋಶಿಯವರು ಸಾಮಾನ್ಯರಲ್ಲ ತಮಗೆ ಬರ ಬೇಕಾದ ಸಾಲ ಒಂದಕೆ ಅವರಿಗೆ ಸಂಪೂರ್ಣ ತೃಪ್ತಿ ಇಲ್ಲ ಮತ್ತೆ ತಮ್ಮ ಲೆಕ್ಕಪುಸ್ತಕಗಳಲ್ಲಿ ಅದೇ ವ್ಯಕ್ತಿಯ ಹೆಸರನ್ನು ಸಾಲಗಾರರ ಪಟ್ಟಿಯಲ್ಲಿ ಸೇರಿಸಬೇಕೆಂಬುದೇ ಅವರ ಹಂಬಲ ಆದ್ದರಿಂದ ನಾನು 'ಗಾಳಿಗೋಪುರ' ವನ್ನು ಅವರ ಕೈಗೆ ಕೊಟ್ಟು, 'ನಿಮ್ಮ ಬಾಕಿ ತೀರಿತು' ಅಂದಾಗ, ಅವರು, "ಅದಿರಲಿ! ಮುಂದಿನದು?" ಅಂತ ಕೈಹಿಡಿದೆಳೆದರು ಆಗಿನ ಕುರುಡು ಕೆಚ್ಚಿನಲ್ಲಿ, "ಆಗಲಿ! ಮುಂದಿನದು ಒಂದು ಹೊಸ ನಮೂನೆ ಪುಸ್ತಕ" ಅಂದೆ, ಬಿದ್ದೆ, ಸಾಲಗಾರರ ಪಟ್ಟಿಯಲ್ಲಿ.

ಪ್ರಾರಂಭವಾಯಿತು, ಜೋಶಿಯವರ ವಸೂಲಿ ಕ್ರಮ ಸೂಚನೆ, ಕಾಗದ, ಭೇಟಿ, ತಂತಿ ಎಂಬ ಚತುರೋಪಾಯಗಳನ್ನೂ ಪ್ರಯೋಗಿಸಿದರು ನಾನು ಆಕಾಶವಾಣಿಗೆ ಹೋದೆ, ಮೈಸೂರು ಕಾಲೇಜಿಗೆ ಬಂದೆ, ಶಿವ ಮೊಗ್ಗೆಗೆ ನುಗ್ಗಿದೆ ಅಲ್ಲಿಗೂ ಬಂತು ಅವರ ತಂತಿ ಸರಿ! ಗಡಿಬಿಡಿಯಲ್ಲೇ ಬಿರುಬಿರನೆ ಚಕ್ರದೃಷ್ಟಿಯನ್ನು ಬೀರಿ ಬರೆದು ಅವರಲ್ಲಿಗೆ ಕಳುಹಿಸಿದೆ

ಇಂತಹ ಒಂದು ಪುಸ್ತಕ ಬರೆಯಲೇ ಎಂದು ನಾನು ಶ್ರೀಮಾನ್ 'ಆನಂದ' ರೊಂದಿಗೂ ಡಾ॥ ಎನ್ ಎಸ್ ನಾರಾಯಣಶಾಸ್ತ್ರಿಯವರೊಂದಿಗೂ ಕೇಳಿ ಇದರ ವಿಷಯವಾಗಿ ಚರ್ಚಿಸಿ ಈಗ್ಗೆ ಮೂರುವರ್ಷಗಳಾದುವು ಈಚೆಗೆ ಇದನ್ನು ಬರೆಯಲು ಮೊದಲು ಮಾಡಿದಾಗಿನಿಂದ, ನನ್ನ ಮಿತ್ರರಾದ ಶ್ರೀಮಾನ್ ಎಸ್ ವಿ ಪರಮೇಶ್ವರಭಟ್ಟರು ಕಾವಲಿ ಹತ್ತಿರವೇ ಕುಳಿತು ಬಿಸಿಯಲ್ಲೇ ರುಚಿ ನೋಡಿ "ಪರವಾಗಿಲ್ಲ, ಸಾಗಲಿ" ಅಂತ ನನಗೆ ಆಗಾಗ್ಗೆ ಹುರುಪು ಕೊಡು ತ್ತಿದ್ದದ್ದನ್ನು ನಾನು ಮರೆಯಲಾರೆ

"ಚಕ್ರದೃಷ್ಟಿ"ಯ ನಮೂನೆ ಹೊಸದು ಆದ್ದರಿಂದ ನಾನು ಜೋಶಿ ಯವರಿಗೆ ಕೊಟ್ಟ ಭಾಷೆ ಉಳಿಯಿತು ಅಲ್ಲದೆ, ಅವರು ನನಗೆ, "ಚಕ್ರದೃಷ್ಟಿ ಯಲ್ಲಿ ವಕ್ರದೃಷ್ಟಿ ಇದ್ದೀತು, ತಾನೆ?" ಅಂದಿದ್ದರು ಅದಕ್ಕೆ ನಾನು, "ಚಕ್ರ ಅಂದರೆ ಸಂಪೂರ್ಣ ವಕ್ರವಲ್ಲವೆ?" ಅಂತ ಉತ್ತರ ಹೇಳಿದ್ದೆ

ಮತ್ತೊಂದು ಮಾತು· ಹನ್ನೊಂದು ಜನರು ನಾನಾ ಕಡೆಗಳಿಂದ ದೃಷ್ಟಿಬೀರಿದರೂ ಕಿಡಿಬಂಡೆ ಗುಂಡಪ್ಪನ ವ್ಯಕ್ತಿ ಪರೀಕ್ಷೆ ಪೂರ್ಣವಾಗಿದೆ ಎಂಬ ಧೈರ್ಯ ನನಗಿಲ್ಲ ಹನ್ನೊಂದು ಸಾವಿರ ಜನರ ದೃಷ್ಟಿಗೂ ಬೀಳದ ಒಂದು ವ್ಯಕ್ತಿತ್ವ, ಅವನಿಗೂ ಕಾಣಿಸದ ಒಂದು ವೈಶಿಷ್ಟ್ಯ ಅವನಲ್ಲಿ ಉಳಿದೇ ಉಳಿಯುವುದು

ಕಿಡಿಬಂಡೆ ಗುಂಡಪ್ಪನಾಗಲಿ ಅವನ ನಂಟರಿಷ್ಟರಾಗಲಿ ಇರುವರೋ, ಎಲ್ಲಿರುವರೋ, ನನಗೆ ಗೊತ್ತಿಲ್ಲ ಅವರು ಕೇವಲ ನನ್ನ ಕಲ್ಪನಾಪ್ರಪಂಚದಿಂದ ಹೊರಮೂಡಿದವರು ಪುಸ್ತಕದಲ್ಲಿ ಅಲ್ಲಲ್ಲಿ ಪ್ರಾಸ್ತಾವಿಕವಾಗಿ ಕೆಲವು ಸಮಸ್ಯೆಗಳನ್ನೂ ಸಂಪ್ರದಾಯಗಳನ್ನೂ ಹಲವರ ಬಾಯಿಂದ ಟೀಕಿಸಿದ್ದೇನೆ. ಅವುಗಳನ್ನು ಅವರವರ ಮಾತಿನ ಹಿನ್ನೆಲೆಯಲ್ಲೇ ನಿಲ್ಲಿಸಿ ಅರ್ಥಮಾಡಿಕೊಳ್ಳಬೇಕಾಗಿ ಕೋರುತ್ತೇನೆ

ಕಲ್ಪತರು<br>ಕೃಷ್ಣಮೂರ್ತಿ ಪುರಂ<br>ಮೈಸೂರು<br>೮-೧೨-೪೩

ನಾ. ಕಸ್ತೂರಿ

# ಮುನ್ನುಡಿ

**ಚಕ್ರದೃಷ್ಟಿ**ಯು **ಗಾಳಿಗೋಪುರ**ವನ್ನು ಬರೆದು ಕನ್ನಡಕ್ಕೆ ಚಿರಪರಿಚಿತರಾದ ಶ್ರೀಮಾನ್ ಕಸ್ತೂರಿಯವರ ಹೆಚ್ಚಿದ ಪ್ರತಿಭೆಗೆ ಎಲ್ಲರೂ ಮೆಚ್ಚುವಂತಹ ಸಾಕ್ಷಿಯಾಗಿ ನಿಂತಿದೆ

ಇದೊಂದು ಹೊಸ ಮಾದರಿಯ ಕೃತಿಯಾಗಿದೆ ಬ್ರೌನಿಂಗ್ ಕವಿಯ The Ring and the book (ಉಂಗುರ ಹಾಗು ಗ್ರಂಥ) ಎಂಬ ಕಥನ ಕಾವ್ಯದಲ್ಲಿ ಒಂದೇ ಕಥೆಯನ್ನು ಇಲ್ಲವೆ ಸಂಗತಿಸಮುಚ್ಚಯವನ್ನು ಬೇರೆ ಬೇರೆಯವರ ದೃಷ್ಟಿಯಿಂದ ವಿವರಿಸುವ ಕಲಾವಿಧಾನವು ಎದ್ದು ಕಾಣುತ್ತದೆ ಸತ್ಯವು ಅನೇಕಮುಖವಾಗಿರುವದರಿಂದ ಒಂದೇ ಕಿಂಡಿಯಿಂದ ನೋಡಿದಾಗ ಅದರ ಪರಿಗಳೆಲ್ಲ ನಮಗೆ ಕಾಣಿಸಲಾರವು ಎಲ್ಲ ದಿಕ್ಕುಗಳಿಂದ ಅದನ್ನು ನಾವು ದೃಷ್ಟಿಸಬೇಕು ಆಗ ಸತ್ಯದ ಸಾರವು ನಮಗೆ ತಿಳಿಯುವ ಸಂಭವವುಂಟು **ಚಕ್ರದೃಷ್ಟಿ**ಯಲ್ಲಿಯೂ ಅಷ್ಟಪೈಲಿನ ಈ ವಿಧಾನವ ಯೋಜನೆಯಾಗಿದೆ ಈ ಯೋಜನೆಯು ಬಹಳ ಯಶಸ್ವಿಯಾಗಿದೆ ವಿಡಂಬನೆಯು ವಕ್ರದೃಷ್ಟಿಯೂ ಈ ಚಕ್ರದೃಷ್ಟಿಯಲ್ಲಿ ಬೆರೆತು ಕೃತಿಗೆ ಹೊಸ ಕಳೆಯನ್ನು ತಂದಿದೆ

ಇಲ್ಲಿಯ ಕಥಾವಸ್ತುವು ಒಬ್ಬ ಹೆಡ್‌ಗುಮಾಸ್ತೆಯ ಇಲ್ಲವೆ ಕಾರಕೂನನ ಜೀವನಕ್ರಮ ಲೇಖಕರು ಅವನ ಜೀವನವೃತ್ತಾಂತವನ್ನು ಸಂಗ್ರಹಿಸುವದಕ್ಕಾಗಿ ಕೆಳಗೆ ಕಾಣಿಸಿದ ವ್ಯಕ್ತಿಗಳನ್ನು ಸಂದರ್ಶಿಸುತ್ತಾರೆ (೧) ಹೆಡ್‌ಗುಮಾಸ್ತೆ ಗುಂಡಪ್ಪನ ಮೇಲಿನ ಅಧಿಕಾರಿಗಳಾದ ಸಾಹೇಬರು ನಾರಣಯ್ಯನವರು. (೨) ಅವನ ಸಹೋದ್ಯೋಗಿಯಾದ ಕಾಶೀಪತಿ (೩) ಆಫೀಸಿನಲ್ಲಿಯ ಜವಾನನಾದ ಈರಯ್ಯ (೪) ಗುಂಡಪ್ಪನ ತಾಯಿಯಾದ ಸೀತಮ್ಮ. (೫) ಅವನ ಗೆಳೆಯನಾದ ಚಂದೂ (೬) ಅವನ ಗುರುಗಳಾದ ವಿಳಂಬಾನಂದರು (೭) ಅವನ ಪಾರ್ಶ್ವವಾಸಿ ಶ್ರೀಕಂಠಯ್ಯ (೮) ಎದುರಂಗಡಿ ಕೆಂಚಯ್ಯ (೯) ಇತ್ತೀಚಿನ ಗೆಳೆಯನಾದ ನಾರಾಯಣರಾಯ (೧೦) ಅಭಿನವ ಮಾರುತಿಯ ಸಂಸ್ಥೆಯಲ್ಲಿದ್ದ ಗುಂಡಪ್ಪನ ಭಾವನ ಸೋದರ. (೧೧) ಗುಂಡಪ್ಪನ ಸತಿ ಈ ಒಂದೊಂದು ಸಂದರ್ಶನಕ್ಕೆ ಒಂದೊಂದು ಅಧ್ಯಾಯವು ಮೀಸಲಾಗಿದೆ. ಸಂದರ್ಶನಗಳು 'ಯಕ್ಷ' ಕಿರಣದ ಬೆಳಕಿನಲ್ಲಾದುವೆಂಬುದು

ಮೇಲೆಯೇ ಕಾಣುತ್ತದೆ ಈ ವ್ಯಕ್ತಿಗಳ ಹೃದಯದಾಳದಲ್ಲಿದ್ದ ಅಭಿಪ್ರಾಯ ವನ್ನು ಕಂಡುಹಿಡಿದು ಲೇಖಕರು 'ಗುಂಡಾಯಣ'ವನ್ನು ಬರೆದಿದ್ದಾರೆ

ಈ ಹನ್ನೊಂದು ವೃತ್ತಾಂತಗಳಲ್ಲಿಯೂ ಗುಂಡಪ್ಪನ ಚರಿತ್ರೆಯು ಅರಳುತ್ತಿರುತ್ತದೆ ಅಂತೇ ಈ ಕೃತಿಯನ್ನು ಕಾದಂಬರಿಯೆಂದು ನಾವು ಕರೆಯ ಬೇಕಾಗುತ್ತದೆ ಗುಂಡಪ್ಪನ ಹೆಡ್‌ಗುಮಾಸ್ತೆತನ, ಕರ್ನೂಲಿನಿಂದ ಬಂದ ಅವನ ಮನೆತನದವರ ಇತಿಹಾಸ, ಗುಂಡಪ್ಪನ ಬಾಲ್ಯ ಹಾಗು ಓದು, ಅವನ ಮದುವೆ, ಅವನ ಕಾಲೇಜಿನ ಓದು, ಸಾಧುಸಮಾಗಮ, ನೆರೆ ಹೊರೆಯವರೊಡನೆ ಅವನ ನಡವಳಿಕೆ, ಗುಂಡಪ್ಪನಿಗೆ ಹಿಡಿದ 'ವಾತಾತ್ಮಜ' ಹುಚ್ಚು ಹಾಗು ಅದರ ನಿವಾರಣೆ,— ಇವು ಈ ಚರಿತ್ರೆಯ ಅಂಶಗಳಾಗಿವೆ

ಈ ಚರಿತ್ರೆಯಲ್ಲಿ ಮೂರು ಭಾಗಗಳಿವೆಯೆಂದು ಹೇಳಬಹುದು ಈ ಭಾಗಗಳು ಓದುಗರ ದೃಷ್ಟಿಯಿಂದ ಅಸ್ತಿತ್ವದಲ್ಲಿ ಬರುತ್ತವೆ ಲೇಖಕರು ಅನುಸರಿಸಿದ ನಾಟಕವಿಧಾನವೇ ಇದಕ್ಕೆ ಕಾರಣವಾಗಿದೆ ಮೊದಲು ಮೊದಲು ಅನೇಕ ಹೆಡ್‌ಗುಮಾಸ್ತೆಯರಂತೆ ಗುಂಡಪ್ಪನು ಒಳಗಂಟಿನ ಮನುಷ್ಯನಿದ್ದು ಸೀಚನಿರಬೇಕೆಂದು ನಮಗೆ ಭಾಸವಾಗುತ್ತದೆ ಆದರೆ ಐದನೇ ಪ್ರಕರಣದಿಂದ ಮುಂದೆ ಅವನೊಬ್ಬ ವೇದಾಂತಿಯೆಂದು ನಮಗೆ ಹೊಳೆಯುತ್ತದೆ ಆದರೆ ಈ ವೇದಾಂತವು ಕ್ರಮೇಣ ಜೀವನದಲ್ಲಿ ಒಂದು ವಿಧದ ವೈಚಿತ್ರ್ಯ ಹಾಗ ಉನ್ಮಾದವಾಗಿ ಸಂಭವಿಸುತ್ತಿದೆಯೆಂಬುದರ ಸೂಚನೆಯು ಒಂಬತ್ತನೆಯ ಪ್ರಕರಣವಲ್ಲಿಯೆ ಕೆಲವು ಮಟ್ಟಿಗೆ ಬರುತ್ತದೆ ಹೀಗೆ ಗುಂಡಪ್ಪನ ವೇದಾಂತವು 'ಕಾರಕೂನಿ' ವೇದಾಂತವಾಗುತ್ತದೆ

'ಗುಂಡಾಯಣ'ವನ್ನು ಬರೆಯಲು ಹೋಗಿ ಹನ್ನೊಂದು ವ್ಯಕ್ತಿಚಿತ್ರ ಗಳನ್ನು ಆಯಾ ವ್ಯಕ್ತಿಗಳ ಮಾತಿನಲ್ಲಿಯೇ ರೇಖಿಸಿರುವದು ಈ ಕೃತಿಯ ಇನ್ನೊಂದು ಗುಣವಾಗಿದೆ ಸಾಹೇಬ---ಈರಯ್ಯ---ಕೆಂಚಯ್ಯ---ಸೀತಮ್ಮ--ವಿಳಂಬಾನಂದ,-- ಎಲ್ಲರೂ ತಮ್ಮ ತಮ್ಮ ಭಾಷೆಯನ್ನೇ ಬಳಸುತ್ತಾರೆ ಸಮಾಜದ ಎಲ್ಲ ವರ್ಗಗಳನ್ನೂ ಮಾನವೀಯ ಸ್ವಭಾವದ ಅನೇಕ ರೀತಿ ಗಳನ್ನೂ ಈ ವ್ಯಕ್ತಿಗಳು ಉದಾಹರಿಸುತ್ತಾರೆ

ಕಸ್ತೂರಿಯವರ ಹಾಸ್ಯದಲ್ಲಿ ನಿಡಂಬನೆಯೂ ವೈಚಿತ್ರ್ಯವೂ (Fantasy) ಸರಿಯಾಗಿ ಬೆರೆತುಕೊಂಡಿರುತ್ತವೆ ಆಫೀಸಿನಲ್ಲಿ ಕಾರಕೂನನ

ನಡತೆ, ಹಿಂದೆ ಕುಟುಂಬಗಳು ಒಂದೂರಿನಿಂದ ಇನ್ನೊಂದಕ್ಕೆ ಹೋಗುತ್ತಿರುವ ರೀತಿ, ಹಳ್ಳಿಯ ಹುಡುಗರು ಹಿಂದೆ ಪರೀಕ್ಷೆಯಲ್ಲಿ ಪಾಸಾಗುವ ವೈಭವ, ಅತ್ತೆ--ಸೊಸೆಯ ಪ್ರಶ್ನೆ, ವಾರದ ಹುಡುಗರ ಗೋಳು, ಸಾಧುಗಳ ರೀತಿ, ನೆರೆಹೊರೆಯ ಸಂಗೀತದ ತಾಪ, ಎದುರಂಗಡಿಯವನ ಜೀವನ, ಸಾಹಿತ್ಯ ಪ್ರಿಯನ ರೀತಿ, ಪೊಳ್ಳು ಕಂಪನಿಗಳ ಮೋಸ, ಹೆಣ್ಣು ಜನ್ಮ,— ಇವೇ ಮೊದಲಾದ ವಿಷಯಗಳನ್ನು ವಿಡಂಬನೆ--ವೈಚಿತ್ರ್ಯದ ಮಿಶ್ರ ಬೆಳಕಿನಲ್ಲಿ ಇಲ್ಲಿ ಲೇಖಕರು ಚಿತ್ರಿಸಿದ್ದಾರೆ.

ಮೇಲೆ ಕಾಣಿಸಿದ ಎಲ್ಲ ಗುಣಗಳಿಕಂತ ಹೆಚ್ಚಿನ ಗುಣವೊಂದು ಈ ಕೃತಿಯಲ್ಲಿದೆ ಅದೇ ಕಸ್ತೂರಿಯವರ ಪ್ರತಿಭೆಯ ಉತ್ತಮ ನಿದರ್ಶನವೆಂದು ನಾನು ತಿಳಿದಿದ್ದೇನೆ. ಅದೆಂದರೆ ಅವರ ಹಾಸ್ಯದಲ್ಲಿ ಅಪರಳವಾಗಿ ಬೆರೆತ ಜೀವನವಿಮರ್ಶೆ ಹಾಗು ಚಮತ್ಕೃತಿಯ ರಮ್ಯತೆ "ತಾವು ಬಂದಿರುವದನ್ನು ತಾವೇ ತಮ್ಮ ಗಂಟಲ ಮೂಲಕವೇ ತಿಳಿಸಬೇಕಾಗಿ ಬಂತಲ್ಲ! ಕ್ಷಮಿಸಿ!" ಎಂದು ಸಾಹೇಬರು ಲೇಖಕರಿಗೆ ಹೇಳುತ್ತಾರೆ ಅಕಾರಾದಿಯಲ್ಲಿ ಚಾಕರರು ನಮಸ್ಕರಿಸುವ ವಿಧಾನ, 'ಕೇಡಿ' ಗುಂಡಪ್ಪ ಎಂಬ ಬಿರುದು, ಬೂಟಿನ 'ಪಾಲಿಷ್'ದ ಕಥೆ,— ಇವೆಲ್ಲ ಇವೇ ಹಾದಿಯವು ಅನೇಕ ಸಲ ವಿಶೇಷ ಜ್ಞಾನದ ಸಹಾಯದಿಂದ ಲೇಖಕರು ಈ ಚಮತ್ಕೃತಿಯನ್ನು ಸುದೀರ್ಘ ವಾಗಿಸುವದುಂಟು. "ಪಂಡಿತರು ಕಣ್ಣಿಗೆ ಎಣ್ಣೆಹಾಕಿ, ಕಿವಿಗೆ ಹತ್ತಿ ತುರುಕಿ, ಹೊಟ್ಟೆಗೆ ಕಷಾಯ ಹುಯ್ದು, ಕೋಳಿಗೆ ತಾಯಿತ ಕಟ್ಟಿ, ಮೂಗಿಗೆ ಮೂಲಿಕೆ ಹಿಂಡಿ, ಒಳಗಿನ ಪಕ್ಷಿ ಹಾರಿಹೋಗದ ಹಾಗೆ ನೋಡಿಕೊಂಡರು" ಕಬ್ಬನ್ ಸಾಹೇಬರ ಶಿಲಾ ಪ್ರತಿಮೆಯ ವಿಚಾರವು ಮನೋಹರವಾಗಿದೆ "ರೂಪ ಲಾವಣ್ಯಕ್ಕಿಂತ, ರೂಪಾಯಿ ಲಾವಣ್ಯಕ್ಕಿಂತ, ದೃಢಕಾಯರಾದ ವರನನ್ನು ವರಿಸಿ... ಮನೆಯನ್ನ ಆಸ್ಪತ್ರೆಮಾಡಿಕೊಳ್ಳಬೇಡಿ" ಎಂಬ ವಿಳಂಬಾನಂದರ ಉಪದೇಶವು ಮನನೀಯವಾಗಿದೆ. ಗುಂಡಪ್ಪನು ಅಭಿನವ ಮಾರುತಿಯ ಶಿಷ್ಯನಾದಾಗ ತನ್ನ ಸ್ನೇಹಿತನ ಜುಲುಮೆಗೆ ಕೆಲವು ಕನ್ನಡ ಪುಸ್ತಕಗಳನ್ನು ಓದುತ್ತಾನೆ. **ಸಮುದ್ರದಾಚೆಯಿಂದ, ಬೆಟ್ಟದ ಜೀವ, ನಿರಾಭರಣ ಸುಂದರಿ** ಇವೇ ಆ ಪುಸ್ತಕಗಳು! ಇಂತಹ ವಿಮರ್ಶೆ—ಚಮತ್ಕೃತಿಯು ಗ್ರಂಥದಲ್ಲೆಲ್ಲ ಕಂಡು ಬಂದು ಮನಸ್ಸನ್ನು ತಣಿಸುತ್ತದೆ. ಮೇಲಾಗಿ

ಅವರ ಶಬ್ದಮಾಲೆಯೊಂದನ್ನೇ ಲೇಖಕರು ತಯಾರಿಸಿದ್ದಾರೆ ಮಗನನ್ನು ಮದನಪಳ್ಳಿಗೆ ಕಳಿಸು, ಷರಾಯಿ ವೈದ್ಯ, ಜ್ವರದೃತು, ಶ್ಲೇಷ್ಮಋತು, ಸಿನಿಮೀಯ, ಆಗರ್ಭ ಸ್ಪ್ಲೀನ್‍ಮಂತ, ವಿಟಮೀನು, ಹಾರೋಪ್ಲೇನು, ಮಾರ್ಮೋಡ,— ಇವೆಲ್ಲ ಕನ್ನಡಕ್ಕೆ ಕಸ್ತೂರಿಯವರ ಕಾಣಿಕೆಗಳಾಗಿವೆ.

'ಅಷ್ಟಪೈಲಿನ' ವ್ಯಕ್ತಿಗಳ ಮೇಲೆ ಚಕ್ರದೃಷ್ಟಿಯನ್ನು ಪ್ರಯೋಗಿಸಿದಾಗ ಕಂಡುಬರುವ ಅದ್ಭುತವನ್ನು ಸಹ ಶ್ರೀ ಕಸ್ತೂರಿಯವರು ತೋರಿಸಬಲ್ಲರು ಈ **ಚಕ್ರದೃಷ್ಟಿ**ಯು ಆ ಶಕ್ತಿಯ ದ್ಯೋತಕವಾಗಿದೆ ಶ್ರೀರಂಗರ **ವಿಶ್ವಾಮಿತ್ರ ಸೃಷ್ಟಿ**ಯನ್ನೂ **ಚಕ್ರದೃಷ್ಟಿ**ಯನ್ನೂ ಹೋಲಿಸಿ ನೋಡಿದರೆ ಇಂದಿನ ಇಬ್ಬರು ಪ್ರತಿಭಾವಂತ ಲೇಖಕರ ರೀತಿ ವೈಶಿಷ್ಟ್ಯಗಳು ಒಡೆದು ಕಾಣುತ್ತವೆ **ಚಕ್ರದೃಷ್ಟಿ**ಯಲ್ಲಿದ್ದ ಕಲೆಯ ನಯವೂ ನಮಗೆ ಅವಗತವಾಗುತ್ತದೆ

ಇಂಥ ಅನೇಕ ಕೃತಿಗಳಲ್ಲಿ ಶ್ರೀಮಾನ್ ಕಸ್ತೂರಿಯವರ ಕಲೆಯು ಎಂದಿಗೂ ಗಮಗಮಿಸಲಿ

ವಿಲಿಂಗ್ಡನ್ ಕಾಲೇಜು
೭೨—೨—೧೯೪೪

**ವಿ. ಕೃ. ಗೋಕಾಕ**

# ಚಕ್ರದ ಸುತ್ತ

# ಚಕ್ರದೃಷ್ಟಿ

## ೧. ಕರಕರಪ್ರಿಯ

ನಿನ್ನೆ ಹಾಗೆಯೇ ಇವತ್ತೂ ಕೂಡ ಪುರಸತ್ತಿಲ್ಲ ಅಂತ ಹೇಳಿಲ್ಲ ವೇನೋ? ಕೂತೇ ಇದಾರೆಯೋ ಇನ್ನೂ? ನಿನ್ನೆ ಬಂದವರಲ್ಲವೇನೋ? ಕೂತಿರಲಿ, ನಿನಗೇನು? ಕುರ್ಚಿ ಧೂಳಾದರೂ ಹೋಗುತ್ತೆ. 'ಟ್ರಿಂಗ್. . ಟ್ರಿಂಗ್ ಟ್ರಿಂಗ್ ಬಾರೋ ಇಲ್ಲಿ! ಯಾರದು ಹೊರಗೆ ಕೆಮ್ಮುವುದು? ಕ್ಷಯಾಸ್ಪತ್ರೆಗೆ ಸಾಗಿಸೋ ಅವರನ್ನ ಏನು? ನಿನ್ನೆ ಬಂದಿದ್ದವರೇ? ಸರಿ! ಒಳಕ್ಕೆ ಬಿಡು ಪ್ರಾಣೀನ ಹಾಳಾಗಿ ಹೋಗಲಿ ದೂರ ಇಡು ಕುರ್ಚೀನ ದೂರ ಅಲ್ಲೇ ಕುಕ್ಕರಿಸಲಿ ಓ! ಬನ್ನಿ! ಬನ್ನಿ! ಕೂತುಕೊಳ್ಳಿ! ತಾವು ನಿನ್ನೆ ಕೂಡ ಬಂದಿದ್ದಿರಂತ ಗೊತ್ತಾಗಲಿಲ್ಲ ತಾವು ಇಲ್ಲಿಂದ ಪಾದ ಬೆಳೆಸಿದ ಮೇಲೆ ಹೇಳಿದ ಹಾಳು ಜವಾನ ಈ ಊರಿನ ಜವಾನರೆಲ್ಲ ಶುದ್ಧ ಅಯೋಗ್ಯರು ಮನೆಕೆಲಸಕ್ಕೂ ಅಷ್ಟೆ, ಆಫೀಸ್ ಕೆಲಸಕ್ಕೂ ಅಷ್ಟೆ. ಈಗ ಕೂಡ ತಾವು ದಯಮಾಡಿಸಿದ್ದನ್ನ ನನಗೆ ಅವನು ಸರಿಯಾಗಿ ತಿಳಿಸಲೇ ಇಲ್ಲ ಹಾಗಲ್ಲ, ಹಾಗಲ್ಲ! ಇಂಥವರ ಹತ್ತಿರ ದಯದಾಕ್ಷಿಣ್ಯ ತೋರಿಸಲೇ ಕೂಡದ ತಾವು ಬಂದಿರುವುದನ್ನ ತಾವೇ ತಮ್ಮ ಗಂಟಲ ಮೂಲಕವೆ ತಿಳಿಸಬೇಕಾಗಿ ಬಂತಲ್ಲ! ಕ್ಷಮಿಸಿ ಏನು ಸಮಾಚಾರ? ಹೇಳೋಣವಾಗಲಿ ಅಯ್ಯೋ ಅಯ್ಯೋ ಅಂತಹ ಕೆಲಸಕಾರ್ಯಗಳೇನೂ ಇಲ್ಲ ನನಗೆ ಕೂತು ಕೊಳ್ಳಿ. ಹೇಳಿ ಇನ್ನೂ ಒಂದು ಗಂಟೆಕಾಲ ವಿರಾಮ ಇದೆ ಯಾವುದಕ್ಕೂ . ಯಾರ ವಿಷಯ? ಗುಂಡಪ್ಪನ ವಿಷಯವೇ? ಗುಮಾಸ್ತೆ ಗುಂಡಪ್ಪನೇ? ಯಾಕೆ? ಸಾಲ ಬಾಕಿ ಇದೆಯೇನು? ಅವನ ಮಗನಿಗೆ ಹೆಣ್ಣು ಕೊಡುವ ಯೋಚನೆಯೇ? ಅವನ ಪಕ್ಕದ ಮನೆ ಬಾಡಿಗೆಗಿದೆಯೇ? ಏನು? ಪುಸ್ತಕ ಬರೆಯುತ್ತಿದೀರಾ? ಗುಂಡಪ್ಪನನ್ನು ಕುರಿತು? ಚೆನ್ನಾಯಿತು! ನಿಮ ಗೇನು ಬಿಡಿ, ಬಿಳಿಕಾಗದ, ಕರಿಶಾಯಿ. ಬೇರೆಯ ಹೂವಿನ ಮೇಲೆ ಪದ್ಯ ಬರೆ

ದರು ಪುಟ್ಟಪ್ಪನವರು! 'ಬೆಕ್ಕು ಹಾರುತಿದೆ ನೋಡಿದಿರಾ,' ಅಂದರು ಬೇಂದ್ರೆಯವರು, ಆ ಮೇಲೆ ಅದರದೇ ಒಂದು ಅಣಕವಾಡು ಮಾಡಿ 'ಹಕ್ಕಿ ಹಾರುತಿದೆ' ಅಂತ ತಿದ್ದಿದರು, ಅನ್ನಿ! ಆದರೂ, ಅರಮನೆಯಿಂದ ಸೆರೆಮನೆಗೆ ಬಿದ್ದ ನಿಮ್ಮ ದೃಷ್ಟಿ ಈಗ ನೆರೆಮನೆಗೇ ಬತ್ತು ಬೀಳಲಿ! ಏನು? ಗುಮಾಸ್ತೆಗಳ ಜೀವನದಲ್ಲೂ ಹೇನು-ಜೇನುಗಳು ಇರುತ್ತವೆ, ಸ್ವಾರಸ್ಯವಿದೆ, ಅಂತೀರಾ? ಇರಲಿ! ನನಗೇನು ಅಭ್ಯಂತರವಿಲ್ಲ ಗುಂಡಪ್ಪನಿಗಿರುವುದೂ ಕೇವಲ ಅರೆ ಮನೆಯೇ! ಇನ್ನೊಂದರ್ಥ ಮೊನ್ನೆ ಭೋಗ್ಯವಾಯಿತು ಎಲ್ಲಾ ಬಿಟ್ಟ ಗುಂಡಪ್ಪ! ಯಾಕೆ? ಕಾಶೀಪತಿ, ಪಾಪ, ಬಹಳ ಸಭ್ಯ ಅವನೂ ಗುಮಾಸ್ತೆ, ಅಷ್ಟೇ ವಯಸ್ಸು! ಅವನನ್ನ ನಿಮ್ಮ ಪುಸ್ತಕದ ನಾಯಕನಾಗಿ ಮಾಡಿದರ ಶಾಯಿ ಚೆಲ್ಲಿದ್ದು ಸಾರ್ಥಕ

ಗುಂಡಪ್ಪನ ವಿಚಾರ ನನಗೇನೂ ತಿಳಿಯದು ನಾನು ಇಲ್ಲಿಗೆ ವರ್ಗವಾಗಿ ಈಗ ಆರೇ ತಿಂಗಳು ನನ್ನ ಹಿಂದೆ ಈ ಸೀಟಿನಲ್ಲಿದ್ದರಲ್ಲಾ ನಾರಣಯ್ಯನವರು ಅವರು ಇಲ್ಲಿಯ ಅವ್ಯವಸ್ಥೆಗಳನ್ನೆಲ್ಲ ನನಗೆ ತಿಳಿಸಿದ್ದರು, ಬೆಂಗಳೂರಿನಲ್ಲೇ ಅವರು ಹೇಳಿದ್ದಕ್ಕೆ ಸರಿಯಾಗಿ, ನಿಮ್ಮ ಗುಂಡಪ್ಪ ಮಹಾಶಯರು ಬಸ್‌ಸ್ಟಾಂಡಿಗೆ ಬರಲೇ ಇಲ್ಲ! ಬಂದಿದ್ದ ಇತರೇ ಗುಮಾಸ್ತೆಗಳನ್ನ ವಿಚಾರಿಸಿದೆ ಯಥಾಪ್ರಕಾರ ಒಂದು ಕಾಕಮ್ಮನ ಕಥೆ, ಸಿದ್ಧ 'ವಂಚಕನಿಗೆ ಲಂಚಕ ಸಾಕ್ಷಿ,' ಅಂದ ಹಾಗೆ ಗುಂಡಪ್ಪನ ಅಜ್ಜಿಗೆ ಖಾಯಿಲೆ, ಅಂದ ಒಬ್ಬ. ಇದ್ದೇ ಇದೆಯಲ್ಲಾ, ಯಾವ ಊರಿಗೆ ಹೋಗಲಿ ಯಾವ ಇಲಾಖೆಯಲ್ಲಾಗಲಿ ಗುಮಾಸ್ತೆಯರಿಗೂ ಅಜ್ಜಿಯರಿಗೂ ಗಂಟು! ಒಬ್ಬೊಬ್ಬನಿಗೂ ಎಂಟೋ ಹತ್ತೋ ಇರುತ್ತವೆ, ಹಾಸಿಗೆ ಹಿಡಿದು ಮಲಗಿರುತ್ತವೆ ಸಮಯ ಸಂದರ್ಭ ನೋಡಿಕೊಂಡು ಹೊರಟೆ ಅಂತ ಹೆದರಿಸುತ್ತವೆ ಆಡಿಟರ್ ಬಂದ ದಿವಸ ಒಬ್ಬರು ಗೋವಿಂದ! ಎಂಟು ಹತ್ತು ದಿನ ಒಟ್ಟಾಗಿ ರಜ ಸಿಗುವ ಸಂದರ್ಭ ಒದಗಿದರೆ, ಒಬ್ಬರು ಹರಹರ! ನಮ್ಮ ಮನೆಯಲ್ಲಿ ಕಾಶಿಯಾತ್ರೆ ಅಂದರೆ ಸರಿ, ಗುಮಾಸ್ತೆ ಮನೆಯಲ್ಲಿ ವೈಕುಂಠಯಾತ್ರೆ!.

ಬಸ್‌ಸ್ಟಾಂಡಿನಲ್ಲಿ ನಾನು ಆ ಗುಮಾಸ್ತೆಗಳ ಹತ್ತಿರ ಏನೂ ಹೇಳಲಿಲ್ಲ ಅವರು ಎಷ್ಟರವರು? ಟಿಕೆಟ್ ಕೇಳಿದ ಕಂಡಕ್ಟರ ಮೇಲೆ ಮಾತ್ರ ಕೊಂಚ ರೇಗಿದೆ. ನಿಮ್ಮ ಗುಂಡಪ್ಪನ ಸವಾರಿ ಬಂಗಲೆ ಹತ್ತಿರವೂ ಸಾಮಾನು ಇಳಿಸು

ವುದಕ್ಕೆ ಚಿತ್ತೈಸಲಿಲ್ಲ! ಆಗ, ಕಾಶೀಪತಿ ಕೊಂಚ ಕುಚೋದ್ಯ ತೆಗೆದ "ಗುಂಡಪ್ಪನಿಗೇನು ಸಾರ್, ಹ್ಯಾಗಾದರೂ ಬಚಾವಾಗುತ್ತಾನೆ ಇಲ್ಲಿಗೆಲ್ಲ ಆತನೇ ಹಳೇ ಹುಲಿ" ಅಂದ ನಾನು ಸುಮ್ಮನಿದ್ದೆ ಬಸ್‌ಸ್ಟ್ಯಾಂಡಿನಲ್ಲಾದ ಪ್ರಶ್ನೋತ್ತರ ಕಿವಿಗೆ ತಾಕುತ್ತಲೂ, ಮರುದಿನ ಆಸಾಮಿ ಆಫೀಸಿಗೇ ಚಕ್ಕರ್! ಅಜ್ಜಿಗೆ ಖಾಯಿಲೆ ಎಂಬುದನ್ನೇ ಸಾಧಿಸಿ ರಜಕ್ಕೆ ಚೀಟಿ ಬರೆದುಕೊಂಡ! ಹೇಗಿದೆ? ನಾನು ಬೆಂಗಳೂರಲ್ಲಿದ್ದಾಗ ಅಲ್ಲೊಬ್ಬ ಸಿಕ್ಕಿದ್ದ ನನಗೆ—ವ್ಯಾಸ ರಾಯ ಅಂತ ಇದೇ ಚಾಳಿ ಅವನಿಗೂ ನಿಮ್ಮ ಗುಂಡಪ್ಪನ ಹಾಗೇನೆ ವ್ಯಾಸರಾಯನ ಬರವಣಿಗೇನೂ! ಗುಂಡಪ್ಪನದೂ ಅದೇ ಇಂಗ್ಲೀಷು, ಅದೇ ಧಾಟಿ! ಕೊಂಚ ಬದಲಾಯಿಸೋಣ, ಕೊಂಚ ಸೇರಿಸೋಣ, ತೆಗಿಯೋಣ, ಊಹುಂ! ತದ್ವತ್! ಮಕ್ಕಿಕಾ ಮಕ್ಕಿ! ಏಗೋದು ಹೇಗೆ ಇವನ ಸಂಗಡ? ರೇಗೋದಿಲ್ಲವೇ ಹೇಳಿ ಎಂಥವನಿಗಾದರೂ ಬೆಳಿಗ್ಗೆ ಖಾಲಿ ಸೀಸಿ ಹಿಡಿದು ಕೊಂಡು ಗವಾರನ ಹಾಗೆ ಅಂಗಡಿಬೀದಿಯಲ್ಲಿ ನಿಂತಿದ್ದ ಅಂತ ಕಾಶೀಪತಿ ಬೇರೆ ಹೇಳಿದ, ಕುಂಟುನೆಪಕ್ಕೆ ಅದೊಂದು ಕಾಲು! ಕಾಶೀಪತೀನೂ ಇವನೂ ಒಟ್ಟಿಗೆ ಓದಿದವರಂತೆ ರಜ ಕೊಡೋದುಕ್ಕಾಗುವುದಿಲ್ಲ ಅಂತ ಬರದೇಬಿಟ್ಟೆ

ಇಂತಹ ದುರಹಂಕಾರಿಗಳನ್ನೆಲ್ಲ ಚಿಗುರಿನಲ್ಲೇ ಚಿವುಟಬೇಕು. ನಾನು ರಜ ಕೊಡಲಿಲ್ಲವಾಗಿ, ಆ ದಿನವೇ ಮಧ್ಯಾಹ್ನ ಎರಡು ಗಂಟೆ ಹೊತ್ತಿಗೆ ಆಸಾಮಿ ಹಲ್ಲು ಕಿರಿಯುತ್ತಾ ಆಫೀಸಿನಲ್ಲಿ ಹಾಜರ್! ಅವತ್ತು ಶುಕ್ರವಾರ ರಾಹುಕಾಲ ಪ್ರಾರಂಭವಾಗಲಿ, ಅಂತ ಕಾದಿದ್ದು ೩ ಗಂಟೆಗೆ ಸರಿಯಾಗಿ "ಕರೆದುಕೊಂಡು ಬಾರೊ" ಅಂದೆ ಬಂದ ನಿಮ್ಮ ಭೂಪತಿ–ರಂಗ! ಎತ್ತರವಾದ ಆಳು, ಟೊಳ್ಳುಮುಖ, ಅರೆಮುರಿದ ಮೂಗು, ಹಣೆಯ ಮೇಲೆ ತಾಪತ್ರಯದ ಆಳವಾದ ಗೆರೆ, ೩೦, ೩೩ ಅಂತಿದ್ದ ನನಗೆ, ಆಗ ೪೨, ೪೩ ಇರಬಹುದು ಅನ್ನಿಸಿತು ನಿಮಗೆ ಗೊತ್ತಿದೆಯಲ್ಲ ಅವನ ಆಕಾರ, ನಿಮ್ಮ ಕೂಡ ಏನು ವಿವರಿಸುವುದಿದೆ? ಕೊಂಚ ಅಯ್ಯೋ ಎನಿಸಿದರೂ ಕೂಡ ನಾನು ಬಿಗಿಯಾಗಿಯೇ ಇದ್ದೆ ಸಡಿಲವಾದರೆ ಸರ್ವನಾಶ ಅಂತ ನಾರಣ ಯ್ಯನವರೇ ಹೇಳಿದ್ದರು. ಕುಚೇಲನಾಗಿರುವ ಕಾಶೀಪತಿಗೂ ಕೂಡ ನಿಮ್ಮ ಗುಂಡಪ್ಪ ಆಗಾಗ ಬತ್ತಿ ಇಡುತ್ತಿದ್ದ ಅಂದಮೇಲೆ ನಮ್ಮನ್ನು ಬಿಟ್ಟಾನೆಯೇ? ಹೇಳಿ.

ಗುಂಡಪ್ಪನ ದುರಹಂಕಾರ ಎಷ್ಟು ಅಂತೀರೋ? ಸ್ವಚ್ಛವಾಗಿ ಒಗೆದುಟ್ಟ ಬಿಳಿಸಂಚಿ, ಕೆಂಪಂಚಿನದು, ಅವನ ಲಕ್ಷಣಕ್ಕೆ! ಯಾರಿಗೂ ಇಲ್ಲದ ಶ್ವೇತಾಂಬರ! ಅಂಗಿಯೂ ಅಷ್ಟೆ. ಹೊಸದಾಗಿ ಇಸ್ತ್ರಿಮಾಡಿದ್ದು ಪೇಟವನ್ನಂತೂ ಸಿಂಬಿ ಅಂತ ಹೇಳುವ ಹಾಗೆಯೇ ಇಲ್ಲ ಆಫೀಸಿನಲ್ಲಿ ಅವನೊಬ್ಬನೇ ಬಿ ಎ. ಐವತ್ತೆರ ಮೇಲೆ ಅವನೊಬ್ಬನಿಗೇನೆ ಸಂಬಳ ಅವನಿಗೆ ನನ್ನ ಕಣ್ಣು ಕುಕ್ಕಬೇಕು ಎಂಬ ಹಟ ನೋಡಿ ಆಫೀಸೇನು ಅವನ ಮಾವನ ಮನೆಯೇ? ಅವತ್ತೇನು ಅವನ ವರ್ಧಂತಿಯೇ? ಹತ್ತರಲ್ಲಿ ಹನ್ನೊಂದು, ಗುಂಪಿನಲ್ಲಿ ಅವನೂ ಒಬ್ಬ ಗುಮಾಸ್ತೆ ಎಂಬ ಪರಿಜ್ಞಾನ ಬೇಡವೆ? ಪೆದ್ದ! ಮನೆಯಲ್ಲಿ ಮುದುಕಿಗೆ ಖಾಯಿಲೆ ಅಂತಾನೆ, ಮೋಜಿಗ ಮಾತ್ರ ಕಡಿಮೆ ಇಲ್ಲ, ನೋಡಿದಿರಾ! ಆ ಹಾಳು ವ್ಯಾಸರಾಯನೂ ಹೀಗೆಯೇ! ಒಂದು ದಿನವಾದರೂ, ಅಪ್ಪಿ ತಪ್ಪಿ, ಅಗಸ ಬರಲಿಲ್ಲ ಅಂತ ಕೊಳೆಬಟ್ಟೆ ಉಡುವುದಿಲ್ಲ ಏನು ಷೋಕಿನ್ನೋ ಕಾಣೆ ಇವರಿಗೆ! ಕಾಶೀಪತಿ, ಪಾಪ, ತನ್ನ ಕಥೆಯನ್ನೆಲ್ಲ ಬೆಳಗ್ಗೆ ಹೇಳಿಕೊಂಡಿದ್ದ ಹಾವಿನ ಹೆಡೆ ಕೆಳಗಿನ ಕಪ್ಪೆ, ಅಂದರ ಅವನು ವೈರಾಗ್ಯ ಅಂದರ ಅವನದು ಅವನ ಬಟ್ಟೆಬರೆ ಕೂಡ ಆಗಲೇ ಅರ್ಧ ಕಾಷಾಯವಾಗಿತ್ತು ಕೈಶುದ್ಧವಾಗಿದ್ದರೆ, ಇಷ್ಟೊಂದು ಸಾಮಾನು ಎಲ್ಲಿಂದ ಸಿಗಬೇಕ, ಗುಂಡಪ್ಪನಿಗೆ?

ಒಳಗೆ ನುಗ್ಗಿದವನು ನೆಟ್ಟಗೆ ನನ್ನ ಕುರ್ಚಿಯ ಹತ್ತಿರಕ್ಕೇನೆ ಸರಸರನ ಬಂದ ಹುಂ.. ಇಲ್ಲಿಯತನಕ .ಇಲ್ಲಿ ಇಲ್ಲಿಯತನಕ' ಬೆಳಗ್ಗೆ ಕಾಶೀಪತಿ ಬಂದು ನಿಂತ ಜಾಗಕ್ಕಿಂತ ಒಂದು ಮಾರು ಈಚೆ' ಯಾಕೆ ಅಂತೀರೋ? ಹೊಟ್ಟೆ ತುಂಬ ತುಂಬಿದ್ದ ಕೊಬ್ಬು, ದುರಹಂಕಾರ, ಬಿ ಎ, ಐವತ್ತೆರಡು ರೂಪಾಯಿ— ಎಂಬ ಮದ ಕಾಶೀಪತಿ ನಿಂತಕಡೆ ನಿಂತರೆ ಇವನ ಕಿರೀಟ ಏನಾದರೂ ಕಳಚಿ ಬೀಳುತ್ತದೆಯೇ? ಇವನ ಸಂಬಳವನ್ನು ಯಾರಾದರೂ ಖೋತಾಮಾಡುತ್ತಾರೆಯೇ? ಒಂದು ಮಾರು ಈಚೆ ಬಂದರೆ, ಇವನ ಸಾಮ್ರಾಜ್ಯ ಉಳಿಯುತ್ತದೆಯೇ? ಒಂದು ಮಾತು ಹೇಳಿಬಿಡುತ್ತೇನೆ ಕೈ ಕೆಳಗಿನ ಗುಮಾಸ್ತೆಯರ ಗುಣಗಳನ್ನು ಇಂಥಾ ಸಣ್ಣಪುಟ್ಟ ಚರ್ಯೆಗಳಿಂದ ನಾವು ನಿರ್ಧರಿಸಿಬಿಡಬಹುದು ಗರಗಸದ ಕಾರ್ಖಾನೆಯಲ್ಲಿ ಕುಯ್ಯೋ ಮರ್ರೋ ಅಂತ ದಿಮ್ಮಿ ದಿಮ್ಮಿಗಳೇ ಸೀಳಿ ಬೀಳುತ್ತಿರುವಾಗ, ಅಲ್ಲೇ ಕಾರ್ಖಾನೆ

ಅಂಗಳದಲ್ಲೇ ಬೆಳೆದಿರುವ ಮರಗಳು ಗಾಳಿಯಲ್ಲಿ ಕೈಬೀಸಿ ನಗುವ ಹಾಗೆ, ಸುತ್ತಮುತ್ತ ಸೊಂಟ ಮುರಿದುಕೊಂಡು ಕೆಲಸಮಾಡುವ ಗುಮಾಸ್ತೆಯರ ಗೋಳನ್ನು ಕಿವಿಗೆ ತುಂಬಿಕೊಳ್ಳದೆ, ತನ್ನ ಅಜ್ಜಿಯ ಖಾಯಿಲೆಯನ್ನೇ ಲಜ್ಜೆ ಯಿಲ್ಲದೆ ಸಾರುತ್ತಾ, ತನ್ನ ಮಟ್ಟ ಅವರ ಮಟ್ಟ ಎಂದು ಬಡಿದಾಡುವ ಈ ಭೇತಾಳಗಳನ್ನು ಕಂಡರೆ ನನಗೆ ರೇಗುತ್ತೆ! ನಿಮಗೆ ಹೇಗೋ ಗೊತ್ತಿಲ್ಲ. ನನಗಂತೂ ಸಹನೆಯೇ ಇರುವುದಿಲ್ಲ

ಆ ವ್ಯಾಸರಾಯನೂ ಅಷ್ಟೆ. ಅಂತಸ್ತು, ಸ್ಥಾನ, ಮಾನ ಅಂತ ಸದಾ ವಾಗ್ವಾದ ಹೂಡುತ್ತಿದ್ದ. ದಿನ ಬೆಳಗಾದರೆ ತನ್ನ ಮೇಜಿನ ಮೇಲಿನ ಒಟ್ಟಿ ಹರಕನ್ನು ಹೊಲಿಸಬೇಕು, ತನ್ನ ಶಾಯಿಕುಡಿಕೆಗೆ ಹೆಚ್ಚು ನೀರು ಬಿಡಿಸಬೇಕು, ತನ್ನ ಕುರ್ಚಿಗೆ ನಾಲ್ಕುಕಾಲು ಸಾಲದು ಅಂತ ಅರ್ಜಿ ಒರೆದು ನನ್ನ ಮುಂದಿಡು ತ್ತಿದ್ದ. ತಾನು ಹೆಡ್‌ಕ್ಲಾರ್ಕ್ ಅಂತ ತಾನೇ ಬೋರ್ಡ್ ಒರೆದು ತಲೆಯ ಮೇಲೆ ಗೋಡೆಯಲ್ಲಿ ಮೊಳ ಹೊಡೆದುಕೊಂಡಿದ್ದ

ಇಲ್ಲೂ ಅಂತಹವನೊಬ್ಬ ಸಿಕ್ಕಿದ್ದರಿಂದ ನನಗೆ ಸ್ವರ್ಗದ ಸಂಕಟವೇ ಮರೆತುಹೋಯಿತು. ಸರಿ! ಕರೆಸಿದ ಮೇಲೆ ಸುಮ್ಮನಿರುವುದಕ್ಕಾಗುತ್ತ ದೆಯೇ? ಅವನ ಬೇಳೆಕಾಳು ನನ್ನ ಹತ್ತಿರ ಬೇಯುವುದಿಲ್ಲ ಅಂತ ಅವನಿಗೆ ಸ್ಪಷ್ಟಪಡಿಸುವುದಕ್ಕಾಗಿಯಾದರೂ ಎರಡು ಮಾತನಾಡಬೇಕೆನಿಸಿತು. ನಾರ ಣಯ್ಯನವರಿಗೆ ಅದ್ವೈತ, ಅಷ್ಟಾವಕ್ರ, ಅಷ್ಟಾಂಗಹೃದಯ ಅಂತ ಏನೇನೋ ಹುಚ್ಚಿತ್ತು. ಗುಂಡಪ್ಪನ ತಂದೆಗೆ ಆಯುರ್ವೇದದಲ್ಲಿ ಪರಿಶ್ರಮ ಅಂತ ಹೇಳಿ, ನಾರಣಯ್ಯನವರು ಅವನ ಮೇಲೆ ಅನುಗ್ರಹ ಬುದ್ಧಿ ಇಟ್ಟಿದ್ದರು ಅಂತ ಕಾಶೀ ಪತಿ ಹೇಳಿದ್ದ. ನನ್ನ ಹತ್ತಿರ ಅಳಲೆಕಾಯಿಗಿಂತ ಬಲವಾದ ವಿರೇಚನಗಳಿವೆ ಅಂತ ಗುಂಡಪ್ಪನಿಗೆ ತಿಳಿಸಬೇಕೆಂದು ತೋರಿತು. ಅದಕ್ಕಾಗಿ, "ಏನ್ರಿ! ಗುಂಡಪ್ಪನವರೇ! ನಿಮ್ಮ ಆಟ ಇನ್ನು ಸಾಗುವ ಹಾಗಿಲ್ಲವಲ್ಲ" ಅಂದೆ ವ್ಯಾಸರಾಯನಿಗೂ ಕೂಡ ನಾನು ಎಂದೂ ಹೀಗೆ ಸಿಡಿಲು ಬಡಿದಿರಲಿಲ್ಲ ಕೊಂಚ ಹೊತ್ತು ಗುಂಡಪ್ಪ ಮಂಕನಂತೆ ಪಿಳಪಿಳನೆ ಕಣ್ಣುಬಿಟ್ಟ. ಅದುವರೆಗೂ ಯಾರೂ ಅವನಿಗೆ ಅಷ್ಟು ನೇರವಾಗಿ ಅಂದಿರಲಿಲ್ಲ ಅಂತ ಕಾಣಿಸಿತು. ಗುಳ ಕ್ಕನೆ ಏನೇನೋ ನುಂಗಿದ. ಆಮೇಲೆ ಒಣಗಿದ ತುಟಿಯನ್ನು ನಾಲಿಗೆ ನೀಡಿ ನೆನೆಸಿಕೊಂಡು "ತಪ್ಪಾಯ್ತು, ಸಾರ್, ಒಸ್‌ಸ್ಟ್ಯಾಂಡ್ ಹತ್ತಿರ ಬರದೆ ಇದ್ದದ್ದು"

ಅಂದ ನೋಡಿದಿರಾ? ನಿಮ್ಮ ಗುಂಡಪ್ಪನ ವಕ್ರಬುದ್ಧಿ ಎಲ್ಲಿಯವರೆಗೆ, ಎಷ್ಟು ದೂರ ಓಡಿತು ಅಂತ. ನನಗೇನು ಕಾಸಿಗೆ ಕಡಿಮೆಯೇ, ಕೂಲಿಗಳಿಗೆ ಬರವೇ, ಸರ್ಕಾರದಿಂದ ನನಗೆ ಭತ್ಯ ಕೊಡೋದಿಲ್ಲವೇ, ನಾನು ಹೋದ ಹೋದ ಕಡೆಯಲ್ಲೆಲ್ಲ ಗುಂಡಪ್ಪನೇ ನನ್ನ ಗಂಟುಮೂಟೆ ಹೊರುತ್ತಾನೆಯೇ? ನನಗೇನೇ 'ಡೋಸು' ಕೊಡುವವನು, ಕಾಶೀಪತಿ ಕುತ್ತಿಗೆ ಮೇಲೆ ಸವಾರಿಮಾಡದೆ ಇರುತ್ತಾನೆಯೇ! ಸಾಹೇಬರ ಬಾಯಿಗೇನೆ ಕುಕ್ಕೆಕಟ್ಟುವ ಪ್ರಯತ್ನ ಅಲ್ಲವೆ ಅವನದು? ಆದರೆ ನಾನು ಸುಮ್ಮನಿರುತ್ತೇನೆಯೇ, ಅವನ ಮಂತ್ರಕ್ಕೆ? "ಬಡಾಯಿ ಕೊಚ್ಚುವುದಕ್ಕೆ ಬರುತ್ತೆ ಅಂತ ಲಡಾಯಿಗೆ ಬರಬೇಡಯ್ಯ ಹೋಗಿ, ಕೈಬೆಚ್ಚಗೆ ಮಾಡಿಕೊಳ್ಳದೆ ಕೆಲಸ ಮಾಡು" ಅಂದೆ 'ಕೈಬೆಚ್ಚಗೆ' ಎಂಬ ಸದ್ದು ಕಿವಿಗೆ ಬೀಳುತ್ತಲೂ ಬಾಗಿಲ ಹತ್ತಿರ ಹೋಗುತ್ತಿದ್ದವನು ಹಿಂದಕ್ಕೆ ತಿರುಗಿ ಸರಕ್ಕನೆ ನನ್ನ ಕಡೆ ನೋಡಿದ "ನನ್ನನ್ನೇನು ನೋಡುತ್ತೀಯಾ? ಹೆಗಲ ಮುಟ್ಟಿ ನೋಡಿಕೊ" ಅಂದೆ ಅವನಿಗರ್ಥವಾಗಲಿಲ್ಲ ಹಾಗೆಯೇ ತಾರಾಡುತ್ತಾ ತೂರಾಡುತ್ತಾ ಹೊರಕ್ಕೆ ಹೋದ

ಇದೇ, ನಮ್ಮ ಪ್ರಥಮ ಸಮಾಗಮ! ಅಲ್ಲಿಂದೀಚೆಗೆ ಕೆಲವು ದಿವಸಗಳ ತನಕ ಅವನಿಗೂ ನನಗೂ ಅಷ್ಟಕ್ಕಷ್ಟೆ ಆಫೀಸಿನಲ್ಲಿ ಮಾತ್ರ ಆಸಾಮಿ ಬಲು ಹುಷಾರಿ! ಬೀಸುವ ದೊಣ್ಣೆ ತಪ್ಪಿಸಿಕೊಳ್ಳುವ ಉಪಾಯ ಹುಡುಕುವುದೇ ಅವನ ಕೆಲಸ. ಯಾಕೆ? ನನ್ನಿಂದ ಎರಡು ಮಾತು ಬಿಸಿಬಿಸಿಯಾಗಿ ಕಿವಿಗೆ ಸುರಿದುಕೊಂಡರೆ ಇವನಿಗೇನು ಮಹಾ ನಷ್ಟ; ನನ್ನಂತಹವರಿಗೆ ಎಷ್ಟೋ ಅಪ್ಯಾಯಮಾನ ಅದು. ಆದರೂ, ಅದಕ್ಕೆ ಬೇಕಾದ ಸಹನೆ ಇಲ್ಲ ನನ್ನ ನಾಲಿಗೆ ಏಟಿಗೆ ಸಿಗಬಾರದು ಅಂತ ಅವನ ಪ್ರಯತ್ನ! ಆದರೆ, ಅವನ ವಿಚಾರವೆಲ್ಲ ನನಗೆ ಕಾಶೀಪತಿಯಿಂದ ತಿಳಿಯುತ್ತಾ ಬಂತು ಒಂದು ದಿವಸ ಅವನು ನನ್ನ ಮನೆಗೆ ಪೇಪರ್ ತರುತ್ತಿದ್ದ ಆಫೀಸ್ ಜವಾನನ್ನ ಹಿಡಿದು ನಿಲ್ಲಿಸಿ, 'ಮಾರುತಿ ಪ್ರಶ್ನೆ'ಗಳು ಹೇಳುವವರ ವಿಳಾಸ ಬರೆದುಕೊಂಡನಂತೆ! ನನಗೆ ಯಾವಾಗ ವರ್ಗ ಅಂತ ಆಂಜನೇಯನನ್ನ ಕೇಳುವುದಕ್ಕಿರಬೇಕು. ಸಿಕ್ಕಿತು ಒಂದು ನೆಪ. ಕರೆಸಿದೆ, ಮರುದಿನವೇ. "ಯಾರ ಮನೆ ಹಾಳು ಮಾಡೋಣ ಅಂತ ಮಾರುತಿಗೆ ಪ್ರಶ್ನೆ ಹಾಕಿದೆ?" ಅಂದೆ "ನನ್ನ ಭಾವನ ತಮ್ಮ." ಅಂತ ಒರಲುವುದಕ್ಕೆ ಮೊದಲುಮಾಡಿದ. "ಸರ್ಕಾರಕ್ಕೆ

ರಿಪೋರ್ಟ್ ಮಾಡಿಬಿಡುತ್ತೇನೆ ನಿನ್ನ ಹಾಳು ಚಾಳಿ, ನಿನ್ನ ಭೂತಸಂಚಾರ, ನಿನ್ನ ವಾತಪಿತ್ತ, ನಿನ್ನ ಮಾಟ ಮಂತ್ರ ಎಲ್ಲಾನೂ" ಎಂದು ಗದರಿಸಿದೆ. ಅದಕ್ಕೆ ನಿಮ್ಮ ಆಷಾಢಭೂತಿ ಏನು ಹೇಳಿದ ಗೊತ್ತೆ? "ಇಲ್ಲ ಸಾರ್, ನನ್ನ ಭಾವನ ತಮ್ಮ ಆ ಮಾರುತಿ ಪ್ರಶ್ನೆಗಾರರ ಪಕ್ಕದ ಮನೆಯಲ್ಲಿ ಬಾಡಿಗೆಗಿದ್ದ. ಅವನಿಗೆ ಪತ್ರ ಬರೆಯಬೇಕಿತ್ತು, ಮನೆ ನಂಬರ್ ಮರೆತುಹೋಗಿತ್ತು "ಅಂತ" ಅಷ್ಟರಲ್ಲೇ ಒಂದು ಬುರುಡೆ ಕೊರೆದ! ಎಲ್ಲಾದರೂ ಉಂಟೆ? ಮಾರುತಿಪ್ರಶ್ನೆಯವರ ಪಕ್ಕದ ಮನೆಯಲ್ಲಿ ಯಾರಾದರೂ ಬಾಡಿಗೆಗೆ ಇರುತ್ತಾರೆಯೇ? ಸ್ವಂತ ಮನೆಯಾದರೆ ನಿರ್ವಾಹವಿಲ್ಲ ನೆರೆಮನೆಯಲ್ಲಿ "ಆಂಜನೇಯಾ ರಾಮನ ಬಂಟ! ತಿರುಪತಿಯೆಂಬುದು ವೈಕುಂಠ" ಅಂತ ಸದಾ ಕರ್ಣವಿಭಜನೆಯಾಗುತ್ತಿದ್ದರೆ, ನಾವೂ ಬಾಲವಾಡಿಸದೆ ನಿಂತಿರಲು ಸಾಧ್ಯವೆ? ಅದೂ ಅಲ್ಲದೆ, ಭಾವನ ತಮ್ಮನೊಂದಿಗೆ ಈಗಿನ ಕಾಲದಲ್ಲಿ ಯಾರಾದರೂ ಪತ್ರವ್ಯವಹಾರವಿಟ್ಟುಕೊಂಡಿರುತ್ತಾರೆಯೇ? ನನ್ನ ಭಾವನಿಗೇನೇ ನಾನು ಪತ್ರಬರೆಯುತ್ತಿಲ್ಲ, ನನಗಿಂತ ಇವನಿಗೆ ಹೆಚ್ಚು ಬಂಧುಪ್ರೇಮವೋ? ಅಂಥಾದ್ದೇನು ರಾಜಕಾರ್ಯ? ಪತ್ರ ಹಾಕುವ ಚಾಳಿ ಬೆಳೆದರೆ, ಪುಷ್ಪಂ ಫಲಂ ಅಂತ ಬೆಳೆದು ತೋಯದಲ್ಲಿ ಮುಳಗಿಸಿ ನೋಲಾಗುವಷ್ಟು ಸಾಲದಲ್ಲಿರಿಸುವುದಿಲ್ಲವೆ? ಕಡೆಗೆ, ಇನ್ನೊಂದು ಮಾತು ಹೇಳಿಬಿಡುತ್ತೇನೆ, "ಇವನ ಭಾವನಿಗೆ ತಮ್ಮ ಇದಾನೆಯೋ ಇಲ್ಲವೋ, ಆ ಸಂತಾನಗೋಪಾಲನೇ ಬಲ್ಲ" ಅಂತ ಕಾಶೀಪತಿ ಹೇಳಿದ್ದ ನೋಡಿದಿರಾ, ಹೇಗಿದೆ, ಸುಳ್ಳಿನ ಸೌಧ!

ಈಚೆಗೆ ಯಾಕೊ ನಿಮ್ಮ ಗುಂಡಪ್ಪ ನನ್ನನ್ನು ಕಂಡಾಗಲೆಲ್ಲ ಹಿಂದಿನ ಸಲಾಮಿನ ಜೊತೆಗೆ ಹಲ್ಲು ಕಿರಿಯುವುದಕ್ಕೂ ಬೇರೆ ಪ್ರಾರಂಭಿಸಿದ್ದಾನೆ! ಬೂಟಾಟಕೆಯ ಕಿರಿತ, ಅವಸರಕ್ಕೆ ಅಣಿಮಾಡಿದ ಅವಲಕ್ಷಣ ಕಿರಿತ ನನಗೆ ಮೈಯೆಲ್ಲ ಉರಿ ಹತ್ತುತ್ತೆ, ಅವನ ಮುಸುಡಿ ಮೇಲೆ ಆ ನಗೆಯ ಹೂಗೆ ಮಿನುಗುವಾಗ! ಅವನ ಅಳಲೇಕಾಯಿ, ಅವನ ಪ್ರಾಣದೇವರು, ಅವನ ಡಿಗ್ರಿ, 'ಕಾಶೀಪತಿಯಾದರೂ ಈ ಶನೀಶ್ವರ ತಪ್ಪುವುದಿಲ್ಲ' ಎಂಬ ಅವನ ಪರಪೀಡನೋತ್ಸಾಹ, ಎಲ್ಲವೂ ಆ ಕಿರಿತದ ಬೆಳಕಿನಲ್ಲಿ ಮತ್ತಷ್ಟು ಸ್ಪಷ್ಟವಾಗಿ ನನಗೆ ಕಾಣಿಸುವುವು ಅವನ ಎರಡೂ ತುಟಿಗಳ ಮೂಲೆಗಳನ್ನೂ ಅವನಿಗೆ ತಿಳಿಯದೆಯೇ ಯಾರೊ ದುರಾತ್ಮರು ಮೇಲಕ್ಕೂ ಕೆಳಕ್ಕೂ ಒಮ್ಮೆಲೆ ಎಳೆದು ಹಲ್ಲಿನ ಸಾಲನ್ನು

ಮಿಂಚಿಸಿ ಮತ್ತೆ ಸರಿಪಡಿಸಿದ ಹಾಗಿರುವುದು. ಆ ಕಿರಿತದ ವೈಖರಿ ದಂತಚ್ಛವಿಯು ಸಂಗಡಲೇ ಅವನ ಕಣ್ಣುಗುಡ್ಡೆಗಳೆರಡೂ ಪಳಕ್ಕನೆ ಹೊರಬಂದು ಗುಳಕ್ಕನೆ ಒಳಕ್ಕೆ ಹೋಗುವುದರಿಂದ, ಆ ಕಿರಿತವನ್ನು ಕಂಡಕೂಡಲೇ ನನಗೆ ಕಣ್ಣುನೋವು ಬರುವುದು. ಕಿರುನಗೆ, ಮೆಲುನಗೆ, ತಿಳಿನಗೆ ಮುಂತಾದವು ನಿಮ್ಮ ಕವಿಗಳು ವರ್ಣಿಸುವ ಹಾಗೆ ಬಂದರೆ ಚೆನ್ನ. ಅವು ಆಕಸ್ಮಿಕವಾಗಿ, ಸಹಜವಾಗಿ, ಸರಳವಾಗಿ ಬರಬೇಕು, ಅಲ್ಲವೆ? ಹೂವು ಅರಳಿದಂತೆ ನೈಸರ್ಗಿಕ ಪರಿಶುದ್ಧತೆಯಿಂದ ಮೂಡಬೇಕು, ಅಲ್ಲವೆ? ಮೋಡಗಳ ನಡುವೆ ಎಳೆಬಿಸಿಲೋ ಇಳಿಬಿಸಿಲೋ ತೂರಿ ಬಂದಂತೆ ಬಂದರೆ ಚೆನ್ನ. ನಿಮ್ಮ ಗುಂಡಪ್ಪನ ಈಚಿನ ಕಿರಿತ ಹಾಗಲ್ಲ. ಅದಕ್ಕೆ ಬೆಳಗ್ಗೆ, ಮುಂಜಾನೆ, ಸಂಜೆ, ನಡುಹಗಲ, ನಡುರಾತ್ರಿ ಎಂಬ ಕಾಲವ್ಯತ್ಯಾಸವಿಲ್ಲ. ಪೇಟೆ, ಕೋಟೆ, ಅರಮನೆ, ಸೆರೆಮನೆ ಎಂಬ ಸ್ಥಾನವ್ಯತ್ಯಾಸವಿಲ್ಲ. ಒಂದೇ ಅಳತೆಗೆ ಒಂದೇ ಪೊಳಪಿಗೆ ಹೇಳಿ ಮಾಡಿಸಿದ ಕಿರುನಗೆ. ತುಟಿಯ ತೆರೆಯನ್ನು ಸರಿಸುವುದು, ಮೂರು ಎಣಿಸುವಷ್ಟು ಹೊತ್ತು ಹಲ್ಲನ್ನು ಬೆಳಗಿಸುವುದು, ಮತ್ತೆ ತೆರೆ ಹಾಕುವುದು, ಇದೇ ಅದರ ಯಾಂತ್ರಿಕ ಗತಿ. ತಂತ್ರವಲ್ಲದೆ ಆ ಕಿರಿತದಲ್ಲಿ ಸ್ವತಂತ್ರಮನೋಭಾವವೇ ಇಲ್ಲ. ಅದು ಸಮೋಭಾವದ ಆಭಾಸ. ಜೊತೆಗೊಂದು ಸಲಾಮು ಬೇರೆ! ನಮಸ್ಕಾರ ಮಾಡುವುದಕ್ಕೇನು ಧಾಡಿ ಇವನಿಗೆ? ಎರಡು ಕೈಗಳಿಗೂ ನನ್ನ ದೆಸೆಯಿಂದ ತ್ರಾಸಕೊಡಬೇಕಲ್ಲ ಎಂಬ ಜಿಗುಪ್ಸೆಯೋ ಏನೋ! ಸಲಾಮಾದರೆ ಮತ್ತೊಂದು ಅನುಕೂಲ ಬೇರೆ—ನನ್ನ ಗುರು ತನ್ನ ಕೈಯನ್ನೇ ತನ್ನ ತಲೆಗೆ ತಾಗಿಸಿದಂತಾಯಿತು. ಅದೇ ಸಮಯದಲ್ಲಿ "ನಿನ್ನ ತಲೆಯಲ್ಲೇನೂ ಇಲ್ಲ" ಎಂಬ ವ್ಯಂಗ್ಯಾರ್ಥವೂ ಮೂಡುತ್ತದೆ. ಅದಕ್ಕೋಸ್ಕರವೇ ನಿಮ್ಮ ಗುಂಡಪ್ಪ ಎಲ್ಲರ ಹಾಗೆ ಕೈಜೋಡಿಸದೆ ಅವನ ಕಿರಿತಕ್ಕೆ ಸಲಾಮು ಕೂಡಿಸುತ್ತಾನೆ ಎಂಬುದು ನನಗೆ ತಿಳಿಯದೆ ಇಲ್ಲ.

ಮೊನ್ನೆ ಮಾರ್ಕೆಟ್ ಚೌಕದಲ್ಲಿ ಕಾಶೀಪತಿ ನೋಡಿದ್ದನಂತೆ ಅವನನ್ನ "ಏನು ಗುಂಡಪ್ಪನವರೇ! ನಮ್ಮ ಸಾಹೇಬರ ಕಟಾಕ್ಷ ನಿಮ್ಮ ಮೇಲೆ ತಿರುಗಿರುವ ಹಾಗಿದೆಯಲ್ಲಾ" ಅಂದನಂತೆ, ಆಕಸ್ಮಾತ್ತಾಗಿ. ಅದಕ್ಕೆ ಅವನು "ಇಲ್ಲ, ಇಲ್ಲ! ನಾನು ಕೈಯೆತ್ತಿದಾಗಲೆಲ್ಲಾ ಅವರೂ ಕೈಯೆತ್ತಿ ಸಲಾಮು ಮಾಡುತ್ತಿದಾರಲ್ಲಾ" ಅಂದನಂತೆ. ಅರ್ಥವಾಯಿತೆ, ಅವನ ಫಿತೂರಿ?

ನನ್ನ ಕೈಯಲ್ಲಿ ಸಲಾಮು ಮಾಡಿಸುವುದಕ್ಕಾಗಿಯೇ, ಹಾಗೊಂದು ಪಂಥ ಹೂಡಿಯೇ, ಅವನು ಅಲ್ಲಲ್ಲಿ ಆಗಾಗ ನನ್ನನ್ನು ಎದುರಿಸಿ ಡೊಂಕುಸಲಾಮು ಹಾಕುತ್ತಿದ್ದದ್ದು! ಅಲ್ಲವೆ? ನೀವೇ ಹೇಳಿ

ಇಷ್ಟಕ್ಕೂ ನನ್ನಿಂದ ಇವನಿಗೆ ಕಿರುಕುಳ ಏನು ಮಹಾ ಆಗುತ್ತಿರುವುದು? ಗುಮಾಸ್ತೆ ಆದ ಮೇಲೆ ಮುಸುಕಿನೊಳಗಿನ ಗುದ್ದುಗಳಿದ್ದೇ ಇರುತ್ತವೆ. ಅಂಥ ಸನಾತನ ಸಂಕಟಗಳಲ್ಲದೆ ನಾನೇನಾದರೂ ವಿಶೇಷವಾಗಿ ಇವನಿಗೋಸ್ಕರ ಸೃಷ್ಟಿ ಮಾಡಿದೆನೇ? ಇಲ್ಲ ಆ ಊರಲ್ಲಿ ನಾನು ಮಾಡುತ್ತಿದ್ದ ಹಾಗೆ ಈ ಊರಲ್ಲೂ ಒಂದು ಹೊಸ ಪದ್ಧತಿ ಮಾತ್ರ ಜಾರಿಗೆ ತಂದೆ ನಾನು ಆಫೀಸಿಗೆ ಬಂದ ಕೂಡಲೇ ಚಾಕರಿದಾರರೆಲ್ಲರೂ ಒಬ್ಬೊಬ್ಬರಾಗಿ ಸದ್ದಿಲ್ಲದೆ ಈ ಕೋಣೆಯೊಳಕ್ಕೆ ಬಂದು, ನಾನು ಅವರ ಕಡೆ ನೋಡಲಿ ನೋಡದೆ ಇರಲಿ, ಕೈ ಮುಗಿದು ಹೋಗಬೇಕು, ಅಂತ ಮೊಟ್ಟಮೊದಲು ನಿಮ್ಮ ಗುಂಡಪ್ಪನ ಗೋಳುಮುಸುಡಿಯನ್ನು ಯಾಕೆ ದರ್ಶನ ಮಾಡಬೇಕು ಅಂತ, ಒಂದು ನೆಪ ತೆಗೆದೆ ಕನ್ನಡ ಅಕಾರಾದಿಯೇ ಆಧಾರ ಅಂದೆ! ಅಶ್ವತ್ಥನಾರಾಯಣ ರಾಯರು, ಆಲಯ್ಯ, ಆಂಜನೇಯಲು, ಈರ, ಉಮಾಮಹೇಶ್ವರ ರಾವ್, ಅಂತ ಪ್ರಾರಂಭವಾಗಿ ಕಾಶೀಪತಿ ಕಳೆದು ಕಡೆಗೆ ಬರುತ್ತಾನೆ ಗುಮಾಸ್ತೆ ಗುಂಡಪ್ಪ! ವ್ಯಾಸರಾಯನಿಗೂ ಹೀಗೆಯೇ ಮಾಡಿದ್ದೆ, ಅವಮಾನ ಮಾಡುವುದಕ್ಕೆ. ಅವರ ಹೆಸರುಗಳು ಕಡೆಗೆ ಬಂದದ್ದು ನನ್ನ ತಪ್ಪೆ? ಅವರ ತಾತನಿಗೆ ಆ ಹೆಸರನ್ನಿಟ್ಟ ಮುತ್ತಜ್ಜನ ತಪ್ಪು! ಅಂತು, ದಿನವೂ ನಿಮ್ಮ ಗುಂಡಪ್ಪ ಹರಳೆಣ್ಣೆ ಕುಡಿಯುವ ಹಾಗೆ ಮುಖ ಗಂಟುಮಾಡಿಕೊಂಡು ಇಲ್ಲಿ ಒಂದು ಸೊಂಟ ಬಗ್ಗಿಸಿ, ತಲೆ ಬಾಗಿಸಿ, ಕೈ ಜೋಡಿಸಿ, ಅವನ ಹಾಳು ಕಿರಿತ ಒಪ್ಪಿಸಿ, ಕಿರುಬ ನೆಗೆದ ಹಾಗೆ ಹೊರಕ್ಕೆ ನೆಗೆಯುತ್ತಾನೆ.

ಮುಖ್ಯ ನಿಮ್ಮ ಗುಂಡಪ್ಪನಿಗೆ ಬದುಕುವ ದಾರಿ ಗೊತ್ತಿಲ್ಲ; ವ್ಯವಹಾರ ಜ್ಞಾನ ಸಾಲದು. ಮೂಗಿನ ತುದಿಗೇ ಮಮಕಾರವನ್ನು ಹಚ್ಚಿಕೊಂಡು, ಅದನ್ನೇ ದಿಟ್ಟಿಸಿ ಮೂರು ಹೊತ್ತೂ ಧ್ಯಾನಮಾಡುತ್ತಿರುತ್ತಾನೆ. ಅವನಿಗೆ ಸಾಲ ಸೋಲ ವಿಪರೀತ ಎಂದ ಕಾಶೀಪತಿ; ಮನೆಯಲ್ಲಿ ಮೂರು ಹೊತ್ತೂ ಗಲಭೆಯಂತೆ. ಕಾಶೀಪತಿಗೆ ಗೊತ್ತಿಲ್ಲವೆ, ಎಷ್ಟಾದರೂ ಹಳಬ. ಗುಂಡಪ್ಪನ

ಜೊತೆಯಲ್ಲೇ ಓದಿದವನು "ಏನಯ್ಯಾ! ನನ್ನ ಕೋಟಲೆ ನಿನ್ನ ಕೀಟಲೆ ಎರಡೂ ಕಳೆದುಹೋಗುತ್ತೆ, ಎಲ್ಲಿಗಾದರೂ ವರ್ಗಮಾಡಿ ಕೊಡಲೇ" ಅಂದರೆ, ಹ್ಞೂಂ ಅನ್ನುವುದಿಲ್ಲ ಗುಂಡಪ್ಪ. ಇಲ್ಲಿಂದ ಕಂಬಿ ಕಿತ್ತೇನೆಂದರೆ ಋಣ ತೆತ್ತ ಮೇಲೆತಾನೆ ಬಿಡುಗಡೆ! ಹೊರಲಾರ, ಹೊರಡಲಾರ ಇವನ ಸಂಕಟ ಪರಿಹಾರ ವಾಗುವುದು ಹೇಗೆ? ನನ್ನ ಧರ್ಮಪರಿಪಾಲನೆ ನಡೆಯುವುದು ಹೇಗೆ? ಹೇಳಿ

ನಾನೇನೋ ತಡೆದೆ, ತಡೆದೆ, ಮೊನ್ನೆ ತನಕ ತಡೆದೆ. ಮೊನ್ನೆ ಬರೆದೇ ಬಿಟ್ಟೆ. "ಆರು ವರ್ಷದಿಂದ ಇವನು ಇದೇ ಸೀಟ್‌ನಲ್ಲಿ ಕುಕ್ಕರಿಸಿದ್ದಾನೆ. ಬೇರು ಬಿಡುವುದಕ್ಕೆ ಮುಂಚೆ ಎತ್ತಿ ಹಾಕುವುದು ವಾಸಿ," ಅಂತ. ಇನ್ನೇನು ಉಚ್ಚಾಟನೆ ಆಗಿಹೋಗುತ್ತ. ಯಾಕೆ ನನಗೆ ರೇಗಿತು, ಅಂದರೆ ಇಲ್ಲಿ ಕೇಳಿ ಗುಂಡಪ್ಪ ಏನು ಹೇಳಿದ ಗೊತ್ತೇ, ಅವನ ಮನೆಯಲ್ಲಿ ಕೆಲಸಮಾಡುವ ಆಫೀಸ್ ಜವಾನನ ಹತ್ತಿರ? ಅವನೇನೋ ಅಂದನಂತೆ ಮಾತಿಗೆ ಮಾತು ಬಂದು, "ಸಾಹೇಬರು ತಮ್ಮ ಬೂಟ್ಸಿಗೆ ಪಾಲೀಷ್ ಹಾಕುವುದಿಲ್ಲ" ಅಂತ. ಆಗ ಇವನು, ಈ ವಿಷಸರ್ಪ, ಈ ಧೂರ್ತ, "ಮತ್ತೆ ಯಾವ ಸಾಹೇಬರ ಬೂಟ್ಸಿಗೆ ಪಾಲೀಷ್ ಹಾಕ್ತಾರೆ?" ಅಂದನಂತೆ. ಹೇಗಿದೆ ಇವನ ನಾಲಿಗೆ ಹರಿತ?

ಸರಿ, ಇವನನ್ನ ಕರೆಸಿ ಬೈದು ಆಗಬೇಕಾದ್ದೇನು? ಇವನು ಬೊಗಳು ವುದೇನು ಅಂತ ಗೊತ್ತೇ ಇದೆ. "ಹಾಗಲ್ಲ, ಸಾರ್! ಕ್ಷಮಿಸಿ, ಸಾರ್! ತಪ್ಪು ಹೇಳಿದಾರೆ ಸಾರ್ ನಿಮಗೆ ಯಾರೋ ನನಗೆ ಆಗದವರು, ಆಫೀಸಲೆಲ್ಲಾ ನನ್ನ ಶತ್ರುಗಳೇ ಸಾರ್, 'ಮತ್ತೆ, ಯಾರು ಸಾಹೇಬರ ಬೂಟ್ಸು ಉಜ್ಜು ವರು?,' ಅಂತ ಕೇಳಿದೆ, ಅಷ್ಟೆ ಸಾರ್,—" ಗೊತ್ತೇ ಇದೆ. ಕಳ್ಳರೆಲ್ಲರೂ ಕನ್ನ ಹಾಕಿ ಮನೆಗೆ ನುಗ್ಗಿದ ಕೂಡಲೇ ಯಾವುದಾದರೂ ಒಂದು ಬಾಗಿಲು ಚಿಲಕ ತೆಗೆದು ತರೆದಿಡುತ್ತಾರೆ, ಅಕಸ್ಮಾತ್ ಅನಾಹುತವಾದರೆ, ಪರಾರಿಗೆ ಇರಲಿ ಅಂತ. ಹಾಗೆಯೇ, ಗುಮಾಸ್ತೆಗಳ ಅಂದರೆ ಕುಂಟುನೆಪಗಳ ಕಂತೆಗಳೇ ಇರುತ್ತವೆ, ಅವರ ಕಿಸೆ ತುಂಬ!

ಗುಂಡಪ್ಪನ ಹತ್ತಿರ ಮಾತು ನಿಲ್ಲಿಸಿ, ಕೈಯಲ್ಲಿ ಪೇನಾ ಹಿಡಿದು, ಬರೆದೆ, ಗರ ಗರ ಗರ ಅಂತ! ಇವನ ಕಾಟ ತಪ್ಪಿಸಿ, ಅಂತ ಕೇಳಿಕೊಂಡಿದೇನೆ. ನನಗೆ ಬೇಕಾಗಿರುವುದೂ ಅದೇ! ಅವನು ಬೇಡುತ್ತಿರುವುದೂ ಅದೇ!

ಗೋಡೆ ಮೇಲಿನ ಹಲ್ಲಿ ಲೊಚ್ ಲೊಚ್ ಅಂತಾ ಇದೆ, ಕೇಳಿಸಿತೆ, ಸತ್ಯ, ಒಳ್ಳೇ ಭವಿಷ್ಯವನ್ನೇ ನುಡಿದಿರಬೇಕು ನೋಡೋಣ, ನಾಳೆ ನಾಡಿದ್ದು

ಹೋಗಿ ಬರುತ್ತೀರಾ ?

**ಸಾಹೇಬರ ಪ್ರಸಾರ ಮುಗಿಯಿತು.**

---

ಪರತಂತ್ರಃ ಪರಾಧೀನಃ ಪರವಾನ್ನಾಥವಾನಪಿ

— ಅಮರಸಿಂಹ

ನಿನ್ನ ಮಾತುಗಳೆಲ್ಲ ಸುಳ್ಳಾಗಬೇಕೆ ?
ನಿನ್ನ ಕೈ ಸೋಂಕಲದೆ ಕಳವೆನಿಸಬೇಕೆ ?

— ಪಂಪ

# ೨· ಕದನ ಕುತೂಹಲ

ಬನ್ನಿ ಸಾರ್, ಬನ್ನಿ! ಕೂತುಕೊಳ್ಳಿ ಅಲ್ಲೇ ಕೂಡಿ ಕಂಬವಿದೆ ಬೆನ್ನಿಗೆ ಗುಂಡಪ್ಪನ ವಿಷಯ ಎಲ್ಲಾ ಕೂಲಂಕಷವಾಗಿ ಹೇಳುತ್ತೇನೆ.. ನನ್ನ ಜೊತೆಗಾರ, ಗುಂಡಪ್ಪ ಅವನಿಗೂ ನನಗೂ ಗಂಟು ಬಿದ್ದದ್ದು ನಿನ್ನೆ ಮೊನ್ನೆ ಅಲ್ಲ; ನಮ್ಮ ಮುತ್ತಾತಂದಿರ ಕಾಲದಿಂದಲೂ ನಮ್ಮದು ಇದೇ ಊರು; ಈಗ ಪಾಳು ಬಿದ್ದಿದೆಯಲ್ಲಾ ವಿಶ್ವೇಶ್ವರನ ದೇವಸ್ಥಾನ, ಅದನ್ನು ಕಟ್ಟಿಸಿದವರು ನಮ್ಮ ಮುತ್ತಾತ ಅವರೆಲ್ಲೋ ಕಾಶಿಗೆ ಹೋಗಿದ್ದರಂತೆ ಆದಕ್ಕೇ ನನ್ನ ಹೆಸರು ಕಾಶೀಪತಿ ಅಂತ ಗೊತ್ತಿದೆಯಲ್ಲಾ, ಗವರ್ನರ್ ಜನರಲ್‌ಗಳ ಕಾಲ ಅದು ಇನ್ನೂ ವೈಸ್ರಾಯರುಗಳು ಬಂದಿರಲಿಲ್ಲ ಗುಂಪು ಗುಂಪಾಗಿ ಸೇರಿಕೊಂಡು ಗಂಟುಮೂಟೆ ಹೇರಿಕೊಂಡು ನಡೆದೇ ಹೋಗ ಬೇಕು, ಬಲಗಾಲು ಮುಂದಾಗಿ ದಾರಿಯಲ್ಲಿ ರಕ್ಕರ ಹಾವಳಿ ಬೇರೆ, ಅವರು ಮೇಲೆ ಬಿದ್ದರೆ ಅಲ್ಲೇ ಮೋಕ್ಷಪ್ರಾಪ್ತಿ ಅವರೋ ಕೊಲಾಕೋವಿದರು ಅವ ರನ್ನು ತಪ್ಪಿಸಿಕೊಂಡು ಕಾಶಿ ಸೇರಿದರೆ ಪಂಡಾಗಳ ಹಾವಳಿ ಅದನ್ನು ಸಹಿಸಿ ಕೊಂಡು ಮಾಡಿದ ಪಾಪ, ಆಡಿದ ಶಾಪ ಎಲ್ಲವನ್ನೂ ಗಂಗಮ್ಮನ ಪಾಲು ಮಾಡಿ ವಿಶ್ವೇಶ್ವರನ ಹಣೆ ಮುಟ್ಟಿ ಪೂಜೆ ಮಾಡಿ ಹಿಂತಿರುಗುವುದು ಇಲ್ಲಿ ಮನೆಯವರು ಕಾದು ಕಾದು ಕಾವೆಲ್ಲ ಆರಿಹೋಗಿ ಇನ್ನೇನು ಯಜಮಾನರು ಸ್ವರ್ಗಕ್ಕೆ ಹೋದರು ಅಂತ ಸಂಕಟ ಪಡುವುದರೊಳಗೆ, ಸಿದ್ಧ ಕಾಲಿನಲ್ಲಿ ಆರಂಗುಲ ಕೊಳೆ, ಕೆನ್ನೆಯಲ್ಲಿ ಆರು ತಿಂಗಳ ದಾಡಿ ಸಹಿತ! ಹೋದವರೇ ಬಂದರೋ ಬಂದವರೇ ಹೋಗಿದ್ದರೋ ಎಂಬ ಭವಾಲ್ ಸಂನ್ಯಾಸಿ ಭ್ರಮೆ ಬರಬೇಕು, ಬಂಧುಗಳಿಗೆ! ಅಂಥ ಕಾಲ ಸಾರ್, ಆಗಿನದು ಹೀಗೆ ಬನ್ನಿ ಕೊಂಚ ಸರಿಯಿರಿ ಬೆನ್ನಿಗೆ ಬಿಸಿಲು ಬಡಿಯುತ್ತಿಧೆ

ನಮ್ಮ ಮುತ್ತಾತಂದಿರು ಹಿಂತಿರುಗಿದ ದಿನವೇ ಅವರಿಗೊಂದು ಕನಸು ಬಿತ್ತು. ಬೆಳಗುಮುಂಜಾನೆ ಸಮಯ, ಕನಸು ಅಂತ ಕಸದ ಬುಟ್ಟಿಗೆ ಎಸೆಯುವ ಹಾಗಿರಲಿಲ್ಲ ಅದು! ಸಾಕ್ಷಾತ್ ವಿಶ್ವೇಶ್ವರ, ವೃದ್ಧ ಬ್ರಾಹ್ಮಣ ವೇಷದಲ್ಲಿ, ದರ್ಶನ ಕೊಟ್ಟು "ನನ್ನ ಹಣೆ ಮುಟ್ಟಿ ನೋಡು, ನನಗೆ ಜ್ವರ

ಬಂದಿದೆ, ನಾನು ಕಾಶಿಯಲ್ಲಿ ನಿಲ್ಲಲಾರೆ, ಅಲ್ಲಿ ನಾಗರಿಕತೆ ಹೆಚ್ಚಿಹೋಯಿತು, ವಾರಣಾಸಿ ಅನ್ನುವುದನ್ನ ಜನ ವಾಣರಾಸಿ, ಬನಾರಸಿ, ಅಂತ ಉಚ್ಚಾರ ಮಾಡಲಿಕ್ಕೆ ಹತ್ತಿದ್ದಾರೆ, ವಿಶ್ವೇಶ್ವರ ಅಂತ ಅನ್ನುವುದಕ್ಕೂ ಕೂಡ ಅವರಿಗೆ ಬಾಯಿ ಬರದು, ನಾನು ನಿಮ್ಮೂರಲ್ಲೇ ನೆಲಸಿಬಿಡುತ್ತೇನೆ, ರಾಮೇಶ್ವರಕ್ಕೂ ಹತ್ತಿರ, ನೀನು ನನಗೊಂದು ಗುಡಿ ಕಟ್ಟಿ ಕೊಡ." ಅಂತ ನಮ್ಮ ಮುತ್ತಜ್ಜ ನನ್ನ ಒತ್ತಾಯಪಡಿಸಿದನಂತೆ.

ಬಂದೆ, ಗುಂಡಪ್ಪನ ವಿಷಯಕ್ಕೆ ಬರುತ್ತೇನೆ, ಜ್ಞಾಪಕವಿದೆ ಪೂರ್ವಕಥೆ ಯನ್ನುವಿಶದವಾಗಿ ತಿಳಿಸೋಣ ಅಂತ, ಅಷ್ಟೆ— ಗೋಡೆಗೇ ಒರಗಿಕೊಳ್ಳಿ, ಆರಾಮವಾಗಿ ಕೂತುಕೊಳ್ಳಿ. ಸರಿ! ಕನಸು ಬಿದ್ದ ಒಂದೇ ಒಂದು ತಿಂಗಳಲ್ಲಿ ಗುಡಿ ಎದ್ದುಬಿಟ್ಟಿತು, ಲಿಂಗ ಮಾಡಿಸಿ ಕುಂಭಾಭಿಷೇಕಕ್ಕೆ ಅಂತ ನಮ್ಮ ಗುಂಡಪ್ಪನ ಮುತ್ತಾತನನ್ನ ಕರ್ನೂಲಿನಿಂದ ಕರೆಸಿದರು. ಬ್ರಾಹ್ಮಣ ಭೋಜನ, ಸುವಾಸಿನಿಯರಿಗೆ ಸಂತರ್ಪಣೆ ನಡೆದ ದಿನ ರಾತ್ರಿ ಗರ್ಭಗುಡಿ ಬಾಗಿಲಲ್ಲೇ ಶಿವೈಕ್ಯರಾದರು, ನಮ್ಮ ಮುತ್ತಾತಂದಿರು! ಶುದ್ಧಿ ಗಿದ್ಧಿ ಅಂತ ಐವತ್ತು ಅರವತ್ತು ರೂಪಾಯಿ. ಅದೇ ನೆಪದಲ್ಲಿ ಗುಂಡಪ್ಪನ ಮುತ್ತಾತ ಕಸಿದುಕೊಂಡೇ ಬಿಟ್ಟರು.

ಮೊದಲಿನಿಂದ ಅವರಿಗೆ ನಮ್ಮ ಮನೆಯವರ ಮೇಲೆ ಕೋಪ 'ಮನೆ ಮಠ, ಪಾತ್ರೆ ಪದಾರ್ಥ, ಹೊಲಗದ್ದೆ ಎಲ್ಲಾನೂ ಒದಗಿಸತೇನೆ ಅಂತ ಪುಸಲಾಯಿಸಿ ಕರ್ನೂಲಿನಿಂದ ಪತ್ನಿಸಮೇತ ಕರೆದು ತಂದರು ನನ್ನನ್ನ! ಕೊನೆಗೆ ಏನೂ ಇಲ್ಲ ಹೋಗು ಅಂತ ಹೇಳಿ ಹರಹರ ಅಂದರು' ಅಂತ ಅವರ ಗೊಣಗಾಟ ಗುಡಿಗೆ ಹೋದ ಎಲ್ಲರ ಹತ್ತಿರವೂ ಗೋಳು ಹೊಯ್ದು ಕೊಂಡರು ನಮ್ಮ ಮನೆ ಮುಂದೆ ಬಂದು ಗುಡುಗುಡಿಸಿದರು ಆಗಿನ್ನೂ ಕಮಿರ್ಶ ಕಾಲ, ಪರಂಗಿಯವರದೇ ಪ್ರತಾಪ ಅವರ ಮೂತಿ ಕಂಡಾಗಲೆಲ್ಲ ಕಾಸ್‌ಪೀಸ್ ಅಂತ ಇಂಗ್ಲಿಷಿನಲ್ಲೇ ಹೇಳಿಸಿ ದಾವಂಗೀವಾ ಅಂತ ಒರಲಿದರು ನಮ್ಮಮನೆಯವರು ಜಗ್ಗಲಿಲ್ಲ. ಆಮೇಲೆ ಪರಂಗಿಯವನ ಹತ್ತಿರ ಬಟ್ಲರಾಗಿದ್ದ ಒಬ್ಬ ಮುದುಕನನ್ನು ಬೆಂಗಳೂರಿಂದ ಕರೆಸಿ, ದೇವಸ್ಥಾನಕ್ಕೆ ಯಾರೂ ಹೋಗಕೂಡದು ಅಂತ ತಡೆದರು, 'ದೇವರು ಸರ್ವಾಂತರ್ಯಾಮಿ ಅಲ್ಲವೇ, ಎಂದು ಊರಿನವರೆಲ್ಲಾ ಗುಡಿ ಬಾಗಿಲಲ್ಲೇ ಹಣ್ಣುಕಾಯಿ ಮಾಡಿ ಹಿಂತಿರುಗಿ

ದರು. ಯಾವಾಗ ಹೊಟ್ಟೆಯ ಮೇಲೆ ಹೊಡೆತ ಬಿತ್ತೋ, ಆಗ ಆ ಪರದೇಶಿಗೆ ಕೊಂಚ ಬುದ್ಧಿ ಬಂತು. ಮನೆ ಮನೆಗೂ ತಾನೇ ಹೋಗಿ, 'ಕ್ಷಮಿಸಿ, ದುಡುಕಿ ಬಿಟ್ಟೆ, ನಿಮ್ಮ ಆಳಾಗಿ ದುಡಿಯುತ್ತೇನೆ. ಇಲ್ಲಿನೋ ಸಿಕ್ಕುತ್ತೆ ಅಂತ ಕನಸು ಕಂಡು ಕಾಶಿಯಿಂದ ಇಲ್ಲಿಗೆ ಬಂದ ವಿಶ್ವೇಶ್ವರ ಸ್ವಾಮಿಗೆ ಒಂದು ಉದ್ಧರಣಿ ಗಂಗೋದಕ, ಅನ್ನಪೂರ್ಣಾ ದೇವಿಗೆ ಒಂದು ಹಿಡಿ ಅಕ್ಕಿ ಕೊಟ್ಟು ನನ್ನನ್ನ ಕಾಪಾಡಿ' ಎಂದು ಕಾಲು ಹಿಡಿದರು "ಅಂತು ಇಂತು ಕುಂತ ಕಡೆಯಿಂದ ಏಳುವುದಿಲ್ಲ" ಅಂತಾರಲ್ಲ, ಹಾಗೆ, ಈ ಊರಲ್ಲಿ ನಿಂತೇಬಿಟ್ಟರು

ಆ ತಲಿವಾರು ಬಿದ್ದುಹೋದ ಮೇಲೆ, ಗುಂಡಪ್ಪನ ತಾತ ನನ್ನ ತಾತ ಇವರಿಬ್ಬರಲ್ಲೂ ವೈಮನಸ್ಯ ಬೆಳೆಯಿತು. ಆ ಕಾಲಭೈರವನ ಶಾಪವೇ ಇರ ಬೇಕು, ನಮ್ಮ ತಾತನಿಗೆ ನಾಯಿ ಕೆಮ್ಮಲು ಚಿಕ್ಕಂದಿನಿಂದಲೂ ಸಣ್ಣ ಮರಿ ಯಾಗಿದ್ದಾಗಲೇ ಮುಲುಕುವುದಕ್ಕೆ ಮೊದಲು ಮಾಡಿದ್ದ ನಮ್ಮ ತಾತ ಮುದಿಯಾದ ಮೇಲೆ ಮೂರು ಬೀದಿಗಳಿಗೆ ನಿದ್ದೆ ಕೆಡಿಸುತ್ತಾ ಇದ್ದರು ಹುಟ್ಟಿದಂದಿನಿಂದ ಸಾಯುವ ತನಕ ಅವರು ಆಹಾರ ತಿಂದವರೇ ಅಲ್ಲ ಬರೀ ಔಷಧಗಳಿಂದಲೇ ಅವರು ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದರು. ಮಾಟ ಮಂತ್ರ ಹರಕೆ ಪೂರಕೆ ಎಲ್ಲವೂ ಅವರ ಖಾಯಿಲೆ ಎದುರು ನಿಷ್ಫಲವಾದುವು ಯಾರೋ ಒಬ್ಬರು ಸಂಗೀತ ಅಭ್ಯಾಸ ಮಾಡಿ, ಸ್ವರ ಹಾಕಿದರೆ ಅನುಕೂಲ,' ಅಂದರು. ಪ್ರಯೋಜನವಾಗಲಿಲ್ಲ ಅಷ್ಟು ಹೊತ್ತಿಗೆ ಗುಂಡಪ್ಪನ ತಾತ ನಮ್ಮೂರಲ್ಲಿ ಪಂಡಿತ ಅನ್ನಿಸಿಕೊಂಡಿದ್ದರಂತೆ. ಏಕೆಂದರೆ ಅದೊಂದು ದೊಡ್ಡ ಕಥೆ! ಸ್ವಲ್ಪದರಲ್ಲಿ ಹೇಳಿ ಬಿಡುತ್ತೇನೆ ಒಂದು ದಿಂಬು ತರಲೇ ಒರಗಿ ಕೊಳ್ಳೋದಕ್ಕೆ? ನಮ್ಮ ತಾತನ ಪುಂಜಿ ದಿನವೇ ಇಡೀ ದೇವಸ್ಥಾನ ಕುಸಿದು ಬಿತ್ತು. ಲಿಂಗಕ್ಕೇನು ಆಗಲಿಲ್ಲ, ಅರ್ಚಕರೂ ಉಳಿದುಕೊಂಡರು ಅನ್ನಿ! ಎರಡು ತಿಂಗಳಲ್ಲಿ ಕಟ್ಟಿಕೊಡುತ್ತೇನೆ ಅಂತ ಒಪ್ಪಿಕೊಂಡು, ತುರುತ್ತಾಗಿ ಹಣ ಬೇಕಾಗಿದ್ದರಿಂದ ಆ ಕಂಟ್ರಾಕ್ಟರು ದೇವಸ್ಥಾನ ತಿಂಗಳಲ್ಲೇ ಪೂರೈಸಿದ್ದ. ಬೆಲ್ಲದ ಗಣೇಶನಿಗೆ ಅಲ್ಲೇ ನೈವೇದ್ಯ ಎಂಬ ಹಾಗೆ, ನಮ್ಮೂರು ಮಣ್ಣು ಸುಟ್ಟು ಮಾಡಿದ ಇಟ್ಟಿಗೆಗೆ, ನಮ್ಮೂರು ಮಣ್ಣೇ ಗಾರೆ ಆಗಿತ್ತು. ಸರಿ! ವಿಶ್ವೇಶ್ವರನಿಗೇನೆ ಶನೀಶ್ವರ ಹಿಡಿಯಿತು. ದೇವಸ್ಥಾನ ಬಿದ್ದುಹೋಯ್ತು. ಗುಂಡಪ್ಪನ ತಾತ ನಿತ್ಯಯಾತ್ರೆಯಲ್ಲಿ ನಿರತನಾದ. ತುಳಸೀದಳ, ತುಂಬೆ

ಸೊಪ್ಪು, ನೆಗಡಿ ಕೆಮ್ಮಲು ಅಂತ ಅಲ್ಲಿ ಇಲ್ಲಿ ಅಜ್ಜಮ್ಮನವರು ಅಂದದ್ದನ್ನು ಕಿವಿಗೆ ಹಾಕಿಕೊಂಡು, ಬಸುರಿಲೇಹ, ಬಾಣಂತಿ ಕಷಾಯ, ಕಸ್ತೂರಿಮಾತ್ರೆ, ಕೇಸರಿಬಾತ್, ಸೋಮಾರಿಘೃತ, ಕರತಲಾಮಲಕ ತೈಲ, ರಾಸ್ನಾದಿ, ಬುನಾದಿ ಗುಳಾದಿ, ಸುಳಾದಿ, ಅಂತ ಆಯುರ್ವೇದದ ಅಷ್ಟಾಂಗ ಹೃದಯವನ್ನೇ ಹಿಡಿದು ಬಿಟ್ಟ! ಅವನ ಔಷಧಿ ಕುಡಿದು ಯಾರೂ ಕೈಕೊಡಲಿಲ್ಲವಾದ್ದರಿಂದ ಕೈಗುಣ ಚೆನ್ನ ಅಂತ ಬೇರೆ ಹೆಸರು ಗಳಿಸಿದ! ಸರಿ! ನಮ್ಮ ತಾತನ ನಾಯಿ ಕೆಮ್ಮು ವಿಷಯವನ್ನ ಅವನ ಹತ್ತಿರವೂ ಯಾರೊ ಬೊಗಳಿದರು. ಕರೆದುಕೊಂಡು ಬಂದರು. ನಮ್ಮ ತಾತ ಹೇಳಿದರಂತೆ, “ಬೇಡ! ಬೇಡ ಅವನ ಔಷಧಿ ಕುಡಿಸಿ ನನ್ನ ಜನ್ಮ ನಾಯಿ ಜನ್ಮ ಮಾಡಬೇಡಿರೋ” ಅಂತ ಆ ಪೂಜಾರಿ ಪಂಡಿತ ಬಂದು ನಾಡಿ ಹಿಡಿದು, “ಇದು ಖಾಯಿಲೆ ಅಲ್ಲ, ಪುರಾಕೃತ ಕರ್ಮ! ಈತನ ತಾಯಿ ಈತ ಗರ್ಭದಲ್ಲಿದ್ದಾಗ ಒಂದು ನಾಯಿಗೆ ಹುಚ್ಚು ಹಿಡಿಸಿದ್ದಳು” ಅಂತ ಹೇಳಿ, ಹಿರಿಯರಿಗೆ ಅವಮಾನ ಬಳಿದ, ಎದ್ದು ಹೋದ ನಂತೆ ಹೇಗಿದೆ!

ಗುಂಡಪ್ಪನ ತಂದೆಗೂ ಅದೇ ಆಯುರ್ವೇದವೇ ಆಸರೆ ಅದೇ ಸೀಸೆಗಳನ್ನೇ ಕೆರೆದು ತೊಳೆದು, ಗುಳಿಗೆಗಳನ್ನೆಲ್ಲ ಚೂರ್ಣ ಮಾಡಿ, ಚೂರ್ಣಗಳನ್ನೆಲ್ಲ ಘೃತ ಮಾಡಿ, ಘೃತಗಳೆಲ್ಲ ತೈಲಮಾಡಿ, ಬಹಳ ವರ್ಷ ವೈದ್ಯ ಮಾಡಿದ ಕೈತುಂಬ ಕಾಸನ್ನೂ ಕಂಡ ನನ್ನ ತಂದೆಯವರು ತೇರಿನ ಬೀದಿ ಬಿಟ್ಟು ಈ ಮನೆ ಕಟ್ಟಿಕೊಂಡು ಇಲ್ಲಿಗೆ ಬಂದ ಮೇಲೆ ಈಚೆ ಕಡೆಯವರೆಲ್ಲ ಗುಂಡಪ್ಪನ ತಂದೆಯ ಹತ್ತಿರ ಸುಳಿಯುವುದನ್ನೆ ನಿಲ್ಲಿಸಿದರು. ಅದಕ್ಕೆ ನನ್ನ ತಂದೆಯವರ ತಂತ್ರವೇ ಕಾರಣ ಅಂತ ಆತ ದೂರಿದ ಆ ಮೇಲೆ ನನ್ನ ತಂದೆಯವರು ತಾವೇ ಕೂತು ಸಾವಿರಾರು ರುಜು ಹಾಕಿ ಮೂಗರ್ಜಿಗಳನ್ನ ಬರೆದು ಈ ಊರಿಗೆ ಸೂಲಗಿತ್ತಿ ಸಮೇತ ಒಬ್ಬರು ಡಾಕ್ಟರು ಬರೋ ಹಾಗೆ ಮಾಡಿದರು 'ಪಂಡಿತರ ಹತ್ತಿರ ಹೋದರೆ ಬೇರು ನೀರು ಸೇರಿಸಿ ಕಾಯಿಸು ಅಂತಾರೆ, ಜಾಯಿಕಾಯಿ ಜೇನುತುಪ್ಪ ತರಿಸು ಅಂತಾರೆ, ದ್ರಾಕ್ಷಿ ನಿಂಬೆ ಜೀರಿಗೆ ಶುಂಠಿ ಅಂತ ಅಂಗಡಿ ಸಾಲೆಲ್ಲ ಅಲೆಯಬೇಕಾಗುತ್ತದೆ, ಆದ್ದರಿಂದ ಬರೀ ಸೀಸೆ ಹಿಡಿದುಕೊಂಡು ಹೋದರಾಯಿತು,' ಅಂತ ಎಲ್ಲರೂ ಆಸ್ಪತ್ರೆಗೇ ನುಗ್ಗಿದರು.

ಪ್ರಾರಂಭವಾಯಿತು ಗುಂಡಪ್ಪನ ತಂದೆಗೂ ನಮ್ಮ ತಂದೆಗೂ! ಹಿರಿಯರು ಕೂಗಿದ ಕಹಳೆಗೆ ಕಿರಿಯರು ನಾವೂ ಪ್ರತಿಧ್ವನಿಗೂಡಿಸಿದೆವು ನನಗೂ ಗುಂಡಪ್ಪನಿಗೂ ಶಾಲೆಯಲ್ಲಿ ಪ್ರತಿದಿನವೂ ಮಾರಾಮಾರಿ ಜರಗುತ್ತಲೇ ಇತ್ತು. ಯಾರು ಮೊದಲು ಸ್ಕೂಲಿಂದ ಪರಾರಿ ಎಂಬುದರಲ್ಲಿ ಸ್ಪೈಪೋಟಿ! ಯಾರು ಹೊತ್ತು ಮೀರಿ ಸ್ಕೂಲಿಗೆ ಬರುವರು ಎಂಬುದರಲ್ಲಿ ಮೇಲಾಟ! ಕೋಳಿ ಎಂಬುದು ಸ್ತ್ರೀಲಿಂಗ ಅಂತ ಅವನು; ಪುಲ್ಲಿಂಗ ಅಂತ ನಾನು ಉತ್ತಮ ಪುರುಷ ಅಂದರೆ ನಾನು ಅಂತ ಅವನು, ನಾನು ಅಂತ ನಾನು! ನಾನು ಅವನನ್ನ 'ಭೋಗಂಧರಾಯಣ' ಅಂತ ಕರೆದರೆ ಅವನು ನನ್ನನ್ನ 'ಭೋಜನರಾಜ' ಅಂದ. ಶಾಕುಂತಲ ನಾಟಕ ಬರೆದವರು ಯಾರೋ ಅಂತ ಮೇಷ್ಟರು ಕೇಳಿದರೆ ನಾನಲ್ಲ ಅಂತ ಅವನು! ಅವನಲ್ಲ ಅಂತ ನಾನು ಪಾಠಗಳನ್ನು ನನಗಿಂತ ಬೇಗ ಗುಂಡಪ್ಪನೇ ಗ್ರಹಿಸುತ್ತಿದ್ದ ಇತರೇ ಹವ್ಯಾಸಗಳು ಯಾವುದೂ ಇರಲಿಲ್ಲವಾದ್ದರಿಂದ ಅವನು ನನಗಿಂತ ಚುರುಕಾಗಿ ತರಗತಿಯಿಂದ ತರಗತಿಗೆ ನೆಗೆದು ಹೋದ ಒಂದು ಸಾರಿ ಮಾತ್ರ ಸಿಡುಬು ಬಂದದ್ದರಿಂದ ಅವನು ಒಂದು ಕ್ಲಾಸಿನಲ್ಲಿ ಕೂತ ಆದರೂ ನನಗವನು ಸಿಕ್ಕಲೇ ಇಲ್ಲ

ನಾನು ಸೋತು ಕೂತಾಗಲಿಲ್ಲ ನಮ್ಮಪ್ಪ ನನ್ನನ್ನ 'ಗುಂಡಪ್ಪ ಗುಂಡಪ್ಪ' ಅಂತ ತಿವಿಯುತ್ತಿದ್ದರು 'ತೋಟಕ್ಕೆ ಅಲಂಕಾರಕ್ಕೆ ಅಂತ ತಂದು ಹಾಕಿದ ಲಂಟಾನಾ ಗಿಡ ಈಗ ಊರಿನ ಸಾರವನ್ನೆಲ್ಲ ಹೀರುತ್ತಿರುವ ಹಾಗೆ ಈ ಕರ್ನೂಲಿನ ಪಾಪಾಸ್ ಕಳ್ಳಿ ಬೆಳೆಯುತಾ ಇದೆಯಲ್ಲೋ! ಅವರ ಮಗನನ್ನ ನೀನು ಮೀರಿಸಬೇಡವೇನೋ, ಅಂತ ಹೊಡೆಯುತ್ತಿದ್ದರು– ಹೊಡೆತ ತಿನ್ನುವುದರಲ್ಲಿ ನಾನು ಅವನನ್ನು ಮೀರಿಸುತ್ತಿದ್ದರೂ ಕೂಡ, ನಾನು ಲೋವರ್ ಸೆಕಂಡರಿ ಪಾಸಾಗುವ ವೇಳೆಗೆ ಗುಂಡಪ್ಪ ಎಸ್. ಎಸ್ ಎಲ್- ಸಿ. ದಾಟಿದ್ದ. ಅವನಿಗೇನು? ಮಕ್ಕಿಕಾ ಮಕ್ಕಿ, ಮೇಷ್ಟರು ಹೇಳಿದ್ದೇ ವೇದವಾಕ್ಯ ನಾನು ಹಾಗಲ್ಲ. ನನ್ನದು ಸ್ವತಂತ್ರ ಬುದ್ಧಿ ಅವರು ಮಕ್ಕಿ ಅಂದರೆ, ನಾವೂ ಮಕ್ಕಿ ಅನ್ನಲೇಬೇಕೇನು? ನಾವೇನು ಕೂಗುಬಂಡೆಗಳೇ?

ಎಸ್ ಎಸ್. ಎಲ್ ಸಿ ಎನಿಸುವುದರೊಳಗೆ ನನಗೆ ಉಬ್ಬಸ ಬಂತು. ಟೈಪಿಂಗ್ ಶಾಲೆಗೆ ಸೇರಿದೆ. ಅಲ್ಲಿ ನನ್ನ ಕೈಚಳಕವನ್ನು ಎಲ್ಲರೂ ಕೊಂಡಾಡಿದರು. ಚಿಕ್ಕಂದಿನಲ್ಲಿ ನಾಲ್ಕು ವರ್ಷ ನಾನು ಕೆಲವರು ಮುಸಲ್ಮಾ

ಗೆಳೆಯರೊಂದಿಗೆ ಬುಲ್‌ಬುಲ್ ತರಂಗ್ ಅಭ್ಯಾಸ ಮಾಡಿದ್ದೆ ಅವರ ಅನುಕೂಲ ಆಗ ತಿಳಿಯಿತು -ನನ್ನ ಯಾವತ್ತೂ ಬೆರಳು ಗಳು ನಾಗಾಲೋಟದಿಂದ ಟೈಪ್ ಯಂತ್ರದ ಮೇಲೆ ತಾವೇ ತಾವಾಗಿ ಓಡಹತ್ತಿದುವು ಕ್ಷಣ ಕ್ಷಣಕ್ಕೂ ನಾನು ಆಂಗ್ಲೇಯ ಪದಸಮೂಹಕ್ಕೆ ಹೊಸ ಹೊಸ ಮಾತುಗಳನ್ನು ರಚಿಸಿ ಒದಗಿಸಿದೆ ನನ್ನ ಪ್ರತಿಭೆಗೆ ಉಪಾಧ್ಯಾಯರು ಬೆರಗಾದರು ಆಕ್ಸ್‌ಫರ್ಡ್ ಇಂಗ್ಲೀಷ್ ಡಿಕ್ಷನ ರಿಯ ಸಂಚಾಲಕ ಮಂಡಳಕ್ಕೂ, ಸ್ಪೆಲಿಂಗ್ ಪರಿಷ್ಕರಣ ಸಮಿತಿಗೂ ಅವರು ನನ್ನ ತಪ್ಪುಗಳನ್ನೇ ಒಪ್ಪುಗಳು ಎಂದು ಸಾಧಿಸುವಂತೆ ಬೇಡಿಕೆಗಳನ್ನು ರವಾನಿಸಿದರು ನುಗ್, ಹಿಗ್, ಬಗ್, ಮುಂತಾದ ಕನ್ನಡ ಪದಗಳನ್ನು ಇಂಗ್ಲೀಷಿನಲ್ಲೂ ಅದೇ ಅರ್ಥಗಳಿಗಾಗಿ ಉಪಯೋಗಿಸಿ ಸಾಮ್ರಾಜ್ಯದ ಏಳಿಗೆ ಯನ್ನು ಸಾಧಿಸಬೇಕೆಂದು ಅವರು ಬರೆದರು ಅವುಗಳನ್ನು ಆಕ್ಸ್‌ಫರ್ಡ್ ಸಂಸ್ಥೆಯವರು ಅಂಗೀಕರಿಸಿದರೋ ಏನೋ ನನಗೆ ತಿಳಿಯದು 'ಏ' ತ್ವಕ್ಕೆ ಇಂಗ್ಲೀಷಿನ 'ಎ' ಎಂಬ ಅಕ್ಷರವನ್ನೇ ಉಪಯೋಗಿಸಬೇಕೆಂದೂ ಕಕಾರಕ್ಕ, ಶಕಾರಕ್ಕ 'ಸಿ', ಸಕಾರಕ್ಕೆ 'ಎಸ್' ಹೀಗೆ ನಿರ್ದಾಕ್ಷಣ್ಯವಾಗಿ ಅಳವಡಿಸಿಕೊ ಳ್ಳುವುದೇ ಸಾರ್ವಭೌಮತ್ವ ಪದವಿಗೇರಿರುವ ಆಂಗ್ಲ ಭಾಷಾ ರಮಣಿಗೆ ತಕ್ಕದ್ದೆಂದೂ ನಾನು ವಾದಿಸಿದೆ ಆ ವರ್ಷ ಟೈಪಿಂಗ್ ಪರೀಕ್ಷೆಗೆ ನಾವು ನಮ್ಮ ಶಾಲೆಯಿಂದ ಕಳುಹಿಸಿದ ಉತ್ತರ ಪತ್ರಿಕೆಗಳು ಯಾವುದೋ ರೈಲುಅನಾಹುತ ದಲ್ಲಿ ಬೆಂಕಿಬೂದಿಯಾದ್ದರಿಂದ ನಮ್ಮೆಲ್ಲರಿಗೂ ಪರೀಕ್ಷಕರು ಪಾಸನ್ನು ದಯ ಪಾಲಿಸಿದರು ಅದೇ ಆಧಾರದ ಮೇಲೂ ಮತ್ತು ನಮ್ಮೂರು ಕಚೇರಿಯ ಹೆಡ್ ಗುಮಾಸ್ತೆ ನನ್ನ ಸೋದರತ್ತೆಯ ಗಂಡನಾಗಿದ್ದುದರಿಂದಲೂ, ನನಗೆ ಇಪ್ಪತ್ತೈದು ರೂಪಾಯಿನ ಚಾಕರಿ ಸಿಕ್ಕಿತು- ಕೇವಲ ಹತ್ತೊಂಬತ್ತನೆಯ ವಯಸ್ಸಿನಲ್ಲಿಯೇ- ಗುಂಡಪ್ಪ ಬಿ ಎ ಗಾಗಿ ನಿಶಾತೈಲ ಉರಿಸುತ್ತಿರುವಾಗಲೇ!

ಗುಂಡಪ್ಪ ಬಿ ಎ ಪಾಸುಮಾಡಿದಾಗ ನನಗೆ ಮನೆಯಲ್ಲಿ ವಿಪರೀತ ಪೂಜೆ ಪುರಸ್ಕಾರ ದೊರೆಯಿತು ನಾನು ತಿನ್ನುವುದು ದಂಡ ಪಿಂಡ, ನನ್ನದು ಭಂಡ ಬಾಳು, ನಾನೊಬ್ಬ ಪಂಡಿತ ಪುತ್ರ ಅಂತೆಲ್ಲ ಅವತ್ತು ಮಾತು ಬೆಳೆ ಯಿತು ಅವನ ಬಿ ಎ. ಗೆ ವೆಚ್ಚವಾದ ಹಣವನ್ನೂ, ಅವನ ನಿರು ದ್ಯೋಗೀತನದ ಖರ್ಚನ್ನೂ, ಚಾಕರಿ ಶಿಕಾರಿಯ ವೆಚ್ಚವನ್ನೂ, ಸಂಬಳಕ್ಕ

ಸೇರುವಾಗಿನಿಂದ ಪೇಶವರೆಗೂ ಅವನು ಗಳಿಸುವ ಗಂಟಿನಿಂದ ತೆಗೆದರೆ, ಉಳಿಯುವಷ್ಟನ್ನು ನಾನೂ ನನ್ನ ಸಂಬಳದ ಮೂಲಕವೂ ಸಾರಿಗೆ ಸೋರಿಗೆಗಳ ಮೂಲಕವೂ ಮನೆಗೆ ತರುತ್ತೇನೆ, ಅಂತ ನಮ್ಮಪ್ಪನಿಗೆ ಭರವಸೆ ಕೊಟ್ಟೆ ಆದರೂ ಅವರಿಗೆ ನಾನು ವಿದ್ಯಾಧರನಾದರೂ ಪದವೀಧರನಲ್ಲವಲ್ಲಾ ಎಂಬ ಕೊರಗು ಬಹಳ ಅಮೇರಿಕ ದೇಶದ ಪ್ರಸಿದ್ಧ ಗೋವಧಾ ಕೇಂದ್ರವಾದ ಚಿಕಾಗೊ ನಗರದಲ್ಲಿರುವ ಓರಿಯಂಟಲ್ ಯೂನಿವರ್ಸಿಟಿಯಿಂದ ಟಪಾಲ್ ಮೂಲಕ ಕೇವಲ ನೂರೈವತ್ತು ರೂಪಾಯಿ ಖರ್ಚಿನಲ್ಲೇ ಒಂದು ಬಿ ಎ ತರಿಸುತ್ತೇನೆ ಎಂದು ಅಂಗಲಾಚಿದೆ ಅವರು ಒಪ್ಪಲಿಲ್ಲ "ಸಮುದ್ರದಾಚೆ ಯಿದ್ದ ಸೀತಾದೇವಿಯನ್ನು ತನ್ನ ಮನೋಸಂಕಲ್ಪ ಬಲದಿಂದ ಹಾಗೆಯೇ ತರಿಸಲು ಶ್ರೀರಾಮಚಂದ್ರ ಮೂರ್ತಿ ಅಶಕ್ತನಾಗಿದ್ದನೆ ? ಆದರೂ ಕೋಡಗ ಗಳನ್ನು ಕರೆಸಿ ಸೇತುವೆ ಕಟ್ಟಿ ಧಾಳಿಮಾಡಿ ಕದನಹೂಡಿ ಲಗ್ಗೆ ಹತ್ತಿದ್ದೇಕೆ? ಕನ್ನಹಾಕಿ, ಕೈಕಾಲು ಕಟ್ಟಿ, ಕೈನೀಡಿ ಕಂಡವರು ಕೊಡುವ ಕದನ್ನ ತಿಂದರೆ ಗೌರವವೇ? ಕಾಸಿಗೆ ಮೂರು, ಕೊಸರಿಗೆ ನಾಲ್ಕು ಅಂತ ಬಿರುದುಗಳನ್ನು ಮಾರಿದರೆ, ಕೊಂಡುಕೊಳ್ಳುವವನು ದಡ್ಡ, ಅಷ್ಟೆ" ಅಂತ ರೇಗಿದರು ಅಲ್ಲಿಗೆ ಆ ಮಾತು ನಿಂತುಹೋಯಿತು ಸಾರ್! ಆದ್ದರಿಂದಲೇ ನಾನು, ಬರೀ ಕಾಶೀಪತಿ ಆಗಿ ಉಳಿದೆ.

ಆದರೂ ಗುಂಡಪ್ಪ ನಮ್ಮೂರಿಗೆ ಬಂದು ನಾಲ್ಕಾರು ದೊಡ್ಡ ಮನುಷ್ಯ ರನ್ನು ಕಂಡು, ಅವರೆದುರು ಕುರ್ಚಿಯಲ್ಲಿ ಕುಳಿತು, ಕಡೆಗೆ ನನ್ನ ಆಫೀಸಿನಲ್ಲೇ ಮೂವತ್ತೈದು ರೂಪಾಯಿನ ಕೆಲಸ ದಕ್ಕಿಸಿಕೊಂಡು ನನ್ನ ಮೇಲೆ ಸವಾರಿಗೆ ಸಿದ್ಧವಾದಾಗ ನನ್ನ ಮನೋವೇದನೆ ನೀವೆ ಊಹಿಸಬಹುದು "ಕರ್ನೂಲು ಪರದೇಶಿ" ಅಂತ ನನ್ನ ತಾತ ಹೇಳುತ್ತಿದ್ದ ಈ ಮನೆತನದವರು, ಹೊಕ್ಕ ಗುಡಿ ಹಾಳು ಮಾಡಿದರು ತಾವು ಜೀತ ಮಾಡಿದ ಮನೆಯ ಹುಡುಗನ ಮೇಲೆ ಈತ ಅಧಿಕಾರಮಾಡಿ ದರ್ಪ ತೋರಿಸುವಂತಾಯಿತೆ! ವಿಧಿ ವಿಲಾಸ" ಅಂತ ತುಂಬಾ ಮನನೊಂದೆ. ಸದ್ಯಕ್ಕೆ ಅಷ್ಟು ಹೊತ್ತಿಗೆ ನನ್ನ ತೀರ್ಥರೂಪರು ಕಣ್ಣು ಮುಚ್ಚಿದರು, "ನೀನೇನು ಮಾಡುತ್ತೀಯಾ? ಕಾಶೀ! ಎಲ್ಲಾ ಆ ವಿಶ್ವೇಶ್ವರನ ಶಾಪ" ಅಂತ ಹೇಳಿ ನನ್ನ ಬೆನ್ನು ಸವರಿ ಅವರು ಬೆನ್ನು ತಿರುಗಿಸಿದರು

ಗುಂಡಪ್ಪ ತನ್ನ ಬಿ ಎ ಬಲದಿಂದ ಒಂದೆರಡು ವರ್ಷದಲ್ಲೇ ನನ್ನ ಸೋದರತ್ತೆ ಗಂಡನ ಸೀಟಿಗೆ ಬಂದ. ಅಲ್ಲಿಂದ ಮುಂದಕ್ಕೆ ಹತ್ತದ ಹಾಗೆ ನಾನು ಭಗೀರಥ ಪ್ರಯತ್ನ ಮಾಡುತ್ತಿದೇನೆ ಅನ್ನಿ! ಏಕೆಂದರೆ, ತಲೆ ತಿರುಗಿ ಬಿಡುತ್ತದೆ, ಎತ್ತರದಲ್ಲಿ ಕುಳಿತರೆ. ತಾನು ಯಾರು, ಎಲ್ಲಿಂದ ಬಂದೆ, ಯಾತಕ್ಕಾಗಿ ತನ್ನನ್ನು ಇಲ್ಲಿಗೆ ತಂದರು, ತನ್ನ ಹಿತಚಿಂತಕರು ಯಾರು, ಎಲ್ಲಾ ಮರೆತುಹೋಗುತ್ತೆ, ಸಾಲದ್ದಕ್ಕೆ, ಅವನಿಗೆ ಯಾರೋ ಅಮಲ್ದಾರರು ಬೇರೆ ಹೆಣ್ಣು ಕೊಟ್ಟರು. ಆಕೆ ಬಂದ ಗಳಿಗೆ, ಮಾವ ಹರಹರ ಅಂದ, ಆಯುರ್ವೇದ ಅವನನ್ನ ಕಾಪಾಡಲಿಲ್ಲ! ವಿಶ್ವೇಶ್ವರ ಹೊದೆದುಕೊಂಡೇ ಹೋದ, ಆಯುರ್ಭೇದವನೇ ಆಗಿ ಹೋಯಿತು ಸರಿ, ಪ್ರಾರಂಭವಾಯಿತು, ಗುಂಡಪ್ಪನಿಗೆ ಖರ್ಚು ವೆಚ್ಚಾದಿಗಳು. ದೊಡ್ಡ ಕಡೆ ಹೆಂಡತಿ, ನಂಟರಿಷ್ಟರು ಒಪಳ ಮನೆಯಲ್ಲಿ ಅಜ್ಜಿ, ತಾಯಿ ಇಬ್ಬರು ವಿಧವೆಯರು; ಹೆಡ್‌ಗುಮಾಸ್ತೆ ಎಂಬ ಚತುರ್ಭುಜ! ನಾಲ್ಕೂ ಕೊಡುಗೈಗಳೇ! ಹಬ್ಬ, ಹರಿದಿನ, ಖಾಯಿಲೆಕಸಾಲೆ, ಮಕ್ಕಳು ಮರಿ, ವ್ರತ, ಬಾಗಿನ, ಶ್ರಾದ್ಧ, ದಕ್ಷಿಣೆ, ವಾರದ ಹುಡುಗರು ಸುವಾಸಿನಿಯರು, ಅಂತ ಪ್ರಾರಂಭ, ಅತ್ತೆ ಸೊಸೆ ಅಂದರೆ ತೋಳ ಕುರಿ! ಮೊನ್ನೆ, ಅರ್ಧಮನೆ ಭೋಗ್ಯಕ್ಕೆ ಕೊಡೋಣವೇ ಸೊಸೈಟಿ ಸಾಲ ತೀರಿಸುವುದಕ್ಕೆ ಅಂತ ಅವನ ತಾಯಿ ಯಾರನ್ನೋ ವಿಚಾರಿಸುತ್ತಿದ್ದರೂಂತ, ಯಾರೋ ಹೇಳಿದರು. ದಡ್ಡ! ದೇವರು ಕೊಟ್ಟ ಬುದ್ಧಿ ಉಪಯೋಗಿಸಿ ಸಂಬಳದ ಜೊತೆಗೆ ಶಾಖಾಯ ಶೀತಾಯ ಒಂದಿಷ್ಟು ಮಾಡಬಾರದೆ? ಅದೇನೊ ಗಾಂಧಿಯಂತೆ, ಗೀತೆಯಂತೆ, ನರಕದಲ್ಲಿ ಅಂಥಾವರ ಗಂಟಲೊಳಕ್ಕೆ ಕಾಸಿದ ಚಿನ್ನ ಹುಯ್ಯುತ್ತಾರಂತೆ! ಏನೇನೊ ಹೆದರಿಕೆ! ಬಾಯಿ ತೆರೆದರೆ ಸಾಕು, ಅವರಾಗಿಯೇ ಬಂದು ಹಾಕಿಬಿಟ್ಟು ಹೋಗುತ್ತಾರೆ, ಆದರೆ ಇವನು ಬಾಯಿ ಮುಚ್ಚಿಕೊಂಡೇ ಕೂತರೆ? ಒಡತನ ಹೋಗುವುದು ಯಾವಾಗ? ನಾವೇನಾದರೂ ಕೈಬೆಚ್ಚಗೆ ಮಾಡಿಕೊಂಡರೂ ಇವನಿಗೆ ಸಹನೆ ಇಲ್ಲ. ಹುಲ್ಲಿನ ಮೆದೆ ಮೇಲೆ ಬಿದ್ದಿರೋ ನಾಯಿ ಹಾಗೆ, ಸದಾ ಬೊಗಳುತ್ತಾನೆ. ಆದರೆ, ಸಾಹೇಬರುಗಳೇ ನಮ್ಮ ಕಡೆ ಇರುವಾಗ ನಾವಿವನಿಗೆ ಹೆದರುತ್ತೇವೇನು?

ಬಿ. ಎ, ಬಿ ಎ, ಅಂತ ಜಂಭ ಬೇರೆ ಇವನಿಗೆ. ಊರಿಗೊಬ್ಬಳೇ ಪದ್ಮಾವತಿ ಮಾರುಹೊತ್ತೂ ಕೈಯಲ್ಲೊಂದು ಪುಸ್ತಕ, ಈ ಸರಸ್ವತಿ

ಮುರುಕಿಗೆ! ಈ ಊರಿಗೆ ಹಿಂತಿರುಗಿದ ತಕ್ಷಣ ಆಗಾಗ ಒಂದೊಂದು ಇಂಗ್ಲೀಷ್ ಪುಸ್ತಕ ಹಿಡಿದುಕೊಂಡು ಬರುತ್ತಿದ್ದ ಈಗ ಸಂಪೂರ್ಣ ಕನ್ನಡಕ್ಕೆ ಇಳಿದಿದಾನೆ ನಮ್ಮೂರು ಲೈಬ್ರರಿಯಲ್ಲಿರುವುದೊಂದೂ ಬೇಡವಂತೆ ಅವನಿಗೆ ತಾನೇ ಕಾಸು ಕೊಟ್ಟು ಕೊಂಡುಕೊಳ್ಳಬೇಕಂತೆ ಹೇಗಿದೆ ಚಟ? ನಾವೆಲ್ಲ ಪುಸ್ತಕ ಓದದೆ ಕಾಲಕಳೆಯುತ್ತಿಲ್ಲವೇನು? ನಮ್ಮ ಶೀನಪ್ಪನ ಹೋಟಲಿಗೆ ಹೋಗಿ ಸಂಜೆ ಒಂದುಗಂಟೆ ಹರಟೆ ಹೊಡೆದರೆ ಜಾಗತಿಕ, ಭಾರತೀಯ, ಕರ್ನಾಟಕೀಯ, ನಾಟಕೀಯ, ಸಿನಿಮೀಯ ಎಲ್ಲಾ ದೊಡ್ಡ ಪುಟ್ಟ ಸಮಸ್ಯೆಗಳೂ ಆಮೂಲಾಗ್ರ ಬರುತ್ತವೆ ಭೂಮಾತೆ, ಗೋಮಾತೆ, 'ಅಣ್ಣ' ದೇವರು, 'ಚಿಲ್ಲರೆದೇವರು' ಎಲ್ಲರಿಗೂ ಅಲ್ಲಿ ಮಂಟಪೋತ್ಸವ ಮುಖ್ಯವಾಗಿ ನಮ್ಮ ನಮ್ಮ ಜೀವನವನ್ನು ಸುಗಮವಾಗಿ ನಾಗಿಸಲು ಬೇಕಾದ ಭವಿಷ್ಯಪುರಾಣದ ಪಠನವಾಗುವುದು ನಮ್ಮ ಶೀನಪ್ಪನ ಅಂಗಡಿಯಲ್ಲಿ ನಾನು ಸಾಮಾನ್ಯವಾಗಿ ಸಂಸಾರಾ, ದಾಮಾದವಾ, ಜೂಜಿ, ತೇಜಿ ಎಲ್ಲವನ್ನೂ ಭವಿಷ್ಯ ನೋಡಿಯೇ ನಡೆಸೋದು 'ನಿಮ್ಮ ಸಾಡೇಸಾತಿ ತಪ್ಪುವುದಿಲ್ಲ, ಓಹೋ ಋಷಿ ಆನಂದ್, ಮುಝ್ಕಾ, ಬಹಳ ಬಹಳ ರೀಕ್ ರೀಕ್, ಬಂಪ ಮುಡ್ಡಿಲ್ಲ ಬುರ್ ಭುಷ್, ಸಂಶಯಾತ್ಮಾ ವಿನಶ್ಯತಿ ಹುಷಾರಿ ಪರಮ ಹುಷಾರಿ,' ಅಂತ ಭವಿಷ್ಯಕಾರರು ಕೇವಲ ನಾವು ಕೊಡುವ ಒಂದಾಣೆಗಾಗಿ ನಮ್ಮನ್ನು ಎಚ್ಚರಿಸುವಾಗ, ನಾವು ಎಚ್ಚರಗೊಳ್ಳದಿರುವುದು ಅನಾರ್ಯಜುಷ್ಟವೂ ಅಸ್ವರ್ಗ್ಯವೂ ಅಕೀರ್ತಿಕರವೂ ಅಲ್ಲವೇ? "ಸಂಶಯಾತ್ಮಾ ವಿನಶ್ಯತಿ" ಎಂಬ ಸೂಚನೆಯನ್ನು ನಮ್ಮ ಭವಿಷ್ಯಕಾರರು ಕೊಟ್ಟರೆ, ಆ ವಾರ ನಾನು ಆಫೀಸಿಗೆ ಬಂದ ರೈತರಿಂದ ಲಂಚ ತಗಿಯಲು ಸಂದೇಹಪಡುವುದೇ ಇಲ್ಲ ಏಕೆ ಪಡಬೇಕು?

ಶೀನಪ್ಪನ ಹೋಟಲಿಗೆ ಒಂದು ದಿನ ನಾನು ಗುಂಡಪ್ಪನನ್ನೂ ಕರೆದುಕೊಂಡು ಹೋಗಿದ್ದೆ ಆದರೆ ಅವನ ಬುದ್ಧಿಯನ್ನು ತಿದ್ದೋಕೆ, ನನ್ನಿಂದಾಗಲಿಲ್ಲ ಗುರುವಿಗೆ ತಿರುಮಂತ್ರ ಎಂಬ ಹಾಗೆ ಅವನು ನನ್ನನ್ನೇ ತಿರುಗಿಸಲು ಪ್ರಯತ್ನಿಸಿದ ನಾನು ಭವಿಷ್ಯಕಾರರ ಮಾತಿನಲ್ಲೇ ಅವನಿಗೆ ಉತ್ತರಕೊಟ್ಟೆ, "ಗುಂಡಪ್ಪನವರೇ!" ಅಂದೆ ಹೆಡ್ ಗುಮಾಸ್ತೆ ಪಟ್ಟಕ್ಕೆ ಬಂದ ಮೇಲೆ ನಾನು 'ನವರೇ' ಸೇರಿಸಿ ಅವನನ್ನ ಮೂದಲಿಸುತ್ತಿದ್ದೆ "ಗುಂಡಪ್ಪನವರೇ! ಈ ಪೇಪರು ನೋಡಿ ನೀವು ಅದರಲ್ಲಿ ಏನು ಹೇಳುತ್ತಾರೆ, ನಮ್ಮ ಹೋರಾ ವಿದ್ವಾಂಸರು

ನನ್ನ ವಿಷಯವಾಗಿ ಅಂದರೆ—ನನ್ನ ರಾಶಿ ಸಿಂಹ!—ಕೇಳಿ, 'ನೀವೇನು ಕನ್ಯಾ ರಾಶಿಯು ಕೋಪುಲರಲ್ಲ, ಕುರ್ ಕುರ್ ಎನ್ನುವ ಸ್ವಭಾವ ನಿಮ್ಮಲ್ಲಿಲ್ಲ ಸಲ್ಲದ ಸೊಲ್ಲಿನ ಸಮಾಚಾರಗಳನ್ನು ಮನಸ್ಸಿಗೆ ತಂದುಕೊಂಡು ನೀವು ಕೊರಗುವುದಿಲ್ಲ ನಿಮ್ಮದು ಯಾವ ರಾಶಿ? ಸಿಂಹವಲ್ಲವೆ? ಆದ್ದರಿಂದ ಶರೀರನದಂತೆ ಧೈರ್ಯಶಾಲಿಗಳೂ ಪರಾಕ್ರಮಶಾಲಿಗಳೂ ಆಗಿ ಶತ್ರುಗಳನ್ನು ನಿಮ್ಮ ಮುಷ್ಟಿಯಲ್ಲಿ ಹಿಡಿಯಿರಿ! ಅಂತೂ ಈ ವರ್ಷ ನಿಮ್ಮ ಶತ್ರುಗಳಿಗೆ ಚೆನ್ನಾಗಿ ಕೃತಜೋರಿಸುವ ಸಮಯ ಬರುವುದ! ನೋಡಿದಿರಾ? ಇದರಿಂದ ನನಗೆ ಎಷ್ಟು ನೆಮ್ಮದಿ, ಎಷ್ಟು ಉತ್ಸಾಹ, ಎಷ್ಟು ತಿಳಿವಳಿಕೆ ಬಂದಿದೆ ಗೊತ್ತೆ?" ಅಂದೆ ಗುಂಡಪ್ಪ ಮತ್ತೆ ಶೀನಪ್ಪನ ಅಂಗಡಿಗೆ ಬರಲೇ ಇಲ್ಲ

ನನ್ನ ಅದೃಷ್ಟಕ್ಕೆ ಸರಿಯಾಗಿ ನಾರಣಯ್ಯನವರು ಸಾಹೇಬರಾಗಿ ಬಂದರು ಹೆಂಡತಿ ಹೆಸರಿನಲ್ಲಿ ಇದೇ ಬೀದಿಯಲ್ಲಿ ಇನ್ನೊಂದು ಮನೆ ಕೊಂಡು ಕೊಂಡೆ ಎಂಟು ರೂಪಾಯಿ ಬಾಡಿಗೆ ಬರುತ್ತೆ ಎಲ್ಲಿಗಾದರೂ ಸರ್ಕೀಟ್ ಹೋದರೆ ನಾರಣಯ್ಯನವರು ನನ್ನನ್ನೇ ಕರೆದುಕೊಂಡು ಹೋಗುತ್ತಿದ್ದರು. ಹಾಲು ಮೊಸರು ಚೆನ್ನಾಗಿ ತುಂಬ ತುಂಬ ತರಿಸುತ್ತಿದ್ದೆ ಗುಂಡಪ್ಪನಿಗೆ ಅದು ಸಹಿಸಲಿಲ್ಲ ಸಾಹೇಬರ ಮಗುವಿಗೆ ಈ ಊರಿನ ಜ್ವರವ್ಯತುವಿನಲ್ಲಿ ಕೊಂಚ ವೈ ಬೆಚ್ಚಗಾದಾಗ ತಂದೆಯವರ ಡಬ್ಬಿಯಿಂದ ಯಾವುದೋ ಚೂರ್ಣತಂದು ಜೇನುತುಪ್ಪದಲ್ಲಿ ತಿನ್ನಿಸಿದ ಜೇನುತುಪ್ಪ ಒಳ್ಳೇದು ಅಂತ ಕಾಣುತ್ತೆ ಜ್ವರಕ್ಕೆ ಅದು ನಿಂತುಹೋಯ್ತು ಸರಿ! ಅವನು ಅತ್ತಲಾಗೆ ಎಳೆಯುವುದು, ನಾನು ಇತ್ತಲಾಗೆ ಎಳೆಯುವುದು ಹೀಗೆ ಜಗ್ಗಿಸಿ ಜಗ್ಗಿಸಿ ಕೆಡೆಗೆ ನಾರಣಯ್ಯನವರು ನನ್ನ ಕಡೆಗೇ ಒಲಿದರು ಗುಂಡಪ್ಪನಿಗೆ ದಿನವೂ ಪ್ರಕ್ಷಾಳನೆ! ಆಫೀಸ್ ಕೆಲಸ, ಎಷ್ಟೋ ಅಷ್ಟೇ ನಾನು ಮಾಡುವುದು ಅಂತ ಹಟ ತೊಟ್ಟರೆ ಆಗುತ್ತದೆಯೇ? ತಲೆಗೆ ಸಿಂಬಿಸುತ್ತಿದ ಮೇಲೆ ಯಾವುದಾದರೇನು, ಹೊತ್ತು ಬಿಸಾಡಲೇಬೇಕು ಈ ಗುಟ್ಟು ನಿಮ್ಮ ಗುಂಡಪ್ಪನಿಗೆ ತಿಳಿಯದು ಅದಕ್ಕೇ ಹೊಸಸಾಹೇಬರ ಹತ್ತಿರವೂ ಮೊದಲನೆಯ ದಿನದಿಂದಲೂ ತಿಸ್ರ, ತಿಕ್ಕಾಟ, ತಾಪತ್ರಯ ದಿನಬೆಳಗಾದರೆ, ಸಹಸ್ರನಾಮ ನಾನೂ ನನ್ನ ಕೈಲಾದಷ್ಟು ಹೇಳಿನೋಡಿದೆ ಸಾಹೇಬರಿಗೆ, "ಬಡವ, ಸ್ವಾಮಿ", 'ಬಿ ಎ, ಸ್ವಾಮಿ" ಅಂತ ಗುಂಡಪ್ಪ ನಿಗೂ ಹೇಳಿದೆ, ಸಾಹೇಬರು ರೇಗಿದ್ದಾರೆ, ಹುಷಾರಾಗಿರಿ, ಮಾರಭವಿಷ

ನೋಡಿಕೊಂಡು "ಮುಕಮಲ್ ಟೋಪಿ" ತಪ್ಪಿಸಿಕೊಳ್ಳುವುದಕ್ಕಾಗಿ ನೂರೆಂಟು ಸರಿ "ಶ್ರೀದತ್ತ ಜಪಮಾಡಿ" ಅಂತ ಕಿವಿಗೆ ಹಾಕಿಗೊಂಡರೆ ತಾನೆ? ಅನುಭವಿಸಲಿ, ನನಗೇನು? ಈಗೇನೋ ಸಾಹೇಬರು ಬರೆದೇ ಬಿಟ್ಟಿದ್ದಾರಂತೆ, ವರ್ಗ ಮಾಡಿಬಿಡಿ, ಅಂತ! ನೆನ್ನೆ ಹೇಳಿದರು- ಯಾರಿಗೂ ಹೇಳಬೇಡ, ಅಂತ ಇನ್ನು ಇವನು ಸಂಸಾರಾ ಸಾಗಿಸಿ ಆ ಮುದುಕಿಗೋ, ಸದಾ ಖಾಯಿಲೆ—ಇವನ ಮನೆಯಲ್ಲೋ—ಅಕೋ! ಸಾಹೇಬರು ಇದೇ ರಸ್ತೇಲೇ ಬರುತ್ತಿದ್ದಾರೆ ಸಾರ್!—ನೀವು ಹೊರಡಿ ಸಾರ್, ಇನ್ನು——ಆ ಮೇಲೆ ಸಿಕ್ಕುತ್ತೇನೆ——

## ಸಹೋದ್ಯೋಗಿಯ ಪ್ರಸಾರ ಮುಗಿಯಿತು

---

ಮಾತು ಹೊಲಸಿನ ಗಂಧವಾಗಿದೆ
ಭೀತಿರಸದಲಿ ಮುಳುಗಿತೀ
ಪ್ರೀತಿಮಾರಿಯು ಮುಸುಕನ್ನಾಗಿವುದನಾರು ಕಲಿಸಿದರು?

—ನಾರಣಪ್ಪ

ನರೆ ಕಪಿಗಳು ಸಹಜಾತರೇನೋ?

—ತ್ಯಾಗರಾಜ (ಭಾಷಾಂತರ)

ನಿನ್ನ ಗೂಡು ಎಲ್ಲಿ— ಹಕ್ಕಿ?
ಇಲ್ಲಿ ಬಂದು ಹೇಗೆ ಸಿಕ್ಕಿ?

—ಸಿಂಪಿ ಲಿಂಗಣ್ಣ

## ೩ : ಈರವಾಣಿ

ಬಿಡಿ, ಬುದ್ಧಿ! ಗಂಡಪ್ಪಾವರನ್ನ ನಾ ಕಾಣೆನೇ? ಚೆನ್ನಾಯಿತು. ಯಾವ ಸೀಮೆ ಮಾತು? ಈ ಆಫೀಸೊಳಗೆ ಅವರು ಕಾಲಿಟ್ಟು ಆರು ವರ್ಷ ಆಯಿತು, ಅಷ್ಟೇನೆ ಆದರೂವೆ, ಅವರ ಅಪ್ಪಾವರು– ಪಂಡಿತರು– ಅವರನ್ನ ಕೊಂಕುಳಲ್ಲಿ ಎಡ ಮಗ್ಗುಲಾಗೆ ಎತ್ತಿಕೊಂಡು ಆಂಜನೇಯನ ಗುಡೀಲಿ ಹರಿಕಥೆಗೆ ಹೋಗುತ್ತಿದ್ದಾಗಲೇ ಕಂಡಿದೀನಿ ಇವತ್ತೂನೂ ಕಣ್ಣಿಗೆ ಕಟ್ಟಿದ ಹಾಗಿದೆ, ನನ್ನ ಹೆಂಡತಿ, ಪಂಡಿತರ ಮನೆ ಪಕ್ಕದ ಮನೆಗೆ ಹಾಲು ಮೊಸರು ವರ್ತನೆ ಕೊಡುತ್ತಿದ್ದಳು ಅವಳು ಕಣ್ಣೀರು ಬಿಡುತ್ತಾ ಹೇಳೋಳು ಕಥೇನ "ಪಾಪ, ಆ ಪಂಡಿತರಿಗೆ ದೇವರು ಕೊ, ಅನ್ನೋದು; ಕೊಡು ಅನ್ನೋದು, ಹೀಗೆ ಆಟ ಆಡಿಸಿ ಕಾಟ ಕೊಟ್ಟು, ಮೂರು ಹೆಣ್ಣು ಒಂದು ಗಂಡು ತೊಟ್ಟಿಲಿಂದ ಮೆಟ್ಟಲಿಗೆ ಇಳೀಲೇ ಇಲ್ಲ. ಊರೂರಿಗೇನೆ ಔಷಧಿ ಕೊಡೋ ಧನ್ವಂತ್ರಿಗೆ ಆ ಮಾತಾಯಿ ಹೊಟ್ಟೆ ಗಟ್ಟಿ ಮಾಡೋ ಮಂತ್ರ ತಿಳೀಲಿಲ್ಲ ಅಂದ್ರೆ ಕೇಳಿದೋರೆಲ್ಲ ಮೂಗಿನ ಮೇಲೆ ಬೆರಳಿಡ್ತಾರೆ ಕಂಡವರ ಮಕ್ಕಳನ್ನ ಕಸಿದುಕೊಂಡದ್ದಕ್ಕೆ ಚಿತ್ರಗುಪ್ತ ಏನಾರಾ ಹಿಂಗೆ ಪಂಡಿತರ ಮೇಲೆ ಸೇಡು ತೀರಿಸಿದನೋ ಏನೋ. ದೇವರು ಬಲ್ಲ" ಅಂತ ಅಂತು ಇಂತು ಒಂದು ಗಂಡು ಹೀಚು, ಒಂದು ಹೆಣ್ಣು ಹೀಚು. ಉಳಿದುಕೊಂಡವು, ಹೆಣ್ಣೇ ಕಿರೀದು.

ಆ ಮುದುಕಿಗೂ, ಆ ತಂದೆ ತಾಯಿಗೂ ಈ ಗಂಡಪ್ಪಾವರೇ ಜೀವ ಇವರ ಮೇಲೇನೆ ಅವರ ಪಂಚಪ್ರಾಣಾನೂವೆ ಈ ಹುಡುಗನೋ ಬಲು ಸೂಕ್ಷ್ಮ ಮಂಗಳಾರತಿ ತಟ್ಟೆ ಹತ್ತಿರ ಹೋದರೆ ಉಷ್ಣ! ತೀರ್ಥದ ಬಟ್ಟಲು ತಂದರೆ ಶೀತ! ಪ್ರಸಾದ ಬಾಯಿಗೆ ಹಾಕಿಕೊಂಡರೆ ಅಜೀರ್ಣ! ಮಲ್ಲಿಗೆ ಹೂವಿನ ಹಾಗಿರೋ ಮೈ ಬಣ್ಣವೋ ಕಸ್ತೂರೀದೇ, ನೀವೇ ನೋಡಿದರಲ್ಲಾ ಬುದ್ಧೀ, ನಮ್ಮ ಗುಂಡಪ್ಪವರನ್ನ! ಆದರೂ, ಪಂಡಿತರು ಕಣ್ಣಿಗೆ ಎಣ್ಣೆ ಹಾಕಿ, ಕಿವಿಗೆ ಹತ್ತಿ ತುರುಕಿ, ಹೊಟ್ಟೆಗೆ ಕಷಾಯ ಹುಯ್ದು, ತೋಳಿಗೆ ತಾಯಿತ ಕಟ್ಟಿ ಮೂಗಿಗೆ ಮೂಲಿಕೆ ಹಿಂಡಿ, ಒಳಗಿನ ಪಕ್ಷಿ ಹಾರಿಹೋಗದ ಹಾಗೆ ನೋಡಿಕೊಂಡರು, ನಾಲ್ಕೈದು ವರ್ಷ ಬೆನ್ನ ಮೇಲೆ ಬೇರೊಂದು ಕೂಸು ಬರೋ ಹೊತ್ತಿಗೆ ಈ ಮಗು ಚೇತರಿಸಿಕೊಂಡು ಬಿಟ್ಟಿತ್ತು.

ಆಗಿನ ಸಾಹೇಬರ ಮನೆಗೆ ನಾನು ನನ್ನ ಹಟ್ಟಿಯಿಂದ ಹೋಗೋದು ಒರೋದು ಪಂಡಿತರ ಮನೆ ಮುಂದುಗಡೆ ರಸ್ತೆ ಮೇಲೇನೆ. ಸಂಕ್ರಾಂತಿಗೊಂದು ಸಾರಿ ಯುಗಾದಿಗೊಂದು ಸಾರಿ ಅಂತಾರಲ್ಲ ಹಾಗೇನೆ ನಾನೂನೂ ಅವರ ಮನೆಗೆ ನುಗ್ಗುತ್ತಿದ್ದೆ ನನ್ನ ಜನರಿಗೇನು ಕೊಬ್ಬೇ, ಪಿತ್ತವೇ, ತಲೆತಿರುಗೇ ಖಾಯಿಲೆ ಬೀಳೋಕೆ? ಆದರೂ ಆವಾಗೊಂದು ಸಾರಿ ಈವಾಗೊಂದು ಸಾರಿ ಹೆಚ್ಚು ಜನ ಇಲ್ಲದ ಹೊತ್ತು ನೋಡಿಕೊಂಡು ಒಳಗೆ ನುಗ್ಗುವೆ ಯಾರೋ ಅನ್ನೋರು ಪಂಡಿತರು, 'ಈರ, ಬುದ್ಧಿ' ಅನ್ನುವೆ, ನಾನು 'ಏನೋ ಅನ್ನುವರು' ಬುದ್ಧಿಯವರು, ಸುಮ್ಮನೆ ತಲೆ ಕರೆಯುತ್ತಾ ನಿಂತುಕೊಳ್ಳುವೆ, ಮಕ್ಕಳಿಗೇನಾರಾ ಒಸಿ ಸೀಯಾದ್ದುಲೇಹ ಕೊಡಿ ಅಂತ ಸೂಚನೆ ಕೊಡವೆ! ಪುಣ್ಯಾತ್ಮರು ಕೊಡೋರು ನಲ್ಲಿಕಾಯಿ ಗಾತ್ರದ್ದು ಎರಡು ಉಂಡೇನ ಅವರಿಗೆ ಗೊತ್ತು ನಮ್ಮ ಮನೇಲಿ ಹೈಕಳೆಷ್ಟು ಅಂತ! ಅಲ್ಲಿಂದ ಓಟಕಿತ್ತೆ ಅಂದರ ಮನೆಬಾಗಿಲಿಗೆ ಬಂದೇನೆ ನಿಲ್ಲೋದು ನಾನು!

ಒಂದು ದಿವಸ ನಮ್ಮ ಗುಂಡಪ್ಪಾವರು—ಆಗಿನ್ನೂ ಅವರಿಗೆ ಏಳು ವಯಸ್ಸು, ಪಡಸಾಲೆ ಮೇಲೆ ಕೂತು ಕಿವಿ ತೂತು ಬೀಳುವ ಹಾಗೆ ಓದುತ್ತಿದ್ದರು ಅದೆಂಥಾದೋ ಭಾಷೆ! ಪರಂಗಿಯವರ ಭಾಷೇನ, ಅವರು ಅಷ್ಟು ಗಟ್ಟಿಯಾಗಿ ಕಿರಿಚಿದ್ದು-- ನಾನು ಕೇಳಿಲ್ಲ, ಅವರನ್ನೇ ಕೇಳಿದೆ ಹೌದು ಅಂದರು ಆಗ ನಾನು "ಚಿಕ್ಕ ಪಂಡಿತರೇ! ನಿಮ್ಮ ಹೆಸರೇನು ಹೇಳುತ್ತೀರಾ" ಅಂದೆ ಅವರು ನನ್ನ ಕಡೆ ತಿರುಗಿ, "ಕೇಡಿ ಗುಂಡಪ್ಪ" ಅಂದರು ನನಗೆ ಎದೆ ಒಡೆದುಹೋಯಿತು. ಚೋಟುದ್ದದ ಹೈದ ಕೇಡಿ ಅನ್ನುವ ಮಾತು ಎಲ್ಲಿಂದ ಆಯಿತು? ನಾನೊಂದು ಕೇಳಿದರೆ, ಮಗು ನನ್ನನ್ನೇ ಥಂಗ್ ಮಾಡಿತಲ್ಲಾ, ಅಂತ, ಹಂಗೇನೆ ಕೂತುಕೊಂಡೆ. ಆ ಮೇಲೆ, "ಹಾಗೆಲ್ಲ ಅನ್ನಬಾರದು, ದೇವರು! ಅವೆಲ್ಲ ಕೆಟ್ಟ ಮಾತು ಕಣಪ್ಪ!" ಅಂದ ಕಿರ್ರೋ ಅಂತ ಅಳುತ್ತಾ ಗುಂಡಪ್ಪಾವರು ಒಳಗೆ ಹೋದರು ಇದೆಂಥ ಪಾಪ ಕೆಲಸ ಅಂತ ನಾನೂ ಮೆಲ್ಲಗೆ ಅಲ್ಲಿಂದ ನುಸುಳಿಕೊಂಡೆ ನನಗಿದೆಲ್ಲಾ ಮರೆತೇ ಹೋಗಿತ್ತು ಮೂರು ನಾಲ್ಕು ವರ್ಷ ಕಳೆದು ಒಂದು ದಿನ ಪೋಲೀಸ್ ಸ್ಟೇಷನ್ ಮುಂದುಗಡೆ ಯಾರೋ ನನ್ನನ್ನ "ಅಯ್ಯಾ!" ಅಂದರು. ಜಾತಿಕಟ್ಟ ಜವಾನನ್ನ ಹೀಗೆ ಯಾರಪ್ಪ ಗೌರವ ಮಾಡೋರು, ಅಂತ ತಿರುಗಿದೆ, ಗುಂಡಪ್ಪಾವರು!

"ಅಯ್ಯಾ! ನೀನು ಹೇಳಿದ್ದು ಗೊತ್ತಾಯಿತು ಕೇಡಿ ಬಿಟ್ಟುಬಿಟ್ಟೆ ಬರೀ ಡಿ ಮಾತ್ರ ಇಟ್ಕೊಂಡಿದ್ದೀನೆ" ಅಂದರು. ನನಗೆ ಅರ್ಥವಾಗಲಿಲ್ಲ ಕೇಡಿಗಳನ್ನ ಬಿಡೋದು ಅಂದರೇನು? ಬಿಟ್ರೂ ಪೋಲೀಸ್‌ನವರಿಗೆ ಕೇಳಿಸುವ ಹಾಗೆ ಯಾರಾದರೂ ಕೂಗಿ ಹೇಳುತ್ತಾರೆಯೇ, ಅಂತ ಕಂಗಾಲಾದೆ. ಆಮೇಲೆ ಅವರೇ ನೆನಪು ಕೊಟ್ಟರು, ಕಡೆಗೆ "ಡೀ ನೂವೇ ತೆಗೆದು ಹಾಕಿಬಿಡಿ, ಬುದ್ಧಿ! ಆ ಹಾಳು ಸಹವಾಸಾನೇ ಬೇಡ" ಅಂದೆ ಆವರು ನಗುನಗುತ್ತಾ ಹೊರಟು ಹೋದರು ಇವತ್ತಿಗೂವೇ 'ಡಿ' ಅಂತ ಇಟ್ಟೇ ಇದ್ದಾರೆ

ಗುಂಡಪ್ಪನವರೂ ಆಗಿನ ಸಾಹೇಬರ ಮಗನವರೂ ಹನ್ನೆರಡು ರೂಪಾಯಿ ಪರೀಕ್ಷೆಗೆ ಒಂದೇ ಗಾಡೀಲಿ ಹೊರಟರ, ಈ ಊರಿಂದ 'ಇಸ್ಕೂಲಾಗೆ ಬುದ್ಧಿವಂತ ಹುಡುಗ ಯಾರು, ಅವರ ಜೊತೇಲೇ ನಮ್ಮ ಪುಟ್ಟ ಬುದ್ಧಿ ಓದಬೇಕು ದಿನಾಲು ರಾತ್ರಿ ಹನ್ನೆರಡು ಗಂಟೆತನಕ' ಅಂತ ನಮ್ಮ ಸಾಹೇಬರು ಹುಕುಂ ಮಾಡಿದ್ದರು. ನಡೆಯಿತು, ಬುದ್ಧಿ, ಒಂದು ಪೈಪೋಟಿ! ನನ್ನ ಮಗು ತನ್ನ ಮಗ ಅಂತ ಇದ್ದ ಬದ್ದ ದಡ್ಡರನ್ನೆಲ್ಲ ಸಾಹೇಬರ ಮನೆ ಬಾಗಿಲಲ್ಲಿ ತಂದು ನಿಲ್ಲಿಸಿದರು. ಕೊನೆಗೆ ದಮಯಂತಿ ಸ್ವಯಂವರ ಮಾಡಿದ ಹಾಗೆ ನಮ್ಮ ಪುಟ್ಟ ಬುದ್ಧಿಯವರು ಗುಂಡಪ್ಪನವರ ಕೊರಳಿಗೇ ಮಾಲೆ ಹಾಕಿ ಮನೆಯೊಳಕ್ಕೆ ಎಳಕೊಂಡರು. ಅವರಿಬ್ಬರೂವೆ ಬಲು ಬಲು ಸ್ನೇಹ, ಬುದ್ಧಿ. ಅವಲಕ್ಕಿ ಮೊಸರು ಇದ್ದಂಗೆ, ಬ್ಲಾಟಿಂಗ್ ಕಾಗಜ ಶಾಯಿ ಇದ್ದಂಗೆ! ಇನ್ನೂ ಈ ಊರಿಂದ ಎಂಟು ಹತ್ತು ಹೈಕಳು ಹೋಗಿದ್ದವು ಸಾಚಾ ಖೋಟಾ ಎಲ್ಲಾನೂ ತೂಕಮಾಡಿ ಕೊನೆಗೆ ಗೆದ್ದೋರು ಯಾರು, ಬಿದ್ದೋರು ಯಾರು, ಅಂತ ಬಂದಾಗ, ಇಬ್ಬರೇ ಇಬ್ಬರು ಪೈಲ್ವಾನರು ನಮ್ಮೂರಿಗೆ ಅಂತ ಆಯ್ತು! ಸಾಹೇಬರ ಮಗ, ಪಂಡಿತರ ಮಗ ಊರಿನ ಸಾಹುಕಾರರೆಲ್ಲ ಸೇರಿ ಸಾಹೇಬರ ಮಕ್ಕಳನ್ನ ಮೆರೆವಣಿಗೆ ಮಾಡಿಸಿದರು. ಕೋಟೆಬಾಗಿಲಿಂದ ಪೇಟೆ ತುದಿತನಕ, ಮೋಟಾರ್ ಗಾಡೀಲಿ ನಾಗಪ್ಪಶೆಟ್ರ ಕಿರಿಹೆಂಡತಿ ಮಗಳ ಮದುವೆಗೆ ಕೂಡ ಅಷ್ಟು ಮೋಜು ಇರಲಿಲ್ಲ. ಮೋಟಾರಿನಲ್ಲಿ ಗುಂಡಪ್ಪನವರನ್ನೂ ಕೂರಿಸಿದರು ನಮ್ಮ ಪುಟ್ಟ ಬುದ್ಧಿಯವರು! ಕಾಶೀಪತಿಯ್ಯನವರ ತಂದೆ, ಅವರ ಪಾರ್ಟಿ ಎಷ್ಟು ಬೇಡ ಅಂದರೂ ಪುಟ್ಟ ಬುದ್ಧಿ ಕೇಳಲಿಲ್ಲ! ಅಷ್ಟು ಹೊತ್ತಿಗೆ, ಪಾಪ, ಗುಂಡಪ್ಪನವರಿಗೆ ಸಿಡುಬು ಬಂದು ಮುಖಎಲ್ಲಾ ಮುಳ್ಳುಮುಳ್ಳಾಗಿ ಬಿಟ್ಟಿತ್ತು ಆದರೂ ಮುಖದಲ್ಲಿ ಕಳೆ ತುಂಬಿತ್ತು

ಆ ಮೇಲೆ ಗುಂಡಪ್ಪಾವರು ಬೆಂಗಳೂರಿಗೆ ಹೋದರು, ಓದೋಕ್ಕೆ. ಈ ಊರಲ್ಲಿ ಇದ್ದ ಪುಸ್ತಕಾನೆಲ್ಲ ಅಷ್ಟು ಹೊತ್ತಿಗೆ ಓದಿ ಮುಗಿಸಿ ಬಿಟ್ಟಿದ್ದರು ಅಂತ ಕಾಣುತ್ತೆ

ಆಫೀಸ್ ದಾರೀಲಿ ನಾನು ಒಂದು ದಿನ ಕಿಟಕಿಯಿಂದ ಕೂಗು ಹಾಕಿ 'ಗುಂಡಪ್ಪಾವರು ಹುಷಾರಾಗಿದಾರಾ ಬುದ್ಧಿ' ಅಂತ ಕೇಳಿದೆ- ಅಪ್ಪಿತಪ್ಪಿ ಎಲ್ಲೋ ಅಜ್ಞಾನದಲ್ಲಿ ಈ ಕಾಶೀಪತೀನ. ಹಾಗೆ ಕೇಳಿದ್ದಕ್ಕೆ ಅವರು ನನ್ನ ಮೇಲೆ ನಾಯಿ ನರಿ ಅಂತ ರೇಗಾಡಿ ಹೊಡೆಯುವುದಕ್ಕೇ ಬಂದು ಬಿಟ್ಟರು "ನಾನೇನು ಪೇಪರ್ ಕೆಟ್ಟು ಹೋದೆನೇ? ಪಂಡಿತರ ಮನೆ ಬಾಗಿಲಲ್ಲೇ ಹೋಗಿ ನೇಣು ಹಾಕಿಕೊ!" ಅಂದರು ಆಫೀಸಿನಲ್ಲೂ ಚಿತ್ರಹಿಂಸೆ ಪ್ರಾರಂಭ ಮಾಡಿ ಬಿಟ್ಟರು ಗುಂಡಪ್ಪಾವರು ಬೇಸಿಗೆಗೆ ಬಂದಾಗ ನನಗೆ ಹರಕು ಮುರುಕು ಬಟ್ಟೆಬರೆ ಕೊಡೋವರು ಕಡೆಗೆ ಅವರು ಇಪ್ಪತ್ತೈದು ರೂಪಾಯಿ ಕಟ್ಟಿ ಅದನ್ನೂ ಪ್ಯಾಸ್ ಮಾಡಿದರು ಆಗ ಇಲ್ಲಿದ್ದ ಸಾಹೇಬರು "ಬಾರೋ ಈರ! ದೀಪ ಹಿಡಿ! ಪಂಡಿತರ ಮನೆಗೆ ಹೋಗೋಣ' ಅಂದರು ನನಗೆ ದಿಗಿಲು ಬಡಿಯಿತು ಮಕ್ಕಳು ಮರಿ ಎಲ್ಲಾ ಹುಷಾರಾಗಿವೆ, ಏನು ಬೇಕಾದರೂ ನಾವು ಧಾಂಡಿಗರಿದೀವಿ, ಮೂರು ಜನ, ಮನೆಬಾಗಿಲಲ್ಲಿ! ಸಾಹೇಬರೇ ಯಾಕೆ ಪಾದ ಬೆಳೆಸಬೇಕು ಅಂತ ನನಗೆ ಗೊತ್ತಾಗಲಿಲ್ಲ ಅಲ್ಲಾ! ನನ್ನಂಥವನಿಗೆ ಗೊತ್ತಾಗಬೇಕಾದ್ದೇನು? "ಗೋವಿಂದಾ, ಅನ್ನೋ! ಗುಲಾಮಾ'' ಅಂದರೆ, ಯಾವನೋ ಒಬ್ಬ 'ಗೋಪೀಚಂದನ ಹಾಕಿಕೊಂಡು ಬರುತ್ತೀನೆ,' ಅಂದನಂತೆ ಹಾಗೆನ್ನುವುದಕ್ಕಾಗುತ್ತದೆಯೇ ಸಾಹೇಬರಿಮುಂಗೆ? ದೀಪ ಹಿಡಿದೆ, ನಡೆದೆ ರಾಮಮಂದಿರದ ಬಾಗಿಲಲ್ಲಿ ಕೈಯಲ್ಲಿ ಕೋಸುಂಬರಿ ದೊನ್ನೆ ಸಹಿತ ಕಾಶೀಪತಿ ಯವರು ನಿಂತಿದ್ದರು. ಸಾಹೇಬರನ್ನ ಗುರುತಿಸಿದ ತಕ್ಷಣ ದೊನ್ನೆ ಎಸೆದು ಬಿಟ್ಟು ಬಾಯೊರಸಿಕೊಂಡರು ಪಂಡಿತರ ಮನೆಗೆ ಸಾಹೇಬರು ದಯಮಾಡಿ ಸಿದ್ದು ಗುಂಡಪ್ಪಾವರು ಪಾಸುಮಾಡಿದ್ದಕ್ಕೆ ತಮ್ಮ ಸಂತೋಷ ಹೇಳೋದಕ್ಕೆ! ಮುಂದೆ ಏನು ಓದಿಸುತ್ತೀರಿ, ಏನು ಓದಿಸಬಹುದು, ಅಂತ ಚರ್ಚೆಮಾಡೋ ದಕ್ಕೆ!.. .. ನಾನು ಪಡಸಾಲೆ ಮೇಲೆ ಕೂತು ತೂಕಡಿಸುತ್ತಾ ಎಲ್ಲಾನೂ ಕೇಳಿದೆ- ದೇವರೊಳ್ಳೇದುಮಾಡಲಿ ಅಂತ ಬೇಡಿಕೊಂಡೆ.

ಬಡವನ ಬೇಡಿಕೆ ಆ ಕಿವುಡು ದೇವರಿಗೆ ಕೇಳಿಸಿತು ಅಂತ ಕಾಣುತ್ತೆ. ಗುಂಡಪ್ಪಾವರು ಇನ್ನೂ ದೊಡ್ಡ, ಪ್ಯಾಸುಮಾಡಿ, ಬೆಂಗಳೂರಲ್ಲಿರುವ ಪುಸ್ತಕ

ಗಳನ್ನೆಲ್ಲ ತಲೆಯೊಳಗೆ ತುಂಬಿಕೊಂಡು, ಗಟ್ಟಿಗ ಅನ್ನಿಸಿ, ನಮ್ಮ ಆಫೀಸ್‌ಗೆ ಹೆಡ್ ಗುಮಾಸ್ತೆ ಸೀಟಿಗೂ ಬಂದರು. ಪಂಡಿತರು ಮಾತ್ರ ಹೆಚ್ಚು ದಿನ ಬಾಳಲಿಲ್ಲ

ಗುಂಡಪ್ಪನವರಿಗೆ ನಾನು ಹೇಳಿದೆ, ಮೊದಲನೆಯ ದಿನವೇ, ಕರೀ ದೊರೆ ಹಾಗೆ ಬನ್ನಿ, ಬುದ್ಧೀ, ನೋಡಿದರೆ ಸಾಹೇಬರಿಗೆ ಎರಡನೆಯವರು ನೀವು ಅನ್ನಬೇಕಪೆ ಜನ, ಅಂದೆ! ಅದಕ್ಕವರ, "ಅಯ್ಯ! ಪಾಳು ದೇವ ಸ್ಥಾನದ ಅರ್ಚಕನ ಮೊಮ್ಮಗ ಅಂತ ಈ ಊರಲ್ಲಿ ಗಿಡಗೆಂಟೆಗೆಲ್ಲಾ ಗೊತ್ತು ನಾನೇನು ಕಪ್ಪು ಸಮುದ್ರದಿಂದ ಇಳಿದೆನೇ? ನಿಮ್ಮ ಕಣ್ಣ ಮುಂದೆ ಅಡ್ಡಾಡಿ ದವನು ನಾನೆ?" ಅಂದುಬಿಟ್ಟರು ನನಗೆ ಸರಿಬೀಳಲಿಲ್ಲ ಕಾಶೀಪತಿಯವರು ಮಾತ್ರ ಚಟ್ ಚಟ್ ಅಂತ ಓಡಾಡುವುದು ನಮ್ಮ ಹೆಡ್ ಗುಮಾಸ್ತೆ ಯೋರು ಪಂಚ ಉಟ್ಟು ಚಪ್ಪಲೀನ ಹೊರಗಿಟ್ಟು ಒಳಗೆ ಬರೋದು, ಅಂದ್ರೆ, ನನಗೆ ಯಾಕೋ ಪ್ರಪಂಚಾನೇ ತಲೆ ಕೆಳಗಾದ ಹಾಗೆ ಅನ್ನಿಸಿತು

ಹಾಗಂತ ನಾನು ದುಂದುಮಾಡಿ ಅಂತ ಹೇಳೋದಿಲ್ಲ. ದುಂದುಗಾರನಾಗಿ ರೋದೂ ನಾಚಿಕೆ ಕೆಟ್ಟ ಕೆಲಸವೇ, ಜಿಪುಣನಾಗಿರೋದೂ ನಾಚಿಕೆ ಕೆಟ್ಟದ್ದೇ ಎರಡೂ ಸುಮಾರು ಒಂದೇ ಸಮನಾದ ದುರಭ್ಯಾಸ ಅಂದೆ ನಾನು, ನೀವು ಏನಂತೀರೋ, ಬುದ್ಧಿ? ಅಲ್ಲಾ, ಬಲಗೈಯಿಂದಲೂ ಎಡಗೈಯಿಂದಲೂ ಚೆಲ್ಲಾ ಪಿಲ್ಲಿಯಾಗಿ ಹಣ ಖರ್ಚುಮಾಡುವ ಮುಟ್ಠಾಳನಿಗೆ ಸಿಕ್ಕಿದವರೆಲ್ಲ ಗೆಳೆಯರು ಇದಾವ ನ್ಯಾಯ? ಕಂಡವರ ಕಿಸಯಿಂದ ಸಾಲವೋ ಸೋಲವೋ ತಂದು ಕಂಡವರ ಹೊಟ್ಟೆಗೆ ಹಂಚೋನೇ ದುಂದುಗಾರ, ಜಿಪುಣನಿಗೆ ತನ್ನ ಸ್ವತ್ತಿನ ಮೇಲೆ ಅತಿ ಆಸೆ! ದುಂದುಗಾರನಿಗೆ ಪರರ ಸ್ವತ್ತಿನ ಮೇಲೆ ಅತಿ ಆಸೆ. ಅದಕ್ಕೇ ನಮ್ಮ ಅಪ್ಪಾವರು ನನಗೆ ಹೇಳಿದ್ದು "ಈರ, ಸಾಲಮಾತ್ರ ಮಾಡಬೇಡ. ಕೊಡೋದು ದೇವರು, ಅವನ್ನ ಅವನಿಷ್ಟ ಪಟ್ಟರೆ ಮಾತ್ರ ಹೆಚ್ಚಿಸಿಕೊಳ್ಳ ಬಹುದು, ಆದರೆ, ಖರ್ಚು ನಿನ್ನ ಕೈಯಲ್ಲಿದೆ, ನೆನಪಿರಲಿ, ಈರ", ಅಂತ ಗುಂಡಪ್ಪಾವರೂ ಅಷ್ಟೆ. ಆರಕ್ಕೆ ಹೋಗೋಲ್ಲ, ಮೂರಕ್ಕೆ ಇಳಿಯೋಲ್ಲ. ಬೆಳಗಾಗುತ್ತಲೂ ಬಟ್ಟಲು ಹಿಡಿದುಕೊಂಡು ಸಕ್ಕರೆ, ಕಾಫಿಪುಡಿ ಅಂತ ಗುಂಡ ಪ್ಪಾವರ ಮನೆಯಿಂದ ಮಕ್ಕಳು ನೆರೆಮನೆಗಳಿಗೆ ಹೊರಡೋದಿಲ್ಲ. ಮನೆಗೆ ಯಾರು ಎಷ್ಟುಹೊತ್ತಿಗೆ ಹೋದರೂ ಆ ಮಹಾತಾಯಿ ಒಂದು ಬಟ್ಟಲು ಕಾಫಿಯೋ, ಪಾನಕವೋ ಕೊಟ್ಟೇ ಕಳುಹಿಸುತ್ತಾಳೆ.

ಆದರೂ ನೋಡಿ, ದೇವರು ಇಂಥಾವರಿಗೇನೆ ಕಾಟ ಕೊಡೋದು ಜಾಸ್ತಿ ಗಂಧ ತೇದ ಹಾಗೆ ತೇದುಹೋಗುತ್ತಾನೆ, ಗಾಂಧೀನ ಸಿಗಿದಹಾಗೆ ಸಿಗಿದುಹೋಗುತ್ತಾನೆ. ನಮ್ಮ ಗುಂಡಪ್ಪಾವರಿಗೆ ಎರಡು ದೊಡ್ಡ ಗಂಡಾಂತರ ಇವೆ ಒಂದು ಮನೆಯಲ್ಲಿ, ಒಂದು ಆಪೀಸಿನಲ್ಲಿ ಮನೆಯಲ್ಲೇನು ಅಂತೀರೋ ಹೇಳುವುದಕ್ಕೆ ನಾಚಿಕೆ ಆಗುತ್ತೆ ಒಂದು ಮಾತು ಹೇಳುತ್ತೇನೆ ಬುದ್ಧಿ, ರೇಗಬೇಡಿ ನೀವು ನಿಮ್ಮಂಥ ದೊಡ್ಡಮನುಷ್ಯರ ಮಾನಮರ್ಯಾದೆ ಎಲ್ಲಾನೂ ಉಫ್ ಅಂತ ಹಾರಿಹೋಗೋದು ನನ್ನಂಥ ಹತ್ತು ರೂಪಾಯಿ ಹದ್ದುಗಳಿಂದ. ಸಾಹೇಬರ ಮನೆಗೆ ಏಕಾದಶಿ ದಿನ ಈರುಳ್ಳಿ ತರಿಸಿದರು, ದೀಪಾವಳಿ ದಿನ ಅಳಿಯ ಕೋಪಿಸಿಕೊಂಡು ಎಣ್ಣೆ ಸ್ನಾನಾನೆ ಮಾಡಲಿಲ್ಲ; ವರಲಕ್ಷ್ಮೀಪೂಜೆದಿನ ದಕ್ಷಿಣೆ ನಾಲದು ಅಂತ ಪುರೋಹಿತರು ಮಧ್ಯೆ ಎದ್ದುಹೋದರು, ಸಾಹೇಬರು ಈ ತಿಂಗಳು ಹನ್ನೆರಡು ಬಾಟ್ಲ ತರಿಸಿದರು, ಖಾಲಿಸೀಸೆಗಳನ್ನ ಅಮ್ಮಾವರು ಇವತ್ತು ಮಧ್ಯಾಹ್ನ ಮಾರಿದರು, ಹೀಗೆ ಜವಾನರ ಬಾಯಿಂದ ಜವಾನರ ಕಿವಿಗೆ ಬಿದ್ದು ಅವರು ತಮ್ಮ ತಮ್ಮ ಚಾಕರಿಯ ಮನೆಗಳಿಗೆ ಪ್ರಚಾರ ಮಾಡುತ್ತಾರೆ. ಆ ಹೆಂಗಸರೋ ಈ ಕಡೆ ಕಿವಿಯಲ್ಲಿ ಕೇಳಿ ಆ ಕಡೆ ಕಿವಿಯಿಂದ ಬಿಡೋದಿಲ್ಲ ಅದಕ್ಕೆ ಕಸೂತಿ ಕೆಲಸ ಮಾಡಿ ಅದನ್ನ ಬಣ್ಣದಲ್ಲದ್ದಿ, ಮಣಿ ಪೋಣಿಸಿ, ಹಾಗಂತೆ, ಹೀಗಂತ, ಏನ್ರಿ ಇದು, ಹೀಗೂ ಆಗಬಹುದೆ, ಅಂತ ಅರಶಿನ ಕುಂಕುಮದ ನೆಪದಲ್ಲಿ ಎಲ್ಲರ ಕಿವಿಗೂ ಇಕ್ಕಿ ಬಿಡುತ್ತಾರೆ ಅದೂ ಅಲ್ಲದೆ ನಮ್ಮ ಜವಾನರನೂ ತಪ್ಪಿಲ್ಲ ಅನ್ನಿ! ಸಾಹೇಬರ ಮನೆಗಳಲ್ಲಿ ಚಿಳ್ಳೆಪಿಳ್ಳೆಯಿಂದ ಹಿಡಿದು ಸಾಹೇಬರ ತಾಯಿತನಕ ಎಲ್ಲರೂವೆ ಗೋಳು ಹೇಳಿಕೊಳ್ಳೋದು ಜವಾನರ ಹತ್ತಿರನೇ! ಇದೊಂದು ಕೆಟ್ಟ ಚಾಳಿ ಬುದ್ಧಿ ನಾವೇನು ಮಾಡೋದು? ಹು . ಹುಂ ಹುಂ ಅಂತ ಬುರುಡೆ ಯೊಳಗೆ ತುಂಬಿಕೊಳ್ಳೋದು. ಈಚೆಗೆ ಬರುತ್ತಲೂ ಯಾವನಾರು ಒಂದು ಚೂರು ಬೀಡಿ ಕೊಟ್ಟ ಅಂದ್ರೆ ಅವನ ಕಿವಿಗೆ ಎಲ್ಲಾನೂ ಊದಿ ಬಿಡೋದು. ಅಮ್ಮ ಹೊಡೆದರು ಬಡಿದರು ಅಂತ ಮಕ್ಕಳು ದೂರುಹೇಳುತ್ತವೆ, ಮೇಷ್ಟರು ಬೈದರು ಅಂತ ಹುಡುಗರು ಹೇಳುತ್ತವೆ, ಮೇಡಂ ಮುಸುಡಿ ಸೊಟ್ಟಗೆ ಮಾಡಿದರು ಅಂತ ಹುಡುಗಿಯರು ಹೇಳುತ್ತವೆ; ಅತ್ತೆ ಕಿರುಕುಳ ಕೊಟ್ಟರು ಅಂತ ಸೊಸೆ; ಸೌಟು ತೆಗೆದು ಬಡಿದರು ಅಂತ ಅತ್ತೆ; ನನಗೀ ಮನೆಯಲ್ಲಿರುವುದಕ್ಕಾಗುವುದಿಲ್ಲವಲ್ಲೋ ಅಂತ ಸಾಹೇಬರೂ ಜವಾನರ ಹತ್ತಿರ

ಗೋಳಿಡುತ್ತಾರೆ ಎಲ್ಲಕ್ಕೂ ನಾಲ್ಕು ನಾಲ್ಕು ಬಿಸಿ ಬಿಸಿ ಯಾಗಿ ಕೊಡಿ, ಮಹಾಸ್ವಾಮಿ, ನಾವೆಲ್ಲ ಹೀಗೇನೆ ಮಾಡೋದು ಅಂತ ಹತ್ತು ರೂಪಾಯಿಗೆ ಪತ್ತು ಬಿದ್ದಿರೋ ನಾನು ಹೇಳೋದಕ್ಕಾಗ ತ್ತದೆಯೇ, ಬುದ್ಧಿ, ನೀವೇ ಹೇಳಿ. ಯಾಕೆ ಹೇಳಿದೆ ಅಂದರೆ, ಗುಂಡಪ್ಪಾವರ ಮನೆಯಲ್ಲಿ, ಅತ್ತೆ ಎಣ್ಣೆ, ಸೊಪ್ಪೆ ಸೀಗೆಕಾಯಿ. ಅಳಿಯ ಬಿಸಿನೀರು! ಪಾಪ! ಲಬಿ ಲಿಬಿ ಲಿಬಿ ಅಂತ ಒದ್ದಾಡು ತ್ತಾರೆ, ಅತ್ತಲಾಗೆ ಅನ್ನುವುದಕ್ಕಿಲ್ಲ, ಇತ್ತಲಾಗೆ ಅನುಭವಿಸು ಅಂತ ಹೇಳೋದಕ್ಕಿಲ್ಲ. ಓದಿದವರ, ಇದ್ಯಾಬುದ್ಧಿ ಚೆನ್ನಾಗಿದೆ, ಕಚೇರೀಲಿ ಮೊಡ್ಡ ಕೆಲಸ ನಡೆಸುತ್ತಾರೆ ಬರೆವಣಿಗೆಯಲ್ಲಿ ಒಂದು ಚಿತ್ತಿಲ್ಲ, ತಪ್ಪೋದಿಲ್ಲ ಆದರೂ ಮನೆ ಅಂದರೆ ಗರಡಿ ಮನೆ, ಸದಾ ಕುಸ್ತಿ ಸದಾ ಸಾಮು. ನನ್ನ ಮೂಸಗೆ ಮಣ್ಣು ತಗಲಬಾರದು ಅಂತ ಆ ಜೆಟ್ಟಿ! ನನ್ನ ಮೂಸೆಗೆ ಮಣ್ಣು ತಗಲಬಾರದು ಅಂತ ಈ ಜೆಟ್ಟಿ

ಮನೇಲೆಲ್ಲ ಸಿಡಿಲು ಮಳೆ ನಿಂತು ಮಹಾರಾಯರು ಆಫೀಸಿಗೆ ಬಂದರೆ ಈಚೆಗೆ ಅಲ್ಲೂ ಷುರು. ಹಿಂದಿನ ಸಾಹೇಬರುಗಳಲ್ಲಿ ಒಂದು ತೂಕ ಅಂದರೆ ಈಚಿನವರೇ ಒಂದು ತೂಕ ಗೂನಿನವನೇರಿ ಕುರ ಎದ್ದಹಾಗೆ, ಆಫೀಸಿನಲ್ಲಿ ಯಾತಕೋ ಚಾಡಿಕೋರರದೇ ರಾಜ್ಯಭಾರ ಒಂದು ಹೋಯಿತು. ಗುಂಡಪ್ಪಾ ವರು ಬಂದರು ಅಂದ್ರೆ ಬಾಕಿ ಗುಮಾಸ್ತೆಯರೆಲ್ಲ ಸರಕ್ಕನೆ ಅವರವರ ಸೀಟಿಗೆ ಹೋಗೋರು, ಅಲ್ಲಲ್ಲೇ ಕೂತು ಒಬ್ಬೊಬ್ಬರ ಮೂತಿ ನೋಡಿಕೋತ ಹಲ್ಲು ಕಿರಿಯುವರು. ನನಗಿದೆಲ್ಲ ಗೊತ್ತಾಗುತ್ತೆ ಅನ್ನಿ ಆದರೆ ನಾನೆಷ್ಟರವನು? ಯಾರ ನಿಷ್ಠೂರ ಕಟ್ಟಿಕೊಂಡರೂ ನನಗೆ ಕಷ್ಟಾನೇ- ನಾನು ಕಂಬದಂಗೆ ಬಾಗಿಲಲ್ಲೇ ನಿಂತಿರುತ್ತೇನೆ, ಸಾಹೇಬರು ಗಂಟೆಬಾರಿಸಿದರ ಒಳಕ್ಕೆ ನೆಗೆಯೋದು ಅವರು ಬಾಯಿಬಿಟ್ಟು ಗುಂಡಪ್ಪಾವರು ಅನ್ನುವುದೇ ಇಲ್ಲ- ಈಚಿನವರು ದಪ್ಪ ನೆಯುವರು, ಹಿಂದಿನವರ ನನ್ನ ಸ್ನೇಹಿತರೇ ಇದ್ದರು ನನಗೆ ಖುಷಿಯಾಗಿತ್ತು ಅವರು ಅಂಗಿ ಷರಾಯಿ ಕೊಟ್ಟರೆ ನಾನೇ ಹೊಲಿಸಿಕೊಂಡ ಹಾಗಿರುವುದು, ಬುದ್ಧೀ! ಸರ್ಕಾರದವರು ಆಫೀಸರುಗಳನ್ನ ವರ್ಗ ಮಾಡೋವಾಗ ಆಯಾಕಡೆ ಇರುವ ಜವಾನರ ಸೈಜುವಾರು ಚುನಾಯಿಸಿ ಉಪಕಾರ ಮಾಡಬಾರದಾ, ಅಂತೀನಿ?– ಗುಂಡಪ್ಪಾವರು ಅಂತ ಬಾಯಿಬಿಟ್ಟು ಹೇಳಬಾರದಾ? ಊಹುಂ ದಂಡಪ್ಪ ಅನ್ನೋರು ಒಂದು ಸಲ! ಭಂಡಪ್ಪ ಅನ್ನೋರು ಒಂದು ಸಲ! ನಮ್ಮುಂದೆ ಹಾಗಂದ್ರೆ ಅವರ ಮರ್ಯಾದೆ ಕೂಡ ಮೂರುಕಾಸಿಗೆ ಹೋಗ್ತದೆ

ಅಂತ ಅವರಿಗೆ ತಿಳಿಯೋಲ್ಲವಲ್ಲ ಅಂತೀನಿ! ನಾವು ಜವಾನರು ಅವರಿಗೂನೂ ಒಂದು ಹೆಸರು ಕಟ್ಟಿದೀವಿ ಅವರಿಗೆ ವರ್ಗ ಆದ ಮೇಲೆ ಹೇಳುತ್ತೀವಿ, ಬುದ್ಧಿ ಈಗ ಬೇಡಿ, ತಲೆ ಒಡೆದುಬಿಟ್ಟಾರು, ಮಕ್ಕಳು ಮರಿ ಪಾಡೇನು ಬುದ್ಧಿ ಆ ಮೇಲೆ?

ಗುಂಡಪ್ಪಾವರು ಒಳಕ್ಕೆ ಹೋದರು ಅಂದರೆ ಈ ಚಾಡೀಪತಿರಾಯರು ಅವರ ಪರಿವಾರದವರು ಎಲ್ಲರೂ ಒಂದೇ ಮೇಜಿನ ಹತ್ತಿರ ಬುರುಡೆಗಳನ್ನು ಸೇರಿಸಿಕೊಂಡು ಕಿಲ ಕಿಲ ನಗುವರು, ಅವರು ಹೊರಕ್ಕೆ ಬಂದರು ಅಂದ್ರೆ ಚೆಲ್ಲಾ ಪಿಲ್ಲಿಯಾಗಿ ಮೂಲೆ ಸೇರಿಕೊಳ್ಳೋರು ಮೋಡ ಕವಿದಹಂಗೆ, ಹೊಳೆ ಕುಗ್ಗಿದಹಂಗೆ, ನಿಧಾನವಾಗಿ ತಲೆತಗ್ಗಿಸಿಕೊಂಡು ಬರೋರು ಗುಂಡಪ್ಪಾವರು ಸಾಹೇಬರ ಬೋನೊಳಗಿಂದ, ನಿಜವಾಗಿಯೂ ಬುದ್ಧಿ, ನನಗೆ ಬಲು ಸಂಕಟ ವಾಗೋದು ಇದೆಂಥ ಏಳ್‌ರಾಟ್ ಶನಿ ಬಂತು ಈ ಊರಿಗೆ ನಮ್ಮ ಪಂಡಿತರ ಮಗನನ್ನ ಹಿಡಿಸೋಕ್ಕೆ ಅಂತ ನ್ಯಾಯೆಲ್ಲ ಪರಚಿಕೊಂಡು ಬಿಡುವೆ

ಯಾವೊತ್ತು ನಮ್ಮ ಗುಂಡಪ್ಪಾವರಿಗೆ ಅತೀ ಬೇಜಾರಾಗಿದೆ ಅಂತ ನಾನು ಮಣಕ್ಕನೆ ತಿಳಿದುಕೊಂಡುಬಿಡುವೆ ಮನೆಯಲ್ಲೂವೆ ಆಪೀಸಿನಲ್ಲೂವೆ ಗಂಡಾಗುಂಡಿ ವಿಪರೀತ ಅಂದ್ರೆ ಅವರು ನನ್ನನ್ನ 'ಅಯ್ಯ' ಅನ್ನೋದಕ್ಕೆ ಮರೆತುಬಿಡ್ತಾರೆ 'ಲೋ' ಅಂತಾರೆ ಅವತ್ತು ಮಾತ್ರ ನಾನೂನೂ ಅಯ್ಯೋ, ಅನ್ನಲಿ, ಪಾಪ ಹತ್ತು ದಿನ ಹಂಗಾದರೆ ಒಂದುದಿನ ಹಿಂಗೂನಡಿಯಲಿ, ನಾನೆಷ್ಟ ರವನು, ನನಗೆ ಅಂದದ್ದೇ ಲಾಭ ಅನ್ನದೆ ಇದ್ದರೆ ಅವರಿಗೇ ನಷ್ಟ ಅಂತ ಯಥಾಪ್ರಕಾರ ಹೇಳಿದ್ದನ್ನೆಲ್ಲಾ ಅಚ್ಚುಕಟ್ಟಾಗಿ ಮಾಡೇಬಿಡುವೆ ಆ ಮೇಲೆ ಇನ್ನೊಂದು– ಅವತ್ತಿನ ದಿವಸ ಆಪೀಸ್ ಬಾಗಿಲು ಮುಚ್ಚಿದಕೂಡಲೇ ಗುಂಡ ಪ್ಪಾವರು ಮನೆಗೆ ಹೋಗೋದಿಲ್ಲ ಕೆರೆ ಏರಿಮೇಲೆ ಹಾಗೆಯೇ ನಡೆದುಹೋಗಿ ಆ ದೊಡ್ಡ ಬೇವಿನಮರದ ಕೆಳಗೆ ಕೂತುಕೋತಾರೆ. ನನಗೊಂದುದಿನ ಗಾಬರಿ ಆಯಿತು. ಅವತ್ತೇನೋ ಅಜ್ಜಿಗೆ ಬಾಯಿಲೆ ಔಷಧಿ ತರಲಿಲ್ಲ ಅಂತ ತಾಯಿಯವರು ಮನೆಯಲ್ಲಿ ರೇಗಾಡಿದರು, ಮುದುಕಿ ಸಾಯಲಿ ಅಂತ ಗಂಡನಿಗೆ ಔಷಧಿ ತರಬೇಡ ಅಂತ ಸೊಸೆ ಹುಕುಂ ಮಾಡಿದರು ಅಂತ ತಾಯಿ ಕೂಗಾಡಿ ದರು; ಇಲ್ಲೂ ಏನೋ ಗರ್ಭಗುಡಿಯೊಳಗೆ ಒಂದಿಷ್ಟು ಅರ್ಭಟವಾಯಿತು.

ಸಂಜೆ ಗುಂಡಪ್ಪಾವರು ಕೆರೆ ಕಡೆ ಹೊರಟರು. ನನಗೆ ಗಾಬರಿಯಾಯಿತು. ಪಂಡಿತರ ಕೊಂಕುಳಲ್ಲಿ ಕೂತಿದ್ದ ಕೂಸಿನ ಜ್ಞಾಪಕ ಒಂದು ಬಿಟ್ಟಿತು. ಪ್ರಾಣ ಕ್ಕೇನಾರಾ ಅಪಾಯ ತಂದುಕೊಂಡರೆ ಏನುಗತಿ, ನಾನು ಹಿಂದೇನೇ ಹೋದೆ, ಕಣ್ಣಿಗೆ ಬೀಳದಹಂಗೆ! ಅತ್ತಲಾಗಿಂದಿತ್ತಲಾಗೆ ಇತ್ತಲಾಗಿಂದತ್ತಲಾಗೆ ನಡೆದು ನಡೆದು ಸುಸ್ತಾಗಿ ಕಡೆಗೆ ಆ ಬೇವಿನಮರ ಹಿಡಿದರು ಅದರ ಕೆಳಗೆ ಕೂತು ಅದೇನೋ ಅಪಾರ ಹೇಳಿದರು, ಮಂತ್ರ, ಎಲ್ಲಾನೂ ಒಂದೇ ಸಮಕ್ಕಿರುವುದು ಮಂತ್ರ, ರಾಗವಾಗಿ, ಅರ್ಜುನ ಕೃಷ್ಣ ಅಂತ ಆಗಾಗ ಕೇಳಿಸುವುದು ನನಗೆ, ದೂರದಲ್ಲಿ ಹುಲ್ಲಿನ ಮೇಲೆ ಕಿವಿ ಆಡಿಸುತ್ತಾ ಬಿದ್ದಿದ್ದೆ ನಾನೂವೆ; ಉವಾಚಾ ಉವಾಚಾ ಅಂತ ಅನ್ನೋರು, ಗಳಿಗೆ ಗಳಿಗೆಗೂವೆ ಆಮೇಲೆ ಉಸ್ಸಪ್ಪ ಅಂತ ಎದ್ದು ಬಂದರು ಈಚೆಗೆ. ಈಗಲೂ ಆಗಾಗ ಅಲ್ಲಿಗೆ ಹೋಗ್ತಾರೆ, ನಾನುಮಾತ್ರ ಅನುಸರಿಸಿಕೊಂಡು ಹೋಗುತ್ತಾ ಇಲ್ಲ ಪ್ರಮಾದ ಏನೂ ಮಾಡೋದಿಲ್ಲ ಅಂತ ಖಾತ್ರಿ ಆದ ಮೇಲೆ ದೊಡ್ಡೋರ ಸಮಾಚಾರ ನಮಗೆ ಯಾಕೆ, ಅಂತ ಬಿಟ್ಟು ಬಿಟ್ಟೆ

ಆ ಅಮ್ಮನಿಗೆ ಮಾತ್ರ ಒಂದು ದಿನ ಹೇಳಿದೆ "ಬಿಡಿ, ತಾಯಿ! ಗಂಡ ಹೆಂಡತಿ ಸುಖವಾಗಿರಲಿ! ತಾಯಿ ಮಗ ಅನ್ನೋದು ಒಂದು ತರಹ ಭಕ್ತಿ ಮೇಲೆ ಹೋಗುತ್ತೆ. ದೇವರು ಅಂತ ಅನ್ನಿಸುತ್ತೆ ಆದರೆ, ಗಂಡ ಹೆಂಡತಿ ಅನ್ನೋದೂ ಒಂದು ತರಹ ಒಸಿ ಅವರ ಮಾತೂ ತಳ್ಳಿ ಹಾಕಬಾರದು ಒಸಿ ನಿಮ್ಮ ಮಾತೂ ನಡೆಯಲಿ ದೊಡ್ಡ ಕಡೆ ಹೆಣ್ಣು, ದೊಡ್ಡ ಮನೆತನ-ನವರಿಸಿ ಕೊಂಡು ಹೋಗಿ ತಾಯಿ, ನಿಮಗೆ ಹೇಳಬೇಕ? ' ಅಂದೆ ನನ್ನ ಹೆಂಡಿರ ಕೈಲಿ ಗುಂಡಪ್ಪಾವರ ಹೆಂಡತಿಗೂ ಹೇಳಿಸಿದೆ

ಈಚೆಗೆ ಇನ್ನೇನೋ ಸುದ್ದಿ ಹೊರಡಿಸಿ ಬಿಟ್ಟಿದಾರಲ್ಲಾ, ಈ ಕಾಶೀಪತಿ ರಾಯರು! ಯಾಕೋ ಇವರ ದರ್ಬಾರೇ ಹೆಚ್ಚೋಯ್ತು, ಆಪೀಸಿನಲ್ಲಿ, ಯಾರು ಬಂದರೂನೂ ಇವರ ಕೈಲಿ ದಕ್ಷಿಣೆ ಇಟ್ಟು ಹೋಗೋದೇ ಆಯ್ತು ಬಾಗಿಲಲ್ಲಿ ನಿಂತುಕೊಂಡು ಅವರು ಹೊರಕ್ಕೆ ಹೋಗುವಾಗ ನಾನು ತಲೆ ಕೆರೆ ದರೆ, ಏನು ಮಾಡೋದೋ, ಈರಣ್ಣ! ಕಿಸೆಯಲ್ಲಿದ್ದದ್ದನ್ನೆಲ್ಲ ಕಾಶೀಪತೀನೆ ಕಸಿದುಕೊಂಡು ಬಿಟ್ಟ ಅನ್ನೋರು. ಹೆಂಗಿದೆ ಲೂಟಿ? ಕಾಶೀಪತಿ ರಾಯರಿಗೆ

ಕೈನೂ ಉದ್ದ! ನಾಲಿಗೇನೂ ಉದ್ದ. ಇನ್ನೊಂದು ಕೆಟ್ಟ ಚಾಳಿ ಅವರದು ಏನು ಅಂದ್ರೆ, ಗುಂಡಪ್ಪಾವರು ಇಲ್ಲದೆ ಇದ್ದಾಗ ಅವರ ಮೇಜಿನ ಮೇಲೆ ಇರೋ ಕಾಗಜಾನ್ನೆಲ್ಲ ಓದೋದು, ಸಾಹೇಬರು ಅತ್ತಲಾಗೆ ಹೋದರೆ ಅವರ ಮೇಜು ಜಪ್ತಿ ಮಾಡೋದು; ಆವೇಳೆ ತಮ್ಮ ಪಾರ್ಟಿಯವರನ್ನೆಲ್ಲ ಶೀನಪ್ಪನ ಹೋಟ ಲಲ್ಲಿ ಸೇರಿಸಿ ಕೊಂಡು ಇ ಹಿ ಪಿ ಹಿ ಅಂತ ನಗುವುದು! ಮನುಷ್ಯ ಸಾಚ ಅಂತ ತೀರ್ಮಾನ ಮಾಡ ಬೇಕಾದರೆ, ನಾನು ಹೇಳುತ್ತೇನೆ ಪಕ್ಕದ ಸೀಟಿನ ಗುಮಾಸ್ತೆ ಇಲ್ಲದೆ ಇದ್ದಾಗ ಅವನ ಕಾಗಜ ನೋಡದೆ ಇರುವುದೇ ಗುರುತು ಯಾರೂ ನೋಡದೆ ಇರುವಾಗ ನಾವೇನು ಮಾಡುತ್ತೇವೆ, ಹೇಗೆ ನಡೆದು ಕೊಳ್ಳುತ್ತೇವೆ, ಅನ್ನೋದನ್ನೇ ದುರ್ಬೀನಿಂದ ನೋಡುತ್ತಿರುತ್ತಾನೆ ದೇವರು ಪೋಲೀಸಿನವರೆಲ್ಲ ಊರು ಬಿಟ್ಟು ಹೋದರೆ, ನಿಮ್ಮ ಕಾಶೀಪತಿ ಕನ್ನ ಹಾಕು ವುದಕ್ಕೂ ಹೇಸುವುದಿಲ್ಲ ಸಾಹೇಬರಿಲ್ಲದೆ ಇರುವಾಗ ಇವರಿಗೆ ಅವರ ಕೊಠಡಿ ಯೊಳಗೆ ಏನು ಗುಸ ಗುಸ ಅಂತೀರಿ? ಆದರೆ, ಸುನೆಷ್ಟರವನು ಅನ್ನಿ'

ಪೊನ್ನೆ ಹೇಳಿ ಕೊಳ್ಳುತ್ತಾ ಇದ್ದನು, ಪಿತೂರಿಗಾರರೆಲ್ಲರೂ ಸೇರಿ ಹೋಟಲಲ್ಲಿ ಏನು ಕೇಳುವ ಅಂತ ನಾನೂ ಖಾರದವಲಕ್ಕಿ ಮೊಜ್ಲೋನೆಸದಲ್ಲಿ ಅಲ್ಲೀ ಕುಕ್ಕರಿಸಿದ್ದೆ, ಕತ್ತಲೇಲಿ ತನ್ನ ಭುಜಾನ ತಾನೇ ತಟ್ಟಿಕೊಳ್ಳುತ್ತಾ ಇದ್ದ, ಕಾಶೀಪತಿ, ಈ ಸಾಹೇಬರೇ ಬಹಳ ಸಾಧು ಅಂತೆ. ಗುಂಡಪ್ಪಾವ ರನ್ನ ವರ್ಗ ಮಾಡಿಬಿಡುತ್ತಾರಂತೆ, ಯಾವುದೋ ಕಾಡು ಕೊಂಪೆಗೆ ಗುಂಡ ಪ್ಪಾವರು ತುಂಬಾ ಪೇಚಾಡ್ತಾರಂತೆ, ಸಾಲ ಸೋಲ ಸಂಸಾರ ಗಿಂಸಾರ ಕಟ್ಟಿ ಕೊಂಡು; ಕಾಶೀಪತಿಗೇನೆ ಆ ಸೀಟ್ ಕೊಟ್ಟು ಬಿಡ್ತಾರಂತೆ; ಅವರ ಸೋದರತ್ತೆ ಗಂಡ (ಅದೇ ಹಿಂದಿನ ಹೆಡ್‌ಗುಮಾಸ್ತೆ, ಹೆಗ್ಗಣ ಅಂದ್ರೆ ಆತ ಬುದ್ಧಿ,) ಆತ ಎಲ್ಲೋ ಬೆಂಗಳೂರು ಕಡೆ ಹೊರಟಿದಾನಂತೆ; ಓ ಹೋ ಹೋ, ಅದೇನು ಭುಜ ತಟ್ಟಿಕೊಳ್ಳೋದು, ತೊಡೆ ತಟ್ಟಿಕೊಳ್ಳೋದು, ಮೂತಿ ತಿವಿಯೋದು, ಅಟ್ಟಹಾಸ ಮಾಡೋದ , ಥೂ ಥೂ. ಥೂ....ನನಗಂತೂ ವಾಕರಿಕೆ ಬಂದು ಬಿಟ್ಟಿತು ಸಾಹೇಬರ ಮೇಜಿನ ಮೇಲಿದ್ದ ಕಾಗಜಾನ ಕಾಶೀಪತಿ ಕದ್ದು ನೋಡಿ ಇಷ್ಟು ಸಮಾಚಾರ ಶೇಖರಿಸಿದ್ದನಂತೆ! ಹೇಗಿದೆ, ಕಳ್ಳರ ಸಂತೆ?

ನನಗೇನೋ ತಡಿಯೋಕ್ಯಾಗಲಿಲ್ಲ 'ಶೀನಪ್ಪನವರೇ' ಅಂತ ಗಟ್ಟಿಯಾಗಿ ಕೂಗೇ ಬಿಟ್ಟೆ, ದೀಪದ ಕೆಳಗೆ ಬಂದು. "ಏನ್ರಿ ಇಲ್ಲಿ ಯಾವುದೋ ಕೆಟ್ಟನಾತ"

ಅಂತ ಕೇಳೇ ಬಿಟ್ಟೆ! ಆಗ ಕಾಶೀಪತಿರಾಯರು, "ಅಯ್ಯೋ! ಮಾದಿಗೂಬೆ! ಇಲ್ಲೇ ಇದ್ದಿಯಾ ನೀನು! ಬಾರೋ, ಕಾಪಿ ಕುಡಿಯೋ!" ಅಂದರು. ಕಾಪೀನೂ ಕುಡಿದೆ, ಆ ಮೇಲೆ ಗುಂಡಪ್ಪನವರಿಗೆ ಎಲ್ಲಾನೂ ತಿಳಿಸೂ ತಿಳಿಸಿದೆ!

ಅವರು ಅದಕ್ಕೆ ಏನೂ ಅನ್ನಲಿಲ್ಲ "ಅಯ್ಯ! ಆಗಬೇಕಾದದ್ದು ಆಗಿಯೇ ಆಗುತ್ತೆ. ಉಪ್ಪು ತಿಂದವನು ನೀರು ಕುಡಿಯುತ್ತಾನೆ" ಅಂದು ಬಿಟ್ಟರು

ಅಕೋ! ಹಾಲು ಮೊಸರು ಕೊಟ್ಟುಬಿಟ್ಟು ನನ್ನ ಹೆಂಡ್ತಿ ಬರ್ತಿದ್ದಾಳೆ ಬುದ್ಧಿ, ನಾನು ಅವಳ ಜೊತೇಲಿ ಹೋಗಿ ಮನೆಗೊಂದಿಷ್ಟು ಬಟ್ಟೆ ತರಬೇಕು. ಬರ್ತೇನೆ, ಇಶ್ವಾಸ ಇರಲಿ ಬುದ್ಧಿ! ಏನೇನೋ ಹೇಳಿಬಿಟ್ಟೆ, ಬುದ್ಧಿ, ಮಹಾ ತಿಂದವನ ಸಂಗೆ. ತಪ್ಪಿದ್ದರೆ, ಅಡ್ಡಬಿದ್ದೆ

ಜವಾನ ಈರಣ್ಣನ ಪ್ರಸಾರ ಮುಗಿಯಿತು

---

ಇಂತಪ್ಪವರ ನಾನು ನೆರೆನಂಬಿ ನಮೋ ನಮೋ ಎಂಬೆನಯ್ಯಾ

—ವಚನ

ಮೇಣ್ ನನ್ನಿಯನಾಣ್ಮನೋಳ್ ಬಯ್ತಿಡಲೆಮಗಾವಟ್ಟೆ?

—ಮುದ್ದಣ

# ೪: ಶುದ್ಧ ಸಾವೇರಿ

ನೀವೇನೋ ಹೇಳುತ್ತೀರಿ, ನಾನು ಕೊಡುವ ವಿವರಣೆಯನ್ನೆಲ್ಲ ರವೆ ಯಷ್ಟೂ ಬಿಡದೆ ಬರೆದು ಕೊಳ್ಳುತ್ತೇನೆ ಅಂತ, ಆದರೆ ನನಗೆ ನಿಮ್ಮ ಹಾಗೆ ಒಕ್ಕಣೆಯಾಗಿ ಬಸವನ ಹಿಂದೆ ಬಾಲ, ಬಾಲದ ತುದಿಯಲ್ಲಿ ಕುಚ್ಚು ಅಂತ ನಡೆದದ್ದನ್ನೆಲ್ಲ ನಾಜೂಕಾಗಿ ಹೇಳುವುದಕ್ಕೆ ಬರದು, ನಾನೇನು ಮಾಡಲಿ ಈ ಮನೆಯಲ್ಲಿ ದಿನವಹಿ ಜರುಗುತ್ತಾ ಇರುವ ಜರ್ವರ್ಸ್ ಕಾಳಗದಿಂದ ನನಗೆ ಹುಚ್ಚು ಹಿಡಿಯದೆ ಇರುವುದೇ ಆಶ್ಚರ್ಯ! ಅತ್ತೆ ಒಂದು ಕಡೆ, ಸೊಸೆ ಒಂದು ಕಡೆ, ಮೃದಂಗಕ್ಕಿಂತ ಕಡೆ ನಾನು, ಘಟ

ಗಂಡಪ್ಪನೇ? ನಮ್ಮ ಗಂಡೂನೆ? ಪಾಪ! ಪರಮ ಸಾಧು ಪಾಸ್ ಮಾಡಿ ಪ್ರಸ್ತವಾಗಿ ಆಫೀಸ್ ಕೆಲಸ ಅಂತ ಸೇರಿದ ವೇಲಂತೂ ಸಾಕ್ಷಾತ್ ಪಶೂನೇ! ನಾನೆಷ್ಟೋ ವಾಸಿ ಅವನು ಅವನ ತಂದೆಯ ಹಾಗೆ ಕಪ್ಪಗಿರು ವುದೆಲ್ಲ ಕಾಡಿಗೆ ಅಂತ ಕಣ್ಣಿಗೆ ಹಚ್ಚಿಕೊಳ್ಳುವ ಜನ, ಇನರು ನಾನು ಹಾಗಲ್ಲ ಬೆಳ್ಳಗಿರುವುದೆಲ್ಲ ಸುಣ್ಣ ಅಂತಲೇ ಪ್ರಾರಂಭ ಮಾಡುತ್ತೇನೆ, ಅಯ್ಯೋ! ನಾನು ಈ ವಯಸ್ಸಿನಲ್ಲಿ ಅನುಭವಿಸಿದ ಕಷ್ಟಗಳಿಂದ ಹಾಗನ್ನಿಸಿ ಬಿಟ್ಟಿದೆ ಅಂದ್ರೆ, ನನಗೆ ಹುಟ್ಟಿದ ಮೇಲೆ ಹದಿಮೂರು ವರ್ಷ ಸುಖವಾಗಿದ್ದೆ ನಮ್ಮ ತಂದೆಯವರು ಸುಂಕದ ಕಟ್ಟೆ ಮುತ್ಸದ್ದಿಯಾಗಿದ್ದರು ಹತ್ತಕ್ಕೆ ಸೇರಿ ದರು, ಹನ್ನೆರಡಾಗುತ್ತಲೂ 'ಪೇಷ್ಕರ್' ಅಂದರು ಆದರೂ, ಅಮಿಲ್ದಾರ್ ಮನೆಗಿಂತ ನಮ್ಮ ಮನೆಯಲ್ಲಿ ಲಕ್ಷ್ಮೀದೇವಿ ನಾಲ್ಕು ಹೆಜ್ಜೆ ಹೆಚ್ಚಾಗಿಯೇ ನೃತ್ಯವಾಡಿದಳು! ಹಾಲು ಮೊಸರು ವೀಳ್ಯದೆಲೆ ಬಾಳೆಹಣ್ಣು ಹುಣಿಸೆ ಮೆಣಸು ಶುಂಠಿ ಕಸ್ತೂರಿ ಕೇಸರಿ ಯಾವುದು ಕೇಳುತ್ತೀರಿ ಸಮೃದ್ಧಿ, ನಮ್ಮ ಮನೇಲಿ, ಪೇಟೆಲಿರೋ ಪಟ್ಣಂ ಸುಬ್ರಾಯ ಶೆಟ್ಟಿ ಪರ್ಸಾರೆ ಅಂಗಡಿ ಕೂಡ ನಮ್ಮ ಮನೆ ಮುಂದೆ ಮೂರುಕಾಸಿನಗಲ! ಒಪ್ಪತ್ತೂಟಕ್ಕೆಪ್ಪತ್ತೆಲೆ, ಗಂಡ ಸರ ಪಂಕ್ತಿಗೇನೆ ಸಾಲಾಗಿಡಬೇಕು. ನಮ್ಮೂರಲ್ಲಿ ವರದರಾಜನ ದೇವಸ್ಥಾನ ಬೇರೆ ಇದೆ. ಜಕ್ಕಣಾಚಾರಿ ತಾತನೇ ಕಟ್ಟಿಸಿದ್ದಂತೆ. ಸುತ್ತ ಮುತ್ತ

ನೂರು ಹಳ್ಳಿಗೆ ಅದೇ ಆಸ್ಪತ್ರೆ' ಅಷ್ಟು ಚಿತ್ರ ಬಿಡಿಸಿದನೆ ನೋಡಿ, ಆ ಮುದೀ ಆಚಾರಿ, ಕಲ್ಲಿನಲ್ಲಿ ಮಕ್ಕಳ ಹೊಕ್ಕುಳು ಉಬ್ಬಿದರೆ, ಪ್ರಾಕಾರ ದಲ್ಲಿರ ವ ದೊಡ್ಡ ಗಣೇಶನ ಹೊಕ್ಕುಳಿಗೆ ಮೇಣ ಮೆತ್ತಿದರೆ, ಕರಗಿ ಹೋಗು ವುದು! ಹೆರಿಗೆ ತೊಂದರೆಯಾದರೆ ಉತ್ತರದ ಗೋಡೆಯಲ್ಲಿ ಕೆತ್ತಿರುವ ಬೆತ್ತಲೆ ಹೆಂಗಸಿಗೆ ಎಣ್ಣೆ ಅಭಿಷೇಕ ಮಾಡಿದರೆ ಸಾಕು! ತೋಳು ಉಳುಕಿದರೆ ಶಿಲಾಬ ಲಿಕೆ ಮುಂದೆ ಹೋಗಿ ಹಣ್ಣು ಕಾಯಿ ಒಪ್ಪಿಸಿದರಾಯಿತು ಆನೆ ಕಾಲು ವಾಸಿಯಾಗಬೇಕುವರೆ ಗಜಚರ್ಮಾಂಬರಮೂರ್ತಿಗೆ ಮ ೂವತ್ತು ನಮಸ್ಕಾರ ಹಾಕಿ ಊರಿನ ಬ್ರಾಹ್ಮಣರಿಗೆಲ್ಲ ಮೂರು ಮೂರಾಣೆ ದಕ್ಷಿಣೆ ಕೊಟ್ಟರಾಯಿತು ಕೊಡಲಿ ಪೆಟ್ಟು ಬಿದ್ದರೆ ಪರಶುರಾಮ ವಿಗ್ರಹ ಇದೆ, ಬೆಸ್ತರಿಗೇನಾದರೂ ಗಾಯವಾದರೆ ಮತ್ಸ್ಯಯಂತ್ರ ಭೇದಿಸುವುದನ್ನೂ ಬಿಡಿಸಿದಾರೆ, ಹೀಗೆ ನಾನಾ ಜಾತಿಯವರು ನಾನಾ ಖಾಯಿಲೆಗಳಿಗಾಗಿ ನಮ್ಮೂ ರಿಗೆ ಬರುತ್ತಾರೆ ಊರಿಗೆ ಬಂದ ಮೇಲೆ ಸಂಕದ ಕಟ್ಟೆ ದಾಟಿ ತಾನೆ ಬರ ಬೇಕು? ನಮ್ಮಪ್ಪನ ಹತ್ತಿರ ಸುಖ ದುಃಖ ಹೇಳುವರು, ಅವರು ದೇವಸ್ಥಾ ನದ ಮಾಹಾತ್ಮ್ಯನನ್ನೆಲ್ಲ ವಿವರಿಸಿ ಭೋಜನಕ್ಕೆ ಅಕ್ಷತೆ ಕೊಟ್ಟು ಮನೆಗೆ ಬಂದು ಲೆಖ್ಖ ಒಪ್ಪಿಸಿ ಬಿಡುತ್ತಾರೆ. ಅಂಥ ಧಾರಾಳಿ ಮನೆಯಲ್ಲಿದ್ದು ಈಗ ಈ ಗ್ಯೆಯ್ಯಾಳಿ ಒಂದು ಪಾವು ರವೆ, ಅರ್ಧಸೇರು ಬೆಲ್ಲ ಅಂತ ಅನ್ನೋವಾಗ .. ಇರಲಿ. ಏನು ಹೇಳುತ್ತಿದ್ದೆ? ಇಪ್ಪತ್ತೆಲೆ ಒಪ್ಪತ್ತಿಗೆ? ಹೂ ಸದ್ಯಃ ಅದಷ್ಟೂನೂ ನಿರ್ವಹಿಸುವುದಕ್ಕೆ ಸಾಲಾಗಿ ಆರು ಹೆಣ್ಣು ಮಕ್ಕಳು ನಾವು ಮೂರು ಗಂಡು ಮಕ್ಕಳು ಬೇರೆ ಅವು ಎಲ್ಲೋ ಜಾತಿ ಕೆಟ್ಟು ಜನ ಕೆಟ್ಟು ಅಪ್ಪನ ಮುಖಕ್ಕೇನೆ ಯಾವುದೋ ಸೊಪ್ಪಿನ ಹೊಗೆ ಹಾಕಿ, ಟಾಟಾನೋ ಕಾಟಾನೋ, ಯಾವನವನು, ಅವನ ಕಮ್ಮಾರನಂಗಡಿ ಸೇರಿವೆ, ಮೂರೂವೆ, ತಿಂಗಳಿಗೆ ಒಟ್ಟು ಐವತ್ತು ರೂಪಾಯಿ ಮನಿಆರ್ಡರ್ ಮಾಡುತ್ತವೆ, ಆದರೂ ಅದೆಂಥ ಬಾಳು? ಎಂಥ ಬದುಕು? ಇರಲಿ ಆ ಮಾತೇಕೆ ಈಗ! ಒಂದು ದಿವಸವಾದರೂ ನೆಗಡಿ ಶೀತ ಅಂತ ನಮ್ಮಪ್ಪ ಮೂಗಿನ ತುದಿಗೆ ಚೌಕ ಹಿಡಿದಿಲ್ಲ; ನಾವೂ ಅಷ್ಟೆ, ಆರು ಜನ! ಅರವತ್ತಡಿ ಬಾವಿ, ಅರ್ಧ ಹರದಾರಿ ದೂರದಲ್ಲಿ. ಅಲ್ಲಿಂದ ತಲೆಮೇಲೆ ಗಡಿಗೆಗಳ ಗೋಪುರ, ಕೈಯಲ್ಲಿ ಹಗ್ಗ, ನವನೀತ ಮನೆಗೆ ಬರುತ್ತಿದ್ದೆವು, ಕರಗ ಬಂದ ಹಾಗೆ!

ಓದು ಬರಹ ಹೆಣ್ಣುಮಕ್ಕಳು ಕಲಿಯಬಾರದು ಅನ್ನೋದೇ ನಮ್ಮಪ್ಪನ ಹಠ. ಹಾದರದ ಕಥೆ, ಸೋದರರ ವಧೆ, ಕೈಹಿಡಿದವಳನ್ನ ಬೆಂಕಿಗೆ ತಳ್ಳುವುದು, ಕಾಡಿಗೆ ಅಟ್ಟುವುದು, ಅಪ್ಪ ಮಕ್ಕಳು ಜಗಳ ಆಡುವುದು, ಇವೆಲ್ಲ ಓದದೇ ಹೋದರೆ ಏನೂ ನಷ್ಟ ಇಲ್ಲ ಅನ್ನುವರು. ಪತ್ರಿಕೆಗಳನ್ನಂತೂ ಹೆಣ್ಣು ಮಕ್ಕಳು ಕೈಯಿಂದ ಮುಟ್ಟಲೇ ಕೂಡದು ಅಂತ ಅವರು ಕೂಗಾಡುವರು. ನನ್ನ ಸೊಸೆ ಈಗ ಮೊಸರು ಕಡೆಯುವಾಗಲೂ ಮಡಿಲಲ್ಲೊಂದನ್ನು ಹರಡಿ ಕೊಂಡೇ ಇರುತ್ತಾಳೆ, ಹಾಲು ಕರೆಯುವಾಗ ಪೇಪರನ್ನು ಬಿಚ್ಚಿ ಎಮ್ಮೆಮೈಗೆ ಒಂದು ಗುಂಡುಸೂಜಿ ತೆಗೆದು ಚುಚ್ಚಿಟ್ಟುಕೊಂಡು ಓದುತ್ತಾಳೆ! ಪೇಪರಿನವರು ಕಾಸಿಗೋಸ್ಕರ ಯಾವು ಯಾವುದೋ ಕಟ್ಟ ಖಾಯಿಲೆಗಳು ದುರಭ್ಯಾಸಗಳು ಎಲ್ಲಾನೂ ಬಣ್ಣ ಕಟ್ಟಿ ವಿವರಿಸುತ್ತಾರಂತ! ಹುಡುಗರ ಮನಸ್ಸು ಹುಡುಗಿಯರ ಮನಸ್ಸು ಕೂಳೆ ಮೂಡುವ ಸಮಾಚಾರ ಅಂದರೆ ಅವರಿಗೆ ಪರಮಾನ್ನ ಸಿಕ್ಕಿದ ಹಾಗಂತ, ನಮ್ಮಪ್ಪ ಹೇಳುವರು. ನನಗೇನು ಗೊತ್ತು, ಕಣ್ಣಿದ್ದೂ ಕುರುಡಿ, ಹಳೇ ಕಾಲದವಳು! ನೀವೇ ಹೇಳಬೇಕು.

ಓದು ಬರಹ ಕಲಿಯಲಿಲ್ಲ ಅಂತ, ನನ್ನನ್ನ ಲೆಕ್ಕದಲ್ಲಿ ಪಕ್ಕದಲ್ಲಿ ಮೋಸ ಮಾಡುವುದಕ್ಕಾಗುವುದಿಲ್ಲ ಯಾರ ಕೈಯಲ್ಲೂ. ಅಗಸನಿಗೆ ಹತ್ತು ಬಟ್ಟೆ ಕೊಟ್ಟರೆ, ಅದನ್ನೊಂದು ಕಡೆ ಬರೆದಿಡಬೇಕು ನನ್ನ ಸೊಸೆಗೆ-ಮೂವತ್ತು ಬಟ್ಟೆ ಹಾಕಿ ಮೂರು ತಿಂಗಳಾದ ಮೇಲೆ ಅವನು ಮೊಸಳೆ ಬಾಯಿಂದ ಪಾರಾಗಿ ಮನೆಗೆ ಬರಲಿ, ಏನೇನು ಕೊಟ್ಟಿದ್ದಿರಿ ಅವ್ವಾ ಅಂತ, ನಾನು ಹೇಳುತ್ತೇನೆ, ಒಂದು ಜನಿವಾರನೂ ಬಿಡದೆ! ಹಾಲಿನ ಲೆಕ್ಕ ಎಷ್ಟು ಅಂದರೆ ಹಾಳ ಹಾಳೇನೇ ಹಾಳು ಮಾಡುತ್ತಾರೆ, ಗುಣಾಕಾರ ಭಾಗಾಕಾರ ಹಾಕಿ! ಹೋದ ತಿಂಗಳು ಬಾಕಿ ಹಾಲಿನವಳ ಮೇಲೆ ಮೂರು ಮುಕ್ಕಾಲು ಸೇರು, ಈ ತಿಂಗಳು ೩೦ ತಾರೀಖಿದೆ, ದಿನವೂ ಮೂರೂವರೆ ಪಾವು ಎಮ್ಮೆ ಹಾಲು; ಎರಡೂಕಾಲು ಪಾವು ಹಸುವಿನ ಹಾಲು, ಆರುದಿನ ಒಂದೊಂದುಪಾವು ಎಮ್ಮೆ ಹಾಲು ಹೆಚ್ಚು, ಅರ್ಧ ಪಾವು ಹಸುವಿನ ಹಾಲು ಕಡಿಮೆ, ಒಂದುದಿನ ಎಮ್ಮೆ ಒದಿಯಿತು ಅಂತ ಹಾಲೇ ಇಲ್ಲ, ಇನ್ನೆರಡು ದಿನ ಹಸು ಎಲ್ಲೋ ತಪ್ಪಿಸಿಕೊಂಡು ಹೋಗಿತ್ತು.... ಕೂಡಿ, ಲೆಕ್ಕಾನ.... ಎಮ್ಮೆಹಾಲು ರೂಪಾಯಿಗೆ

ನಾಲ್ಕೊಕಾಲು ಸೇರು, ಹಸುವಿನ ಹಾಲು, ಮೂರೂವರೆ ಅಂದರೆ, ಇವರ ಪಾಸಿಲ್ಲ, ಪೇಚಾಟ ನೋಡೋದಕ್ಕೆ ಆಗುವುದಿಲ್ಲ, ಈ ವಿದ್ಯಾವತಿಯ ರದು ನಾನೀಗ ಬೇಕಾದರೂ ಆ ರಾಮನ ಮೇಲೆ ಭಾರ ಹಾಕಿ, ನೀವು ಒಂದು ಅಷ್ಟೋತ್ತರ ಹೇಳುವುದರೊಳಗಾಗಿ ಇಷ್ಟು ರೂಪಾಯಿ ಇಷ್ಟು ಆಣೆ ಇಷ್ಟು ಕಾಸು ಅಂತ ಒದರಿ ಬಿಡುತ್ತೇನೆ, ನೋಡುತ್ತಿರಿ . ಯಾಕೆ ಹೇಳಿದೆ ಅಂದರೆ, ಈ ಗಂಡಪ್ಪ, ಇವನ ಹೆಂಡತಿ, ಗಂಡಪ್ಪನ ಮೇಷ್ಟರು, ಈಗಿನ ಅಮಲ್ದಾರರು ಕಡೆಗೆ ಡಿಪ್ಟಿ ಕಮಿಷನರು,—ಎಲ್ಲರ ಹಣೇಬರಹವೂ ಒಂದೇ, ಕಾಗದ ಪಾಸಿಲ್ಲ. ಬರವಣಿಗೆ ಇಲ್ಲದಿದ್ದರೆ ಇವರದೆಲ್ಲ ಮರವಣಿಗೇನೆ! ಅದೆಲ್ಲಯಾಕೆ ಈಗ?

ಈ ವೈದ್ಯರ ಮನೆಗೆ ಬರುತ್ತಾಲೂ ನನಗೆ ಪ್ರಾರಂಭವಾಯಿತು, ನೋಡಿ ಬೇನೆಗಳು! ಅದುವರೆಗೂ ಕಲ್ಲು ಗುಂಡಿನ ಹಾಗಿದ್ದವಳು ಅರೆಯುವುದು ಕುಟ್ಟುವುದು ಸೋಸುವುದು ಕಾಯಿಸುವುದು ಬೇಯಿಸುವುದು, ಈ ಗೃಹಚಾ ರಕ್ಕೆ ಸಿಕ್ಕಿ ಇವತ್ತು ಉಷ್ಣ ನಾಳೆ ಶೀತ ನಾಳಿದ್ದು ವಾಯು ಹೀಗೆ ಹಾಸಿಗೆ ಹಿಡಿದೆ ಶ್ಲೇಷ್ಮವಂತೂ ಅಂತಾರಲ್ಲಾ ಆಗಂತೂ ತಡೆಯಲಾರದ ಉಬ್ಬಸ ನನಗೆ! ಚೂರ್ಣ ಮಾಡುವಾಗ ಎದ ಎಲ್ಲಾ ಧೂಳು ತುಂಬುತ್ತೆ ಅದಕ್ಕೆ ಹಾಗಾ ಗುವುದು ಅಂತ ನಮ್ಮ ಅತ್ತಿಗೆ ಯಾರು ಯಾರೋ ಹೇಳಿದರು. ಅವರಿಗ ಕಿವುಡು ಒಂದಿದ್ದ ಮೂನ್ನ ಪಾನ್ನ! ಈವಾಗಲೂ ಕೆಪ್ಪೀ ಅಂತ ಅವರೆದುರು ಹೋಗಿ ನಿಂತು ಕಲ್ಲಗೆ ಅನ್ನಿ! ನೀವು ತುಟಿ ಬಡುವ ಘಾಟಿ ನೋಡಿ ಆಕೆ ನೀವು ಬೈದಿರಿ ಅಂತ ಪತ್ತೆ ಹಚ್ಚಿ ಪೂರಕ್ಕೆ ಹಿಡಿದು ಹಿಂದೇನ ಬರುತ್ತಾರೆ! ಆಗಿನ್ನೂ ಕಿವುಡು ಬಡಿದಿರಲಿಲ್ಲ ಆದರೂ, ಹೊಸ ತಾನೆ ನಾನು? ಅವಳ ಅಪ್ಪನ ಮನೆಯಿಂದ ತಂದಿದ್ದಾಳೋ ಏನೋ ಉಬ್ಬಸಾನ! ಅಂತ ಹೇಳುವರು. ನನ್ನ ಮಗನನ್ನ ಮದನಪಲ್ಲಿಗೆ ಕಳುಹಿಸುತ್ತಾಳೋ ಏನೋ ಈ ಪುಣ್ಯಾ ತಿಗಿತ್ತಿ, ವಿಶ್ವೇಶ್ವರನ ಶಾಪವೋ ಏನೋ,ಅಂತ ರೇಗುವರು. ನನಗೆ ದಿಗಿಲಾಗು ವುದ. ಇನ್ನಲ್ಲಾದರೂ ನೋಡೋ, ಅಂಥ ಬರಗಾಲವೇನೋ, ಹೋಗಿ ಕೇಳಿದರೆ ಕೊಡುತ್ತಾರೆ ಕಣೋ ಅನ್ನುವರು. ನಾನು ಅದ್ಯಾರೋ ಗಂಡ ಕುಡುಕರು ಮಾಡಿದರುತಲ್ಲ ಹಾಗೆ ಹಿತ್ತಲ ಕಡೆ ಕತ್ತಲಲ್ಲೇ ಓಡಾಡುವೆ, ನಾಗರ ಹಾವು ಕಚ್ಚಿ ಬಾಧೇನೇ ತೀರಿಹೋಗಲಿ, ಅಂತ. ಇಂಥ ಗೊಡ್ಡು

ಹಸು ತಂದೆಯಲ್ಲೋ ಅನ್ನುವರು ನಮ್ಮತ್ತೆ. ನಾನು ಹೊಟ್ಟೆ ಹೊಡೆದು ಕೊಳ್ಳುವೆ ಅಯ್ಯೋ! ಅಯ್ಯೋ! ಈಗ ನೆನೆದುಕೊಂಡರೆ ನಗು ಬರುತ್ತೆ ಅಷ್ಟು ಹರಕೇನ ಯಾವ ಮಹಾರಾಜರೂ ಪೂರೈಸತ್ತಿರಲಿಲ್ಲ ಆ ದೇವರು ಗಳು ಅದನ್ನೆಲ್ಲ ಹೇಗೆ ನಂಬಿದರೋ! ಎಲ್ಲರೂ ೞರಿಗೆ ಹೋಗುತ್ತೇನೆ ಅಂತ ಹರಕೆ ಹೊತ್ತರೆ, ನಾನು ಬೆಳ್ಳಿ ತೇರನ್ನೇ ಮಾಡಿಸಿ ಕೊಡುತ್ತೇನೆ ಅಂದೆ! ಮಗುವಿಗೆ ಅಲ್ಲಿ ಬಂದು ಮುಡಿ ಕೊಡುತ್ತೇನೆ ಅಂತ ಎಲ್ಲರೂ ಹರಕೆ ಹೊರು ತ್ತಾರೆ, ಮಗುವಿಗೆ ಆಗುವ ಕ್ಷೌರವೆಲ್ಲ ನಿನ್ನ ಹೆಸರಲ್ಲೇ ನಡೆಯಲಿ ಅಂದೆ ನಾನು! ತುಲಾಭಾರ ಎಂಬುವುದಕ್ಕೆ ಒದಲು ತಕ್ಕಡೀನೆ ಕೊಡುತ್ತೇನೆ ಅಂದೆ ಕಾಶಿಯಿಂದ ತೆಂಕಾಶಿವರೆಗೂ ಇರುವ ನೂರಾರು ಪುಣ್ಯ ಕ್ಷೇತ್ರಗಳಿಗೂ ಹೋಗಿ ಬರುತ್ತೇನೆ ಅಂತ ಪ್ರಾರ್ಥಿಸಿಕೊಂಡೆ ಕಡೆಗೆ ಇವರ ಮನೆಗೆ ಬಂದ ಆರನೆಯ ವರ್ಷ, ಅತ್ತೆ ಮಗನ ಕೋಪ ಆಕಾರ ಮುಟ್ಟುವುದರೊಳಗೆ ದೇವರು ನನ್ನ ಬಂಜೆತನ ಬಿಡಿಸಿದ ಆದರೆ, ಹರಕ ಗಿರಕೆ ಒಂದೂ ನಡೆಸಲಿಲ್ಲ ನಾನು; ನಾನೆಲ್ಲಿಂದ ನಡೆಸಲಿ? ಅವರ ಹತ್ತಿರ ಹೇಳಿದರೆ, "ಅಮ್ಮ ಹೊತ್ತ ಹರಕೆಗಳೆಲ್ಲ ಮುಗಿಯಲಿ, ಆಮೇಲೆ ಕಿಂಚಿತ್ತೇನಾದರೂ ಕಾಸೂ ಆಯುಸ್ಸೂ ಉಳಿದಿದ್ದರೆ ನಿನ್ನ ಪಟ್ಟಿ ತೆಗೆದುಕೊಳ್ಳುವ ಅಂದರು. ದೇವರಷ್ಟು ತಡದಾ ರೆಯೇ? ಮನ್ಮಥ ಮೈಮೇಲೆ ಐದು ಹೂವುಗಳನ್ನು ಕೊಂಚ ಜೋರಿನಿಂದ ಎಸೆದ ಮಾತ್ರಕ್ಕೇನೆ ಉರಿಗಣ್ಣು ತೆರೆದು ಶಿವ ಆತನನ್ನು ಸುಟ್ಟೇಬಿಟ್ಟ ನಲ್ಲಾ! ಅಂಥಾದ್ದರಲ್ಲಿ ಎಸೆಯುತ್ತೇನೆ ಅಂದ ಹೂವನ್ನು ಎಸೆಯದೆ ಹೋದರೆ ಅವನಿಗೆ ಎಷ್ಟುಕೋಪ ಬರಬೇಡ! ಸರಿ! ಒಂದು ಎರಡು ಮೂರು ನಾಲ್ಕು ಅಂತ ಕಿತ್ತುಕೊಂಡು ಹೋದ, ಕಂದಗಳನ್ನು. ನನ್ನ ಹಾಳು ಹೊಟ್ಟೆಯನ್ನು ನಾನು ಕಿವುಚಿಕೊಂಡದ್ದು ಸಾಲದೆ ಹೋದರೆ ನಮ್ಮ ಅತ್ತೆ ಬೇರೆ, ಉರಿಯುವ ಬೆಂಕಿಗೆ ತಿದಿ ಒತ್ತುವರು; ಇಷ್ಟಾದರೂ ಬುದ್ಧಿ ಬರಲಿಲ್ಲವೇನೋ? ವಂಶ ಕ್ಕೊಂದು ಬಿದಿರಿನ ಕೋಲೂ ಇಲ್ಲವಲ್ಲೋ! ಹೋಗಿ ನೋಡೋ ಎಲ್ಲಾದರೂ! ಶಾಸ್ತ್ರಿಗಳಿಗೂ ಹೇಳಿದೇನೆ, ಕಣೋ! ನಿನ್ನ ವೈದ್ಯಕ್ಕೆ ಜಗ್ಗುವುದಿಲ್ಲ ಇವಳ ರೋಗ! ಭೂತವೋ ಪ್ರೇತವೋ ಇರಬೇಕು, ಅಂತ ಗಂಟೆ ಗಂಟೆಗೂ ಒಡಕು ಶಬ್ದ ನುಡಿಯುವರು.

ಆಗ ಈ ಗಂಡಪ್ಪ ಹುಟ್ಟಿ ನನ್ನ ಹೊಟ್ಟೆ ತಣ್ಣಗೆ ಮಾಡಿದ. ಅವನೇ ನಾನು ಹಡೆದ ಮೊದಲನೇ ಗಂಡು ಕೂಸು. ಅಷ್ಟು ಹೊತ್ತಿಗೆ ಈ ಮನೆ ಶುಂಠಿ ಜೀರಿಗೆ ಮೆಣಸು ಯಾವುದೂ ಇಲ್ಲದೆ ಚೊಕ್ಕಟವಾಗಿತ್ತು ಏಕೆಂದರೆ ಸೀಸೆ ತುಂಬ ಬಣ್ಣದ ನೀರು ಹಂಚಿ ಜಾತಿ ಕೆಡಿಸುವ ಷರಾಯಿ ವೈದ್ಯರು ಬಂದರು ಈ ಊರಿಗೆ ಹಿಂದೆ, ಕಾಶಿಯಿಂದ ವಿಶ್ವೇಶ್ವರನನ್ನ ತಂದು ಅವನ ತಲೆಮೇಲೆ ಗುಡಿ ಕೆಡವಿದರಲ್ಲಾ, ಆಮನೆಯವರ ಮಹಾಪ್ರಸಾದದಿಂದ! ಪಥ್ಯ ವಿಲ್ಲ, ಪಾರಣೆ ಇಲ್ಲ, ಚೆನ್ನಾಗಿ ಕುಲುಕುವುದಂತೆ ಬಾಯಲ್ಲಿ ನೊರೆ ಬರುವ ತನಕ, ಕುಡಿಸುವುದಂತೆ ಒಂದು ಗುಟುಕು! ವಾಯು ಪಿತ್ತ ಕಫ ಎಲ್ಲ ಮಾಯವಾಗಿ ಹೋಯ್ತು ಯಾವ ಯಾವುದೋ ಹೊಸ ಹೊಸ ಇಂಗ್ಲೀಷ್ ರೋಗಗಳೆಲ್ಲ ಬಂದು ಅಂಟಿಕೊಂಡಿತು, ಈ ಊರಿನ ಜನರಿಗೆ ಗಾಜಿನ ಕೊಳವೆ ಯನ್ನ ನಾಲಿಗೆ ಕೆಳಗೆ ಇಡುವುದು, ಕೊಂಕುಳಲ್ಲಿಡುವುದು, ನೂರಕ್ಕೇರಿತು ತೊಂಬತ್ತಕ್ಕಿಳಿಯಿತು ಅನ್ನುವುದು. ಹಚ್ಚಿದ್ದಕ್ಕೆ ಕಾಸು! ಚುಚ್ಚಿದ್ದಕ್ಕೆ ಕಾಸು! ಸುಲಿಗೆಗೊಬ್ಬಳು ಸೂಲಗಿತ್ತಿ ಬೇರೆ ಏನು ಹೇಳುತ್ತಿದ್ದೆ? ಓ! ಹೌದು ಗಂಡಪ್ಪ ಹುಟ್ಟಿದ ಅವರಿಗೂ ಅವರ ತಾಯಿಗೂ ಆಗ ನನ್ನ ಮೇಲೆ ಏನು ವಿಶ್ವಾಸ! ಏನು ಪ್ರೀತಿ! "ಸೀತಾ! ಆ ಕಿಟಕಿ ಹಾಕಿಬಿಡು! ಸೀತಾ! ಕೊಂಚ ಹಾಲು ಹಾಕಿಸಿಕೊಳ್ಳೆ! ಸೀತಾ! ಮೆಲ್ಲಗಿಳಿ!" "ನನ್ನ ಮನೆಗೆ ದೀಪ ಬಂತು" "ನನ್ನ ಪಿತೃಗಳು ಉದ್ಧಾರವಾದರು ನನ್ನಪಾಪ ವೆಲ್ಲ ತೊಳೆದು ಹೋಯಿತು" ಅಂತ ಮಗುವನ್ನ ಇಬ್ಬರೂ ಮುದ್ದಾಡಿಸಿದ್ದೂ ಆಡಿಸಿದ್ದೆ ಕೂಸಿನ ಕಣ್ಣು ಕಿವಿ ಬಾಯಿ ಜೊಲ್ಲು ಎಲ್ಲವನ್ನೂ ಹೊಗಳಿದ್ದೇ ಹೊಗಳಿದ್ದು. ಯಾರ ಹಾಗಿದೆ? ಏನು ಹೇಳುತ್ತೆ? ಯಾರನ್ನ ನೋಡಿ ನಗುತ್ತೆ? ಯಾಕೆ ಅಳುತ್ತೆ? ಅಂತ ಇಬ್ಬರೂ ಚರ್ಚೆ ಮಾಡಿದ್ದೂ ಮಾಡಿದ್ದೆ!

ಅಂತೂ ಮೂರು ತಿಂಗಳ ಕಾಲ ನನ್ನ ಕಂದ ನನ್ನ ಸಂಸಾರಾನ ಸಿಹಿ ಮಾಡಿದ. ನಮ್ಮತ್ತೆ ರೇಗುವುದನ್ನೇ ಮರೆತರು. ನನಗೆ ಸಂಪೂರ್ಣ ಸ್ವಾತಂತ್ರ್ಯವನ್ನು ದಯಪಾಲಿಸಿದರು "ಎದೆಹಾಲು ಕುಡಿಯುವ ಮಗು, ಹುಷಾರಾಗಿರಮ್ಮ! ಶೀತವಾದೀತು! ಮಗು ಗಂಟಲು ಗೊರಗೊರ ಅನ್ನುತ್ತೆ ಒಂದು ವಿಳ್ಳೆ ತುಪ್ಪ ಕಡಿಮೆ ಹಾಕುತ್ತೇನೆ, ಸೀತಾ!" ಹೀಗೆ ಮಗುವಿನ

ಆರೋಗ್ಯದ ಮೇಲೆ ಹೊರಳಿದ ಅತ್ತೆಯ ಅಕ್ಕರೆ ನನ್ನನ್ನ ಮತ್ತೆ ಪೀಡಿಸ ತೊಡಗಿತು. ಗುಂಡು ಹೊಟ್ಟೆ ಒರಬರುತ್ತಾ ಮಂದವಾಯಿತು. ಅವನಿಗೆ ಪ್ರವೃತ್ತಿ ಮಾರ್ಗವೇ ಕಷ್ಟವಾಯಿತು. ಸರಿ, ಅವರು ನಾಡಿ ಹಿಡಿದರು. ನಾಲಿಗೆ ನೋಡಿದರು. ಜೇನು ತುಪ್ಪದಲ್ಲಿ ಕಲಸಿ ಕೊಟ್ಟರು, ಜೀರಿಗೆ ಕಷಾಯ ಕೊಟ್ಟರು. ನನ್ನ ಬಾಯಿಗೆ ಜೇರಿ ಕುಕ್ಕೆ ಬಿಗಿದರು. ಹಾಲು ಮೊಸರು ತುಪ್ಪ ನಿಷೇಧಿಸಿದರು. ಸಾರವಿಲ್ಲದ ಸಾರನ್ನವೇ ನನಗಾಧಾರವಾಯಿತು. ಒಂದೆರಡು ವಾರಗಳಲ್ಲೇ ಗುಂಡನಿಗೆ ಹಾಲುಗೆಡ್ಡೆ ಅಂತ ಅವರೇ ಗಾಬರಿಗೊಂಡರು. ಮಗನಿಗೆ ಮಂದ ವಾಸಿಯಾಗಲೇ ಇಲ್ಲ, ಆದ್ದರಿಂದ ಅತ್ತೆಯವರು ನನ್ನನ್ನೇ ಯದ್ವಾತದ್ವಾ ದೂರಿದರು. ತಮ್ಮ ನಾಲಿಗೇನ ಹತೋಟಿಯಲ್ಲಿಟ್ಟುಕೊಳ್ಳಲಾರದೆ ಅಡಿಗೆ ಮನೆಯಲ್ಲಿ ದೀಪ ಆರಿಸಿ ಹಾಲು ಮೊಸರು ಒಗ್ಗಿಸಿಕೊಳ್ಳುತ್ತಾ ಇದ್ದಾಳೆ, ಬೊಗಸೆ ಬೊಗಸೆಯಾಗಿ, ಅಂತ ನೆರೆಮನೆ ಹೊರಮನೆಯವರ ಹತ್ತಿರವೆಲ್ಲಾ ಡಂಗೂರಿಸಿದರು. ನನಗೂ ರೇಗಿತು. ಮಗು ಹುಷಾರಾಗಬೇಕು ಎಂಬ ಹಂಬಲ ಅಜ್ಜಿಗಿಂತ ತಾಯಿಗಿರುವುದು ಸಹಜ ಅಂತ ನಾನೂ ಅಂದೆ. ಸರಿ! ಹದಿನೆಂಟು ಪುರಾಣಗಳನ್ನೂ ಮತ್ತೊಮ್ಮೆ ನನ್ನ ತಲೆ ಮೇಲೆ ಮಗುಚಿದರು. ಗುಂಡನ ಬಾಯೆಲ್ಲ ಕೆಂಪಗೆ ಹುಣ್ಣಿನ ಚುಕ್ಕೆಗಳು ಕಾಣಿಸಿದವು. ಅದಕ್ಕೂ ನನಗೇ ಸಹಸ್ರನಾಮ. ನಾನು ಯಾವ ಆರೈಕೆಯೂ ಇಲ್ಲದೆ, ಬಾಡಿ ಬೆಂಡಾದದ್ದು ಅತ್ತೆಗೆ ಕಾಣಿಸಲೇ ಇಲ್ಲ. ಹಗಲೆಲ್ಲ ಆಕೆಯ ಬೈಗಳ, ರಾತ್ರಿ ದಿಂಬಿಗೆ ತಲೆ ಕೊಟ್ಟರೆ ತಲೆ ಒಳಗೆಲ್ಲ ಕಟೋ ಪಟೋ ಅಂತ ಅವುಗಳ ಮೊಳಗು! ಅರೆ ನಿದ್ದೆಯಲ್ಲೂ ಅತ್ತೆಯದೇ ಭಯಂಕರ ಸ್ವರೂಪ!

ಕಡೆಗೊಂದು ದಿನ ಇವರ ಕಾಲಿಗೆ ಬಿದ್ದು ಕೇಳಿಕೊಂಡೆ! ಯಾಕೆ? ಅವಮಾನವೇನು ಅದರಲ್ಲಿ? ಈಗಿನ ಕಾಲದ ಹುಡುಗಿಯರು ಇದನ್ನು ಕೇಳಿ ನಗುತ್ತಾರೆ, ಅಂತಲೇ? ನನ್ನ ಸೊಸೆ ಕಾಲಿಗೆ ನನ್ನ ಮಗ ಎಷ್ಟು ಸಲ ನಮಸ್ಕಾರ ಮಾಡುತ್ತಾನೋ, ಅಂತಲೇ? ಎಣ್ಣೆಯಿಲ್ಲದ ದೀಪ, ಬೆಣ್ಣೆಯಿಲ್ಲದ ತುಪ್ಪ, ಬಣ್ಣವಿಲ್ಲದ ಸೀರೆ, ಬಂದಿರುವ ಈ ಕಲಿಕಾಲದಲ್ಲಿ, ನನ್ನ ಮಗು ಮಂದ ಹೋಗಲಿ ಅಂತ ನಾನು ಅವರ ಕಾಲಿಗೆ ಬಿದ್ದೆನಲ್ಲಾ ಅಂತ ಹೆಣ್ಣು ಮಕ್ಕಳು ನಕ್ಕರೆ ನಗಲಿ! ಅವರ ಹಲ್ಲಿನ ಹುಳುಕು ಕಾಣುತ್ತೆ,

ಅಷ್ಟೆ! ನನಗೇನ ? ತಂದೆ ಕೊಟ್ಟದ್ದೆಲ್ಲ ಹೊಟ್ಟು, ತಾಯಿ ಕೊಟ್ಟದ್ದೆಲ್ಲ ತವುಡು, ಅಂತ ಗಾದೆಯೇ ಇದೆ, ಗಾಥಾಸಪ್ತಶತೀಲಿ, ನಮ್ಮಪ್ಪ ಹೇಳುತ್ತಿದ್ದರು ಹಾಗಂತ! "ಪಿತರಸ್ಯ ಅನ್ನೃತಂ ವಿಷಂ", ಅಂತಾರೆ ಆದ್ದರಿಂದ, ಆ ಪರಂಗಿಗಾದರೂ ತೋರಿಸಿ, ಅಂದೆ "ತಾಳೆ! ಅಮ್ಮ ನಾಳೆ ಆಚೆ ಬೀದೀಲಿ ಬಂದಿರೋ ಸ್ವಾಮಿಗಳ ಪಾದಪೂಜೆಗೆ ಹೋಗುವಾಗ ಗಂಡನನ್ನ ಎತ್ತಿಕೊಂಡು ಹೋಗಿ ತೋರಿಸಿ ತಾ ಅಂತ ಈರನಿಗೆ ಹೇಳುತ್ತೇನೆ" ಅಂದರು ಉಪ್ಪು ಖಾರ ತಿನ್ನುವ ದೇಹ, ಅನ್ನಕ್ಕೆ ಕಲ್ಲು ಹಾಕಿದವನ ಹತ್ತಿರ ಹೋಗಿ "ಇದೇ ಉಂಡೇನು, ಕಲಕಿ ತೆಗಿ" ಅಂತ ಗೋಗರೆಯುವುದಕ್ಕೆ ನಾಚಿಕೆ ಸರಿ, ಅಂದೆ ಗಂಡನೂ ಹೋಗಿ ಬಂದ, ಈರನ ಭುಜದ ಮೇಲೆ! ಅವರು ಹೇಳಿದಂತೆ ಗೆಡ್ಡೆ ಗೋಜನೇನೇ ಇಲ್ಲ, ಮಗನಿಗೂ ತಾಯಿಗೂ ಒಳ್ಳೇ ಆಹಾರ ಕೊಡಿ, ಸಾಕು ಅಂತ ಮಗುವಿಗೇನೋ ಅವತ್ತಿನಿಂದ ಹಾಲು ಬಿಡಿಸಿ ಹಾಲು ಕೊಡಿಸುವುದಕ್ಕೆ ಮೊದಲು ಮಾಡಿದರು ಗಂಡನ ಯೋಗಕ್ಷೇಮಕ್ಕೆ ನಾನು ಜೀವವಾದಂದಿನಿಂದ ನನಗೆ ಹಳೇ ಚಿತ್ರಹಿಂಸೇನೇ ಗತಿ ಆಯಿತು

ಆದರೂ ಆಗಾಗ ಮುದ್ದಾಡುವುದಕ್ಕೆ ಗಂಡ ನನ್ನ ಕೈಗೂ ಸಿಗುತ್ತಿದ್ದ ನೆರೆ ಬಂದ ಹಾಗೆ ಮನೆಯೊಳಗೆ ನುಗ್ಗಿ ಬಂದ ಬಡತನವನ್ನೂ ಕೂಡ ಗಂಡ, ಅಂಬೆ ಕಾಲಿಕ್ಕಿ ಹೊಸಲು ದಾಟಿ ಎದ್ದು ನಿಂತು ಮೊದಲು ಮಾತಾಡಿ ಅಂಗಳದಲ್ಲೆಲ್ಲಾ ಓಡಾಡಿ ಚೂರ್ಣದ ಸೀಸೆ ಒಡೆದು ಮೈಯೆಲ್ಲ ಚೆಲ್ಲಿಕೊಂಡಾಗ, ಮರೆತು ಬಿಡುತ್ತಿದ್ದೆ ಅಷ್ಟು ಹೊತ್ತಿಗೆ ಗಂಗೂನೂ ಹುಟ್ಟಿದ್ದಳು ಗಂಡನಿಗೆ ಕಾಡಿಸುವುದಕ್ಕೊಂದು ತಂಗಿ ದೊರೆತಳು ಅವರಿಬ್ಬರಿಗೂ ಸದಾ ಜಗಳ, ಸದಾ ಮಾರಾಮಾರಿ ಈಗಂತೂ ನನ್ನ ಸೊಸೆಯ ವರ ದೆಸೆಯಿಂದ ಗಂಗು ನಮ್ಮಮನೆ ಹೊಸಲೇ ದಾಟುವುದಿಲ್ಲ ಅಂತ ಹಠ ಹಿಡಿದಿದ್ದಾಳೆ ಅವಳ ಗಂಡನೂ ಕೂಡ ಗಡಿಬಿಡಿ ಮಾಡುತ್ತಿದಾನೆ, ಕರೆದು ತರುವುದಿಲ್ಲ, ಅದೆಲ್ಲ ಈಗ ಏಕೆ? ಏನು ಹೇಳುತ್ತಿದ್ದೆ ನಾನು? ಹಾಂ, ಗಂಗೂ ಗಂಡೂ ಇಬ್ಬರೂ ಸ್ಕೂಲಿಗೆ ಹೋಗುತ್ತಿದ್ದರು ಹೆಣ್ಣು ಮಕ್ಕಳು ಶಾಲೆಯಲ್ಲಿ ಓದಬಾರದು ಅನ್ನುವುದು ನನ್ನ ಕಾಲಕ್ಕೇ ಮುಕ್ತಾಯ ಶೀನಿವಾಸರಾಯರು ಅಂತ ಒಬ್ಬರು ಮೇಷ್ಟರಿದ್ದರು ಆಗ. ಚಿಕ್ಕ ಮಕ್ಕಳ ಸ್ಕೂಲಲ್ಲಿ! ಹುಂ. 'ಶೀನಿ' ಅಂತಲೇ ಅವರ ಹೆಸರು ನಮ್ಮ ಗಂಡೂ ನಮ್ಮ ಗಂಗೂ ಇಬ್ಬರೂ

ಹಾಗೇನೆ ಹೇಳುವುದ. ಅವರ ಹೆಂಡತಿ ವಿಶಾಲಾಕ್ಷಮ್ಮನವರು ದಿನವೂ ದೇವಸ್ಥಾನಕ್ಕೆ ಹೋಗುವಾಗ ನಮ್ಮ ಮನೆ ಮುಂದೆ ಒಂದು ಕೂಗು ಹಾಕುತ್ತಿದ್ದರು! ಸಾಕ್ಷಾತ್ ಕಂಚು ಕಂಠಿ! ಮುತ್ತೈದೆ ಅಂದರೆ ಅವರ ಬಂಗಾರಕ್ಕೆ ಅವರ ಸಿಂಗಾರಕ್ಕೆ ಹೇಳಬೇಕು! ಈಗಿನವೆಲ್ಲ ಬರೀ ಕುಗೆಭುಂಗಾರ! ಸಾಬೂನು ಸಿಂಗಾರ! ಅದೆಲ್ಲ ಯಾಕೆ ಈಗ. ಏನು ಹೇಳುತ್ತಿದ್ದೆ? ಹುಂ. ಮಕ್ಕಳಿಬ್ಬರೂ ಹಾಸಿಗೆ ಬಿಟ್ಟೆದ್ದ ಕೂಡಲೇ ಪ್ರಾರಂಭಮಾಡಿದ ಜಗಳವನ್ನ ಅರ್ಧ ನಿದ್ರೆಯಲ್ಲಿ ಎಚ್ಚರವಾದರೆ ಮತ್ತೆ ಮುಂದವರಿಸುತ್ತಾರೆ ಅದು ಯಾವ ಪುರಾಕೃತ ಯುದ್ಧ ಶೇಷವೋ, ಸಿತಾಮಹನೇ ಬಲ್ಲ ಆದರೆ ನಮ್ಮವರು ತಾಯಿ ಮಗ ಇಬ್ಬರೂ ಅವರ ಕಡೆ ಕೈ ಕೂಡ ಬೀಸುವುದಿಲ್ಲ, ಒಂದು ಸಲ ಕೂಡ ಕಣ್ಣುರುಳಿಸುವುದಿಲ್ಲ ಅಷ್ಟು ಮೋಹ ದೇವರು ಕೊಟ್ಟ ಬುದ್ಧೀನ ದೇವರೇ ತಿದ್ದುತ್ತಾನೆ, ಹೊಡೆದು ಬಡಿದು ಚಿವುಟಿದರೆ ಯಾವ ಮರ ಚಿಗುರುತ್ತದೆ? ಅಂತ ಅವರು ನಗುತ್ತಾ ಕೇಳುವರು. ಗುಂಗೂಗೆ ಒಂದು ಕಥೆ ಹೇಳೋ ಅಂದರೆ ಅವನು ಅವಳಿಗೆ ಬೇಡರ ಕರಡಿ ಕಥೆಯನ್ನೇ ಆಲಾಪಿಸುವನು! ಗುಂಡನಿಗೆ ಒಂದು ಕಥೆ ಹೇಳೆ ಅಂದರೆ ಅವಳು, 'ಒಂದಾನೊಂದೂರಲ್ಲಿ ಗೂಂಡಾ ಅಂತ ಕಳ್ಳನಿದ್ದ" ಅಂತ ಪ್ರಾರಂಭಿಸುವಳು ಸರಿ, ಅವನು ಕೋಣ ಅಂತಾನೆ; ಅವಳು ಕೋಡಂಗಿ ಅಂತಾಳೆ, ಅವನು ಗಂಡು ಬೀರಿ ಅಂತಾನೆ, ಅವಳು ಹೆಣ್ಣಿಗ ಅಂತಾಳೆ, ಅವನು ಪರಚುವುದ, ಅವಳು ಕಚ್ಚುವುದು, ಹೀಗೆ ಹಿಟ್ಲರೊಂದು ಕಡೆ ಮುಸಾಲಿನಿ ಒಂದು ಕಡೆ! ಮುಸಾಲಿನಿ ಅಂದರೆ ಲಾಲಿನಿ ಪಾಲಿನಿ ಮೃಣಾಳಿನಿ, ಅಂದ ಹಾಗೆ ಒಬ್ಬಳು ಹೆಂಗಸು ತಾನೆ? ಆ! ಅಲ್ಲವೇನು? ಬಿಡಿ ಅದೆಲ್ಲ ಯಾಕೆ ಈಗ?

"ಯಾರ ಮನೆಗೋ ಹೋಗಬೇಕಾದ ಪದಾರ್ಥ! ಇದಕ್ಕೆ ಕೈಕೊಡುವ ಪುರುಷಾಮೃಗಕ್ಕೆ ಹೊತ್ತುಗೊತ್ತಿಗೆ ಅನ್ನವಾದರೂ ಸಿಗಬೇಡವೆ? ಅಡುಗೆ ಮನೆ ಅಚ್ಚುಕಟ್ಟು ಒಂದಿಷ್ಟು ಕಲಿಯ ಬೇಡವೇ?" ಅಂತ ನಾನಂದರೆ ಅತ್ತೆಗೆ ದೂರ್ವಾಸನೆ! ಪುರಾಣ ಕೇಳುವುದಕ್ಕೆ ಅಂತ ಹೋಗುವುದು, ನನ್ನ ಪುರಾಣವನ್ನೇ ಪ್ರಚಾರಮಾಡುವುದು. ಮನೆಯಲ್ಲೋ. . ಆಗಿನ್ನೂ ಕಿವುಡು ಹೊಡೆದಿರಲಿಲ್ಲ . ಸಾಕ್ಷಾತ್ ಕುಂಭಕರ್ಣವೇ! ಯಾರು ಏನು ಪಿಸುಗುಟ್ಟಿದರೂ ಅದನ್ನೆಲ್ಲ ಆ ಕುಂಭದಲ್ಲಿ ತುಂಬಿಕೊಂಡು ಅಂಜನೇಯನ ಗುಡಿಮುಂದೆ ತುಳುಕಿಸುವುದು, ಇದೇ ಅವರ ಆಹ್ನೀಕ!

ಹಾಗೂ ಹೀಗೂ ನನ್ನ ಹೊಟ್ಟೆ ಪುಣ್ಯದಿಂದ ಗುಂಡೂನೂ ನಮ್ಮೂರು ಸ್ಕೂಲು ಮುಗಿಸಿ ಬೆಂಗಳೂರಿಗೆ ಹೋಗಿ ಅಲ್ಲೂನೂ ಕಷ್ಟಪಟ್ಟು ಓದಿ ಗಟ್ಟಿಗ ಅನ್ನಿಸಿಕೊಂಡ ಓ ಅಂತ ಬರೆದರೆ ಠೋ ಅಂತ ಕೂಡ ಓದುವುದಕ್ಕೆ ಬರದ ನನ್ನಂಥವಳ ಮಗನುಂದರೂ ಬಿ ಎ ಅಂತ ಬಂದ ಊರಿಗೆ! ಬಿ ಎ ಆದಾಗ ಮೆರವಣಿಗೆ ಮಾಡಿಸದೆ ಹೋದರೂ ಅವಕ್ಕೆ ಎರಡು ವರ್ಷದ ಹಿಂದೆ ವರ್ತಕರೆಲ್ಲ ಸೇರಿ ಅವನನ್ನ ಮೋಟಾರಿನಲ್ಲಿ ಕೂಡಿಸಿ ಪಟ್ಟಣ ಪ್ರವೇಶಮಾಡಿಸಿ ಮನೆ ಮುಂದೆಲ್ಲ ಮಂಗಳಾರತಿ ಎತ್ತಿದ್ದರು. ಊರಿನವರ ದೃಷ್ಟಿ ಬಡಿದು ಎಳ್ಳು ಹಾಕಿದರೆ ಸಿಡಿಯುವಷ್ಟು ಮೂರುದಿನ ಜ್ವರ ಇತ್ತು ಮಗು ಮೈಮೇಲೆ! 'ಅಮೀಲ್ದಾರರ ಮಗನನ್ನೂ ಅದೇ ನೋಟಾರಿನಲ್ಲಿ ಕೂರಿಸಿದ್ದರಿಂದ ಅರ್ಧ ದೃಷ್ಟಿ ಅವನ ಮುಖಕ್ಕೆ ಬಿತ್ತು ಆದ್ದರಿಂದ ಗುಂಡನ ಪ್ರಾಣ ಉಳಿಯಿತು' ಅಂತ ಹೇಳಿದವರು ಯಾರೋ! ಅದಕ್ಕೇ ನಾನು ಹೇಳಿಬಿಟ್ಟೆ ಆಗ ಖಡಾಖಂಡಿತವಾಗಿ, ಬಿ ಎ ಅಂತ ನೀವು ಬ್ಯಾಂಡುಗೀಂಡು ತರಿಸುವುದಕ್ಕೆ ಹೋಗಬೇಡಿ, ಗಾಡಿಯಲ್ಲಿ ಕೂರಿಸಿ ಮೆರೆದರೆ ಅವನಿಗೆ ತಲೆ ತಿರುಗುತ್ತೆ, ಅಂತ ಹೇಳಿಬಿಡಿ, ಯಾರಾದರೂ ವರ್ತಕರು ಆ ವಾರ್ತೆ ಎತ್ತಿದರೂನೂ, ಅಂದೆ

ಗಂಗೂ ಮದುವೆ ಅವನು ಬೆಂಗಳೂರಲ್ಲಿ ಓದುತ್ತಿದ್ದಾಗಲೇ ನಡೆಯಿತು ಅದರ ಕಥೆಯನ್ನ ಒಂದು ಸಪ್ತಾಹ ಮಾಡಬಹುದು ಆದರೆ, ನಿಮಗೆ ಬೇಕಾದದ್ದು ಗುಂಡು ವಿಷಯ ತಾನೆ? ಗಂಗು ಗಂಡ ಕೋಪಿಸಿಕೊಂಡು ಹೋಗಿ ಎದುರು ಮನೆ ಹುಲ್ಲಿನಮೆದೆಯಲ್ಲಿ ಅವಿತುಕೊಂಡದ್ದು, ಅವನ ತಾಯಿ ಎರವಲು ತಂದಿದ್ದ ಸರವನ್ನ ಅವಳ ಮಗಳೇ ಕದ್ದದ್ದು, ಇನ್ನೆಲ್ಲ ಈಗ ಯಾಕೆ .. ಗುಂಡು ಮದುವೆ ತಾನೆ ನಿಮಗೆ ಮುಖ್ಯ? ನೀವು ಬರೆಯುವುದು 'ಗುಂಡಾಯಣ' ತಾನೆ? . ರೇಗಬೇಡಿ, ಏನೋ ನೀವು ನನ್ನ ಮಗನ ಹಾಗೆ! ಅಂದರೆ, ಸೊಸೆ ಬರುವುದಕ್ಕೆ ಮೊದಲಿನ ಮಗನ ಹಾಗೆ! ಆದ್ದರಿಂದ ಹಾಗೆ ತಮಾಷೆ ಮಾಡಿದೆ, ಅಷ್ಟೆ

ಗುಂಡ ಬೆಂಗಳೂರಲ್ಲಿ ವಾರದ ಮನೆಗಳಲ್ಲಿ ಊಟಮಾಡಿಕೊಂಡು ಬಿ-ಎ.ಗೆ ಅಂತ ಕಷ್ಟಪಡುತ್ತಿದ್ದಾಗಲೇ ಅವನ ಜಾತಕಕ್ಕಾಗಿ ಜಾತ್ರೆಗೆ ಬಂದ ಹಾಗೆ ಜನ ಬರುವುದಕ್ಕೆ ಪ್ರಾರಂಭ, ಇಲ್ಲಿಗೆ. ನಾನೆಷ್ಟೋ ಹೇಳಿದೆ ಇವರಿಗೆ. 'ತಾಯಿ ಕೇಳಿ ಮಗಳನ್ನ ಕೊಡು ಅಂತ ಗಾದೆ ಇದೆ ಗುರುತು ಪರಿಚಯ ಚೆನ್ನಾಗಿದ್ದ

ಕಡೆ ಗಂಗೂನ ಕೊಟ್ಟರೂಕೊಡ ಅವಳ ಮದುವೆ ಅಷ್ಟು ಅವಲಕ್ಷಣವಾಯಿತು ಪ್ರಾಂವಕ್ಕೆ ಈ ಮನೆಗೆ ಬರುವ ಹುಡುಗಿ 'ನನ್ನ' ಹದ್ದು ಬಸ್ತಿನಲ್ಲಿರ ಬೇಕಾದದ್ದು, 'ನನ್ನನ್ನೂ' ಒಂದು ಮಾತು ಕೇಳ್ಲಿ,' ಅಂದೆ 'ನಮಗೆ ಶ್ರೀಮಂತರೂ ಬೇಡ ಅಧಿಕಾರಿಗಳೂ ಬೇಡ ಅಂದೆ ಹಾಳು ಗುಡಿಸುವುದು, ಹಾಲು ಕರೆಯುವುದು, ಅಕ್ಕಿತೊಳೆಯುವುದು, ಹಪ್ಪಳಮಾಡುವುದು, ಇದನ್ನೆಲ್ಲ ಆಫೀಸ್ ಜವಾನರೇ ಮಾಡುವ ಮನೆಗಳಿಂದ ಹುಡುಗಿಯರನ್ನ ತಂದರ ನನಗೇನು ಲಾಭ,' ಅಂತ ಕೇಳಿದೆ 'ನಿನಗೇಥ ಲಾಭನಿಗಬೇಕು,' ಅಂತ ಅತ್ತೆ ಅವರ ಮಾತಿಗೇನೇ ಬಣ್ಣಕೂಡಿಸಿ ನಕ್ಕರು

ಕಡಗೂ ಅಮೀಲ್ದಾರಿ ಹುಡುಗಿ ಅಂತಲೇ ನಿಷ್ಕರ್ಷೆಮಾಡಿದರು 'ಅದನ್ನ ನೋಡಿಕೊಂಡು ಬಾರೋ ಒಂದು ಸಲ, ನಿನಗೆ ಒಪ್ಪಿಗೆಯಾದರ ಮಾಡಿಕೊ ಇಲ್ಲದೆ ಇದ್ದರೆ ಒಲ್ಲೆ, ಅನ್ನೊ' ಅಂತ ಗಂಡನಿಗೆ ಹೇಳಿದೆ ಅವಕ್ಕವರು ನಾನು ನಿನ್ನನ್ನ ನೋಡಿ ಒಪ್ಪದೆ ಮಾಡಿಕೊಳ್ಳಲಿಲ್ಲವೆ! ಎಲ್ಲಿ ತಾನಾಗಿಯೇ ತಣ್ಣಗಾಗುತ್ತ ಅಂದರು ಹೋಗಿದ್ದರ ಚೆನ್ನಾಗಿತ್ತು ಅಂತೂ ಈಗಲೂ ಅನ್ನಿಸುತ್ತಿದೆ, ಗಂಡನಿಗೆ ಕೇಳಿ ಬೇಕಾದರೆ! ಆದರೆ, ಆಗ, ದೇವರು ಮಾಡಿದ ಹಾಗಿರಲಿ, ಅಂದು ಬಿಟ್ಟೆ

ದೊಡ್ಡ ಸಂಬಂಧ, ಒಬ್ಬನೇ ಒಬ್ಬಮಗ, ವಿಧುರಾಶ್ವತ್ಥದಲ್ಲಿ ಮದುವೆ! ನಾಲ್ಕು ದಿವಸ ಮುಂಚೆ ಬರಬೇಕು ಅಂತ ಎಂಟು ಕಡೆ ಕಾಗದ ಹಾರಾಡಿತು ನನ್ನ ಐದು ತಂಗಿಯರು ಇಬ್ಬರು ತಮ್ಮಂದಿರು ಅವರ ಗಂಡ ಹೆಂಡತಿಯರು ಮಕ್ಕಳು ಮರಿ, ನಮ್ಮಪ್ಪ ಮೂರು ಬಸ್ಸು ತುಂಬ ನನ್ನವರು ಇನ್ನು ಇವರ ಕಡೆಯವರು ಬೇರೆ ದೂರದ ಅತ್ತೆಯಂತೆ ಒಬ್ಬರು ಅಜ್ಜಂಪುರದ ಹತ್ತಿರದಿಂದ, ಚಿಕ್ಕಪ್ಪನಾಗಬೇಕಂತೆ ಒಬ್ಬರು ಶಾಲ್ಯದ ಹತ್ತಿರದಿಂದ, ಹೀಗೆ ಹರಕಲು ಮುರುಕಲು ಇವರದೂ ಒಂದು ಬಸ್ಸು ಗಂಗು ಗಂಡ ಬರಲಿಲ್ಲ; ತಮ್ಮನನ್ನ ಕಳುಹಿಸಿದ್ದ, ಗಂಗೂನೂ ಬರಲಿಲ್ಲ ಅವಳ ಮಗಳು, ಪುಟ್ಟು, ಎಂಥಾ ಹುಡುಗಿ ಅಂತೀರಿ, ಪರೀಕ್ಷೆ ಮಾಡದೇನೆ ಅವಳನ್ನ 'ಜಾಣೆ' ಅನ್ನಬಹುದು ಅಂತ ಹೇಳಿದರಂತೆ ಯಾರೋ ದೊಡ್ಡ ಮನುಷ್ಯರು, ಬೆಂಗಳೂರಿಂದ ಬಂದವರು, ಗಂಗೂ ಊರಲ್ಲಿ ಕರ್ಣಾಟಕರೆಲ್ಲ ಸೇರಿಕೊಂಡು ಒಂದು ಸಂಘ ಮಾಡಿದಾಗ. . ....ನಾವೂ ಕರ್ಣಾಟಕರೇ, ಗೊತ್ತಿದೆ ತಾನೆ!

ಏನೋ ಹೇಳುತ್ತಿದ್ದವಳು ಎಲ್ಲಿಗೂ ಮಾತು ತಿರುಗಿಬಿಟ್ಟಿತಲ್ಲಾ!
. ಹುಂ ಬೀಗರು ನಾವು ಇಷ್ಟು ಜನ ಹೋಗಿ ಛತ್ರದಲ್ಲಿ ಇಳಿದು ಉಪ್ಪಿಟ್ಟು ಕಾಫಿ ಕಳಿಸಿ ಅಂತ ಕೂಗಿದಾಗ ಅಮಲ್ದಾರರ ಎದೆ ಒಡೆದುಹೋಯಿತು ಅವತ್ತು ಬೆಳಿಗ್ಗೆ ತಾನೆ ಅವರಿಗೆ ಸಸ್ಪೆಂಡ್ ಬೇರೆ ಆಗಿತ್ತಂತ ನಾವು ಕಂಡೇವೆಯೇ ಅವನ್ನ? ಆ ಬೀಗಿತಿಯೋ ಹೊಸ ಸೀರೆ ಉಟ್ಕೊಂಡು ಬರಬರಬರ ಅಂತ ಬರುವಳು "ಸುಮ್ಮನಿರಿ ಅಂದ್ರೆ! ಕೂಗಬೇಡಿ ಅಂದ್ರೆ! ಅವರಿಗೆ ಹೃದಯ ಗಟ್ಟಿ ಇಲ್ಲವಂತೆ! ಈಗ ಇದು ಬೇರೆ ಆಗಿಹೋಯ್ತು ಊಟಕ್ಕೆ ಕೊಂಚ ತಡವಾದರೂ ರೇಗಾಡಬೇಡಿ, ಅಂದ್ರೆ ಅನ್ನುವಳು" ಇದೆಲ್ಲ ಒಳ್ಳೇ ಆಟ! ನೋಯುವ ಮದದಲ್ಲಿ ಕೊಬ್ಬು ಜಾಸ್ತಿ ಬೆಳೆಸಿದ್ದಕ್ಕೆ ಸಸ್ಪೆಂಡ್ ಮಾಡಿದಾರ ಅಂಥಾವರಿಗೆ ಹೃದಯವೇ ಇರುವುದಿಲ್ಲವಲ್ಲಾ!" ಅಂತ ನನ್ನ ತಮ್ಮಂದಿರ ತರ್ಕ ಅಂತು ಇಂತು ಅರೆಹೊಟ್ಟೆಯಲ್ಲೇ ಮದುವೇನೂ ಮುಗಿದುಹೋಯಿತು ಗಂಡನ ಮುಖ ಉದ್ದಕ್ಕೂ ಅರಳಲೇ ಇಲ್ಲ ಆ ಹುಡುಗಿಯೋ ನಮಗೇಕೆ ಅದೆಲ್ಲ? ನಾನೇದರೂ ಅಂದರೆ, ಅತ್ತೆಗೂ ಸೊಸೆಗೂ ಯಾವತ್ತೂ ಹೀಗೆಯೆ, ಅಂತೀರಾ ನೀವು ವರಪೂಜೆ ದಿನವೇ ಹೇಳಿದೆ ನಾನು, ಈ ಹುಡುಗಿ ಹೀಗಿದೆಯಲ್ಲಾ, ನಾಳೆ ಇವಳಿಗೆ ನಾಲ್ಕು ಹೆಣ್ಣುಮಕ್ಕಳಾದರೆ ಗಂಡ ಎಲ್ಲಿಂದ ಗಂಡು ತಂದಾನು? ಬರ ಬರುತ್ತಾ ಕಾಲ ನಾಜೋಕಾಗುತ್ತಿದೆ ಸಿನಿಮಾ ಗಿನಿಮಾ ಓದು ಗಂಡುಹುಡುಗರೆಲ್ಲ ನಕ್ಷತ್ರಗಳಿಗೇನೇ ಕೈ ನೀಡುತ್ತಿದಾರೆ, ಅಂದೆ ನಮ್ಮತ್ತೆಗೆ 'ತಾನು ಕಂಡ ಕುದುರೆಗೆ ನಾಲ್ಕೇ ಕೊಂಬಿತ್ತು' ಎಂಬ ಹಠಸ್ವಾರ್ಥತನ ಆ ಮುದುಗೀನ ಗೊತ್ತುಮಾಡಿದ್ದ ಆಕೆ! ನಾನು ಬಾಯಿಗೆ ಕುಕ್ಕ ಕಟ್ಟಿಕೊಂಡೆ

ಮುಖ ಸೊಟ್ಟ ಅಂತ ನಾನು ಬೊಡಕೊಂಡರೆ ಅದರ ಹಣೆಬರಹವೂ ಸೊಟ್ಟು ಅಂತ ಆಮೇಲೆ ತಿಳೀತು ಗಂಡನಿಗೆ ಇದೇ ಊರಲ್ಲಿ ಕೆಲಸ ಸಿಕ್ಕಿತಲ್ಲಾ ಅಂತ ನಾವು ಅವಳನ್ನ ಈ ಮನೆಯೊಳಕ್ಕೆ ತಂದರೆ, ಅವಳ ಜಾತಕ ನನ್ನ ಹಣೆಗೆ ಬಡಿದು ಇಲ್ಲಿದ್ದ ಕುಂಕುಮವನ್ನೇ ಅಳಿಸಿ ಬಿಟ್ಟಿತು ಅದರ ವಿಷಯ ಯಾಕ ಈಗ? ಗುಂಡು, ಪಾಪ ಒಂದೇ ಕೈ ಸಂಪಾದನೆ, ಎಡಗೈ ತೋರಿಸಿ ಲಂಚ ತಂದು ಅವಲಕ್ಷಣ ಅನ್ನಿಸಿಕೊಳ್ಳುವ ಸ್ವಭಾವವಲ್ಲ ಅವನದು "ಸತ್ಯ ಅನ್ನೋದೆ ಅಮ್ಮ ನನ್ನ ದೇವರು" ಅಂತಾನೆ, ಆಗಾಗ್ಗೆ, ಬೆಂಗಳೂರಲ್ಲಿ ಯಾರೋ ಒಬ್ಬರು ಸ್ವಾಮಿಗಳು ಅವನ ಎಳೆ ಮನಸ್ಸನ್ನ ಎಳೆದು ಹಾಗೆ ಉಪದೇಶ ಮಾಡಿಬಿಟ್ಟದಾರೆ

ನಾವೆಷ್ಟು ಹೇಳಿದರೂ ಅವನು ಕೊಸರುಅಂತ ಕೈಕೆಸರು ಮಾಡಿಕೊಳ್ಳೋದಿಲ್ಲ ಅವನ ರಾಣಿಯೋ ಅಮಿಲ್‌ದಾರ್ ಅಂದರೆ ತಾಲೋಕಿನ ತಂದೆ ಅಲ್ಲವೆ,-ಇಡಿ ತಾಲೋಕು ನನ್ನದೇ ಎಂಬಷ್ಟು ಧೋರಣೆ ಅವಳಿಗೆ ಅವರಪ್ಪ ತನ್ನ ಗುಮಾಸ್ತೆಯನ್ನ ಹೇಗೆಕಾಣುತ್ತಿದ್ದರೋ ಹಾಗೆ ಕಾಣುತ್ತಾಳೆ ಅವಳು ತನ್ನ ಗಂಡನನ್ನ ಅವನೇ ಅಷ್ಟು ಆಳಕ್ಕ ಇಳಿದ ಮೇಲೆ ನಾನು ಪಾತಾಳ, ನಮ್ಮತ್ತೆ ರಸಾತಳ ತಾನೆ! ನಮ್ಮತ್ತೆಗೂ ಬುದ್ಧಿ ಇಲ್ಲ ಇಬ್ಬರ ತಲೆಯೂ ನುಣ್ಣಗಾದುವು! ಇಬ್ಬರೂ ಸೇರಿ ಒಬ್ಬಳ ಯೋಗಕ್ಷೇಮ ವಿಚಾರಿಸುತ್ತಾ ಸುಖವಾಗಿರೋಣ ಅಂತಿಲ್ಲ ನನ್ನನ್ನ ಇಕ್ಕಳಕ್ಕೆ ಸಿಕ್ಕಿಸಿ ತಾನು ಮಾತ್ರ ಹಳೇ ಸೊಸೆ ಹೊಸ ಸೊಸೆ ಇಬ್ಬರಿಗೂ ಅತ್ತೆಯಾಗಬೇಕೆಂದು ಪಿತೂರಿ ಹೂಡಿದರು ಸದ್ಯಃ ಅವರ ಕಿವಿ ತೂತು ಬಿದ್ದದ್ದು ನನಗನುಕೂಲವಾಯಿತು ನನ್ನ ಮೇಲೆ ಯಾವಾಗ ರೇಗಿಬಿದ್ದರೂವೇ ಸೊಸೆ ಕಡೆ ಕೈ ತೋರಿಸಿ “ ಎಲ್ಲ ಇದರಿಂದ! ಎಷ್ಟು ಹೇಳಿದರೂ ಇದಕ್ಕೆ ಬುದ್ಧಿ ಬರುವುದಿಲ್ಲ ಗಂಡನಿಗೆ ಹೇಳಿ, ನಾಲ್ಕುಏಟು ಕೊಡಿಸಿದರೆ ಸರಿಹೋಗಬಹುದು “ ಅಂತ ಅಂಗ ಚೇಷ್ಟೆಮಾಡಿ ಬಿಡುತ್ತೇನೆ ಸರಿ! ಗಂಡ ಮನೆಗೆ ಬರುತ್ತಲೂ ಅವನ ಹತ್ತಿರ ಅಪೀಲು ದಾಖಲಾಗುತ್ತೆ ಅವನು ಗಾಬರಿಪಡಿಸುತ್ತಾನೋ ತೋರ್ಪಡಿಸುತ್ತಾನೋ, ಶಿವನೇ ಬಲ್ಲ!

ಗುಂಡ ಕೂಡ ಅವಳಕಡೇನೆ ನಾವೇನಾದರೂ ದೂರು ಹೇಳಿದರೆ ಬಲಿ ಹಾಕಿಬಿಡುತ್ತೇನೆ ಕೊಂದು ಬಿಡುತ್ತೇನೆ ತವರು ಮನೆಗೆ ಕಳುಹಿಸಿಬಿಡುತ್ತೇನೆ ಅಂತ ಆಕಾರ ತಲೆಗೆ ತಾಕುವಹಾಗೆ ಎಗರಾಡುತ್ತಾನೆ ಆದರೆ, ಅವಳ ಜೀವ ಬಲು ಗಟ್ಟಿ! ಅವಳ ತವರು ಮನೆಯೋ? ಮದುವೆ ದಿನ ಬಂದ ಸಸ್ಪೆಂಡು ಖಾಯಂ ಆಯಿತು. ಅಮಿಲ್ದಾರರೆಲ್ಲೋ ಪಂಡರಾಪುರಕ್ಕೆ ಪರಾರಿಯಂತೆ ಊರಲ್ಲೆಲ್ಲ ಸಾಲಗಾರರ ಕಾಟ ಕೊಯಿಲಾರ್ ಬ್ಯಾಂಕಿನಲ್ಲಿತ್ತು ನಿಮ್ಮ ಹಣ ಅಂದರೆ ಸಾಹುಕಾರರು ಸುಮ್ಮನಿರುತ್ತಾರೆಯೋ? ಇವಳ ತಾಯಿ ಇಬ್ಬರು ಚಿಕ್ಕ ಮಕ್ಕಳು ಎಲ್ಲರೂವೆ ಬೂದೀಹಾಳಿಗೆ ಹೋದರಂತೆ, ಇವಳು ಹೇಳಿ ಅಳೋಳು ಹೊಸವರಲ್ಲಿ. ಹಾಗೆ ಅಂತ ಅಲ್ಲಿ ಯಾರೋ ಇವಳ ತಂದೆಯ ಸೋದರ ಮಾವ ಶಾನುಭೋಗರಂತೆ. ಆದರೆ, ಅದೆಲ್ಲ ಈಗ ಯಾಕೆ ಅಂತೀನಿ! ಅಂತು ಇವಳನ್ನ ಹೋಗಿ ಬಿಟ್ಟುಬರುತ್ತೀಯಾ ಅಂತ ಹೇಳುವಹಾಗಿಲ್ಲ ನಾವು.

ಗುಂಡನಿಗೆ ಒಂದು ಮಗುವಾಗಿದೆ! ಓ! ಅದರ ಕಥೆ ಬಹು ಸ್ವಾರಸ್ಯ. ಅದನ್ನ ಹೇಳಲೇ ಇಲ್ಲವೆ ನಾನು ನಿಮಗೆ. ಹೇಳಿದೇನೆ ಅಂತಿದ್ದೆ. ಮುಟ್ಟು

ನಿಂತಾಗ ಇವಳ ಅಡಾವುಡಿ ಏನು! ಓ ಹೊ ಹೊ! ಗಂಡನ ಪರದಾಟವೇನು? ಅವಳಿಗೆ ವಾಕರಿಕೆಯಾದರೆ ಅದಕ್ಕೊಂದು ಪಿಲ್ಲು? ತಲೆನೋವಾದರೆ ಅದಕ್ಕೊಂದು ಪಿಲ್ಲು! ಗುಳಿಗೆಯ ಹಾಗಿರೋದು ಹಾಳು, ಅದಕ್ಕೆ ಪಿಲ್ಲು ಪಿಲ್ಲು ಅಂತ ಅನ್ನುವನು ಗುಂಡ; ಆ ಇಂಗ್ಲೀಷ್ ಡಾಕ್ಟರ್ ಕೊಡುತ್ತಿದ್ದ, ರೂಪಾಯಿಗೆ ನಾಲ್ಕು ರೂಪಾಯಿಗೆ ಆರು ಅಂತ. ಆ ಸೊಟ್ಟ ಮೋರೆಯ ಸೊಸೆಗೆ ಎಷ್ಟೊಂದು ಶುಶ್ರೂಷೆ! ನಾವೆಲ್ಲ ಬಸುರಾಗದೆ ಹೆತ್ತೆವೆ? ನಮಗಿವರ ಅರಿವೇ ಇಲ್ಲವೇ? ಗುಳಿಗೆ ನುಂಗಿದರೆ ಒಳಗಿನ ಮಗು ಅದನ್ನು ತಡೆದೀತೆ? ಹೊಟ್ಟೆಯೊಳಗೇನಾಗುತ್ತೆ ಅನ್ನುವುದನ್ನ ಗಂಡಸಾದ ಗಂಡನಿಗಿಂತ ಅತ್ತೆ ಅಜ್ಜಿ ಅಂತ ಮನೆಯಲ್ಲಿ ಮುದುರಿಕೊಂಡಿರುವ ನಮಗೆ ಹೇಳಬಾರದೆ? ದಿನಕ್ಕೊಂದು ಕಾಗದ ಅವಳ ತಾಯಿಂದ! ಅದು ಹೇಗಿದೆ? ಇದು ಹೇಗಿದೆ? ಬೊಟ್ಟು! ಲೊಸಕು ಅಂತ! ಯಾವತ್ತು ಕಳುಹಿಸುತ್ತೀರಿ? ಇಲ್ಲೇ ಬರಲಿ? ಇಲ್ಲಿ ಹಸುವಿನ ಹಾಲು ಅಗ್ಗ, ಬೆಣ್ಣೆ ಅಗ್ಗ? ಏನು, ಅವಳನ್ನ ಗೋಗರ್ಭದಲ್ಲೇ ಇಟ್ಟು ಸಾಕುತ್ತಿದ್ದರೋ ಏನೋ? ಕಡೇಗೊಂದು ದಿನ ಕಾಗದ ಬಂತು. ಪುರಂದರ ವಿಟ್ಠಲ, ಅಂತ! ಬೂದಿಹಾಳೇ ಗತಿ ಅಂತ!

ಸರಿ! ಅವಳಿಗೆ ಸದ್ಯ ಐವತ್ತು ರೂಪಾಯೇ ಆಸರೆ! ನಾನೇ ಬಾಣಂತನಕ್ಕೆ ಅಂತ ನಿರ್ಧಾರವಾಯಿತು. ಹತ್ತು ಹೆರದೆ ಇದ್ದರೂ ನಾನೂ ಒಂದು ಮುತ್ತು ಹೆತ್ತವಳಲ್ಲವೆ? ಬಳೆ ತೊಡಿಸುವುದು, ಮಡಿಲು ತುಂಬುವುದು, ಹಸೆ ಮೇಲೆ ಕೂರಿಸುವುದು, ಎಲ್ಲದಕ್ಕೂ ನಾನೇ! ನಾನೇ ಅಂದರೆ, ನನ್ನ ಕೈಲಿ ಮಾಡಿಸಿಕೊಳ್ಳಕೂಡದು ಅಂತ ಅವಳು ನನ್ನ ಗಂಡನನ್ನೇ ನುಂಗಿಬಿಟ್ಟಳಲ್ಲಾ ಎದುರು ಮನೆ ಎಂಕಮ್ಮನವರನ್ನು ಕರಸಿದೆ, ಅವರ ಗಂಡನಿಗೆ ಪಾಪ ಪಾರ್ಶ್ವವಾಯು ಅತ್ತಲಾಗೆ ಹೋಗೋಣವೋ, ಇತ್ತಲಾಗೇ ಇರೋಣವೋ, ಇಲ್ಲ ಹೊಸಲಲ್ಲೇ ಬಿದ್ದಿರೋಣವೋ, ಅಂತ ಯಾವುದೋ ತ್ರಿಶಂಕೆಯಲ್ಲಿ ಬಿದ್ದಿದಾರೆ. ಆದರೂ ಅರಶಿನ ಕುಂಕುಮಕ್ಕೆ ಅವಕಾಶ ಇದೆಯಲ್ಲಾ ಅವರು ಬಂದು ಆರತಿ ಎತ್ತಿ ಅಕ್ಷತೆ ಹಾಕಿಬಿಟ್ಟು ಹೋಗುವರು ನೀನು ಮಣ್ಣು ತಿನ್ನುತ್ತೀಯಾ ಅಂತ ನಾನು ಅವಳನ್ನ ಬೈಯುತ್ತಾ ಇದ್ದದ್ದಕ್ಕೆ ಸರಿಯಾಗಿ ಅವಳು ಮಣ್ಣು ತಿಂದಳು, ಬೂದಿ ತಿಂದಳು, ಯಾವುದು ತಿನ್ನಕೂಡದು ಅಂತ ಡಾಕ್ಟರ್ ಹೇಳುತ್ತಾರೋ ಅದರ ಮೇಲೆಯೇ ಅವಳಿಗೆ ಚಪಲ. ಇಷ್ಟು ಅಪಥ್ಯಮಾಡಿ

ವರೂ ಕೂಡ, ಅವಳು ಹೆಣ್ಣು ಹೆರಲಿಲ್ಲ ನನ್ನ ಹಸ್ತಗುಣ ಚೆನ್ನಾಗಿತ್ತು. ಗಂಡುಕೂಸನ್ನೇ ಹೆತ್ತಳು ಮಗುವೂ, ಗಂಡನ ಹಾಗಿತ್ತು, ತದ್ವತ್, ಅದೇ ಹಣೆ, ಅದೇ ಮೂಗು ಬಾಲು ಅಂತ ಹೆಸರು, ಸ್ಕೂಲಿಗೆ ಹೋಗಿದೆ ಹುಂ ನಾಲ್ಕು ವರ್ಷದ ಮಕ್ಕಳಿಗೂ ಕೂಡ ಈಗ ಸ್ಕೂಲಾಗಿದೆಯಲ್ಲ, ನಮ್ಮೂರಲ್ಲಿ ಕಾಸಿನ ತುತ್ತೂರಿ ತೆಗಿಸಿಕೊಂಡರೆ ಎಣ್ಣೆ ಬೇಗ ಹೋಗುತ್ತೆ, ಕನ್ನಡದ ಕೂಸುಮರಿ ಅಣ್ಣನ ಬೆನ್ನ ಮೇಲಿಂದ ಕೆಳಗೆ ಇಳಿಯಲೇ ಕೂಡದಂತೆ, ದೊಡ್ಡವರ ಬಾಯಿಗೆ ಹಾಗಲಕಾಯೇ ರುಚಿಯಂತೆ, ಸಂತೆಗೆಹೋಗುವುದಕ್ಕಿಂತ ಕುಣಿಯುವುದೇ ವಾಸಿಯಂತೆ ಅಲ್ಲಿ ಹೇಳಿಕೊಡುತ್ತಾರೆ ಬಾಳೆಎಲೆ ಹರಡು ಅಂತ ಜ್ಞಾಪಕವಿಟ್ಟುಕೊಂಡರೆ, ಹುಡುಗರಿಗೆ ಒಂದು ಎರಡು ಅನ್ನುವುದು ಸುಲಭವಾಗಿ ನೆನಪಿಗೆ ಬರುತ್ತವಂತೆ ಒಂಬತ್ತು ಗಂಟೆ ಹತ್ತು ನಿಮಿಷಕ್ಕೆ ಸಂಪತ್ತು ತೋಟಕ್ಕೆ ಹೋದ," ಅಂತ ಹಾಡುತ್ತವೆ ಏನೋ ಒಂದು ವಿಪರೀತ ನಮೂನೆ ಸ್ಕೂಲು! 'ಶಿಶುವಿಹಾರ ಅಂತಾರ ಅದಕ್ಕೆ' ಅಲ್ಲಿಗೆ ಹೋಗಿದೆ ಮಗು!

ಆಂಜನೇಯನ ದೇವಸ್ಥಾನದಿಂದ ಬರುವಹಾಗಿದೆ, ಅತ್ತೆ ಇನ್ನೊಂದು ದಿನ ಬನ್ನಿ ಬೇಕು ಬೇಕಾದದ್ದನ್ನೆಲ್ಲ ವಿವರಿಸುತ್ತೇನೆ ಹಾಳೆ ಹಾಳೆ ತುಂಬಿಕೊಳ್ಳಿ ಇನ್ನು ನಾನು ಆಕೆ ಗುಂಪೆ ನನ್ನ ಸೊಸೆಯಂತ ಕಡೆ—

## ತಾಯಿ ಸೀತಮ್ಮನವರ ಪ್ರಸಾರ ಮುಗಿಯಿತು.

---

ವರುಷ ಹೋಯಿತು ವರುಷ ಬಂದಿತು
ಹರುಷ ಬಾರದು! ಬಾರದು!

—ವಿ. ಸೀ.

ಯೌವನದಿ ಎನ್ನೆದೆಯ ಮುಂಗುಳುಗಳು ಅರಳಿರಲು
ಅದಕೆ ಪರಿಮಳವಾಗಿ ನೀ ಬಂದೆ, ಕಂದ!

—ಕವಿ ರವೀಂದ್ರ

# ೫: ಸ್ನೇಹಪ್ರಭಾ

ಗುಂಡಪ್ಪನನ್ನ ನಾನು ಎರಡನೆಯ ಸಲ ಕಂಡದ್ದು ಕಬ್ಬನ್ ಸಾಹೇಬರ ಕುದುರೆಯ ಹತ್ತಿರ. ಕುದುರೆ ಮೇಲೆ ಸಾಹೇಬರೂ ಕೂಡ ತೂಕವಾಗಿ ಕೂತಿದ್ದರು ಅನ್ನಿ! (ಭೂತಕಾಲ ಯಾಕೆ ಭವಿಷ್ಯಕಾಲವೇ ಆಗಬಹುದು ಆ ಕ್ರಿಯಾಪದಕ್ಕೆ) ನೀವೂ ಹೋಗಿ ಸಲಾಮು ಮಾಡಬಹುದು ಅವರಿಗೆ, ಅದುವರಿಗೂ ಕೂತಿರುತ್ತಾರೆ, ನಿಮ್ಮ ಮೊಮ್ಮಕ್ಕಳೂ ಒಂದು ಸಲಾಮುಮಾಡಲಿ ಅಂತ ಅಲ್ಲೇ ಅಲುಗಾಡದೆ ಮಂಡಿಸಿರುತ್ತಾರೆ ಕುದುರೆಗೂ ಕೂಡ ಕಾಲು ಸೋಲುವುದಿಲ್ಲ ..ಅವರು ಯಾವುದೋ ಮಾಡಬಾರದ ತಪ್ಪುಮಾಡಿದರಂತೆ, ಅದಕ್ಕೆ ಅವರನ್ನ ಅಚಂದ್ರಾರ್ಕ ಬಿಸಿಲು ಮಳೆ ಒಡಿಯುವಹಾಗೆ, ಕೆಂಚಗಿದ್ದವರನ್ನ ಕಪ್ಪುಮಾಡಿ, ಕಾಗೆ ಗೂಬೆ ಕೂರುವಹಾಗೆ ಬಟ್ಟ ಬಯಲಿನಲ್ಲಿ ನಿಲ್ಲಿಸಿ ಅವಮಾನಮಾಡಿದಾರೆ ಅಂತ ಯಾರೋ ಕೆಲವರು ಹೇಳಿಕೊಂಡು ಹೋಗುತ್ತಿದ್ದದ್ದು ಗುಂಡಪ್ಪನ ಕಿವಿಗೆ ಬಿತ್ತಂತೆ! ಅದಕ್ಕೇ ಅವನು ಒಬ್ಬನೇ ನಕ್ಕಿದ್ನಂತೆ, ನನಗೆ ಹೇಳಿದ, ನಾನು 'ಯಾಕ' ಅಂತ ಕೇಳಿಕೊಂಡು ಅವನ ಹತ್ತಿರಕ್ಕೆ ಹೋದಾಗ

“ಅಲ್ಲಾ! ಚಂದೂ! ಕಟ್ಟಿದ್ದೇ ಒಂದು ಕಥೆ ಆದರೆ, ಹುಟ್ಟಿದ್ದೇ ನೂರು ಕಥೆ ಆಯಿತಲ್ಲಾ” ಅಂತ ಅವನು ಆ ಶಿಲಾ ಪ್ರತಿಮೆಯ ಶಿರೋಲಿಖಿತಕ್ಕಾಗಿ ಮರುಗಿದ ಕಲ್ಲಿಗೂ ಕರಗುವ ಅವನ ಅಂತಃಕರಣಕ್ಕೆ ನಾನು ಅಲ್ಲೇ ಅಭಿಮಾನಿಯಾದೆ!

ಆ ಮೇಲೆ ನಾವಿಬ್ಬರೂ ಖಾರದ ಕಡಲೆಕಾಯಿ ತಿನ್ನುತ್ತ ಬೆಂಗಳೂರಿನ ಭೂಪಟವನ್ನ ನೆಲದಮೇಲೆ ಕೆರೆದಿರಿಸಿಕೊಂಡು ವಾರದಮನೆಗಳ ಶಿಕಾರಿಗಾಗಿ ಎಲ್ಲೆಲ್ಲಿಗೆ ಬಲೆ ಬೀಸುವುದೆಂದು ಚರ್ಚಿಸಿದೆವು ಆಗಲೇ ನಾನು ಗುಂಡಪ್ಪನನ್ನ ಅವತ್ತು ಬೆಳಗ್ಗೆ ಹಾಸ್ಟಲಲ್ಲಿ ನೋಡಿದ್ದೆ ಅವನ ಸ್ನೇಹಿತನೊಬ್ಬ ನನ್ನನ್ನ ತೋರಿಸಿ “ನೋಡು ಗುಂಡು! ಇವನೇ ಚಂದು! ನಾನು ಹೇಳುತ್ತಿದ್ದೆನಲ್ಲಾ ಆ ಧಾಂಡಿಗ, ಇವನೂ ಅದೇ ಕೆಲಸದಲ್ಲಿ ತೊಡಗಿದಾನೆ ಜೋಡೆತ್ತಿನಗಾಡಿ, ಹೊಡೆಯಿರಿ” ಅಂದಿದ್ದ ಸಂಜೆ ಕುದುರೆ ಹತ್ತಿರ ಭೇಟಿಯಾಗೋಣ ಅಂತ ಇಬ್ಬರಿಗೂ ನಿಷ್ಕರ್ಷೆ ಆಗಿತ್ತು.

ಮಲ್ಲೇಶ್ವರದಲ್ಲಿ ಹುಲ್ಲೂ ಸಿಕ್ಕುವುದಿಲ್ಲ; ಬಸವನಗುಡಿ ವಾಸಿ. ಅಲ್ಲಿ ಹಸುವಿನಂಥ ಗೃಹಸ್ಥರನೇಕರಿದಾರೆ ಮುಂದೆ ಹೋದರೆ ಒದಿಯುವುದಿಲ್ಲ; ಹಿಂದೆ ಬಂದರೆ ಒದೆಯುವುದಿಲ್ಲ. ಸಾಕ್ಷಾತ್ ಪುಣ್ಯಕೋಟಿಗಳ, ಅಂತ ನನಗೆ ಒಬ್ಬ ಗೆಳೆಯ ಹೇಳಿದ್ದ ಅದನ್ನ ಅವನೂ ಒಪ್ಪಿದ ಅವರ ತಂದೆಯವರೂ ಅದೇ ಮಾತು ಹೇಳಿ ಕಳುಹಿಸಿದ್ದರಂತೆ, ಅಮೀಲ್ದಾರರ ಸಲಹೆ ಮೇರೆ! ಬಸವನ ಗುಡಿಯಲ್ಲಿ ಯಾವ ಯಾವ ಮನೆಗಳಿಗೆ ನುಗ್ಗುವುದು? "ಟು ಲೆಟ್" ಎಂಬ ಹೆಸರಿನ ಮಾಲೀಕರ ಮನೆಗಳಿಗೆ ಹೋಗಿ ಪ್ರಯೋಜನವಿಲ್ಲ, ಅಂತ ನಾನು ಒಂದು ಚಟಾಕಿ ಬಿಟ್ಟೆ "ನಾಯಿಗಳಿವೆ" ಅಂತ ಪ್ರಚಾರ ಮಾಡುವ ಮನೆಗಳಿಗೂ ಬೇಡ, ಅಂದ ಗುಂಡಪ್ಪ ನಾನೊಪ್ಪಲಿಲ್ಲ ನಾಯಿ ಗಳು ಬೀದಿಗಳಲ್ಲೂ ಇವೆ! ನಾವು ಬೀದಿಗಳಲ್ಲಿ ಓಡಾಡುವುದಿಲ್ಲವೆ, ಅಂದೆ ಅದಕ್ಕೆ ಗುಂಡಪ್ಪ, "ಹಾಗಲ್ಲ, ಚಂದು! ನಾಯಿ ಸಾಕುವವರ ಸ್ವಭಾವಕೂಡ ಬರಬರುತ್ತ ನಾಯಿಯ ಸ್ವಭಾವದಂತೆಯೇ ಮಾರ್ಪಾಡುತ್ತದೆ. ತಮ್ಮಲ್ಲಿ ಸ್ವಜಾತಿ ವೈರ ತುಂಬಿರುವುದರಿಂದಲೇ ಇಂಥವರು ನಾಯಿ ಸಾಕುವುದು. ಅಥವಾ ನಾಯಿ ಸಹವಾಸದಿಂದ ಇವರಲ್ಲೂ ಶುನಕತನ ಅಂಕುರಿಸುತ್ತದೆ ಅಂತ ಹೇಳಬಹುದು ಅವರ ಮಾನವಕುಲದ್ವೇಷ ನಿಧಾನವಾಗಿ ಅವರ ನಡೆನುಡಿ ಗಳಲ್ಲಿ ಕುಡಿಮೂಡಿ ಬಿಡುತ್ತದೆ ನಾವು ನಮಸ್ಕಾರ ಅಂದರೆ ಅವರು ಹಲ್ಲು ತೋರಿಸುತ್ತಾರೆ; ಅವರಿಗೆ ಮೇಲ್ಪಟ್ಟವರನ್ನು ಕಂಡರೆ ಬಾಲವಾಡಿಸುತ್ತಾರೆ. ಮೇಲಿನವರು ಬೈದರೂ ಕೂಡ ಅದನ್ನು ಕೊಡವಿ ಬಿಡುತ್ತಾರೆ ಹಣ ಅಂದರೆ ಅವರ ಕಿವಿ ನೆಟ್ಟಗಾಗುತ್ತದೆ ಕೈ ಕೆಳಗಿನವರನ್ನು ಕಂಡರೆ ಅವರು ಗರ್‌ಗುರ್ ಅಂತಾರೆ ಮಾತಿಗಿಂತ ಏನೋ ಯಾಕೊ ಹೋಗೊ ಅಂತ ಬೊಗಳುವುದೇ ರೂಢಿ. ಹುಚ್ಚು ಕಡಿಮೆಯಾದರೆ ಕಚ್ಚುವುದಕ್ಕೆ ಬರುತ್ತಾರೆ ಹೀಗಾಗಿ ನಾಯಿ ಗಳಿವೆ ಎಚ್ಚರಿಕೆ ಅಂತ ಬೋರ್ಡು ತೂಗುಹಾಕುವ ಬದಲಾಗಿ ಇವರು "ಯಜಮಾನ ಇದಾನೆ, ಎಚ್ಚರಿಕೆ" ಅಂತ ಮಾರ್ಪಾಡಿಸಿದರೆ ಸಮ, ಅಂದ. ನಾನು ಉದ್ದಕ್ಕೂ ಹೂಂಗುಟ್ಟುತ್ತಿದ್ದೆ. ಆಗಲೇ ಯಾರಿಗಾದರೂ ವಾರಕೊಡು ತ್ತಿದಾರೆ ಅಂತ ಗೊತ್ತಾದರೆ ಅಂಥ ದೀನದಯಾಳುಗಳಿಗೆ ನಮ್ಮಿಂದ ತೊಂದರೆ ಯಾಗಬಾರದು. ಗಂಡಸರೊಪ್ಪಿದರೂ ಕೂಡ ಕೂಡಲೇ ದಿನಗಳನ್ನು ಗೊತ್ತುಮಾಡಿ ಹೊರಟು ಬರಬಾರದು. ನೀವು ಒಳಗೆ ಹೋಗಿ ವಿಚಾರಿಸಿ

ಬಿಟ್ಟು ಬಂದು ಹೇಳಿ, ಸಾರ್! ಚಿಂತೆ ಇಲ್ಲ! ನಾವು ಇಲ್ಲೇ ಕೂತಿರುತ್ತೇವೆ! ಅಡುಗೆಮಾಡಿ ಬಡಿಸಬೇಕಾದವರು ಅವರು ಗೃಹಿಣಿ ಗೃಹಮುಚ್ಯತೆ, ಸಾರ್! ನಾವು ಬಂದಾಗ ಅವರು ಅಡುಗೆಮನೆ ಮುಚ್ಚಿಬಿಟ್ಟರೆ ಹೇಗೆ ಸಾರ್" ಅಂತ ವಿನಂತಿ ಮಾಡಿಕೊಳ್ಳಬೇಕು ಹೀಗೆ ಹಲವು ಷರತ್ತುಗಳನ್ನು ಮಾಡಿಕೊಂಡು ನಾವು ಬೇರೆಯಾದೆವು

ಮರುದಿನದಿಂದ ನಾವು ಬಸವನ ಗುಡಿಯ ಬಂಗಲೆಗಳನ್ನೆಲ್ಲ ಒಂದೊಂದಾಗಿ ಸೋಸಿದೆವು, ನಮಗಾದ ವಿಚಿತ್ರ ಅನುಭವಗಳನ್ನು ವಿವರಿಸುತ್ತಾ ಹೋದರೆ ನೀವು ಬೇಸರ ಪಟ್ಟುಕೊಳ್ಳುವುದಿಲ್ಲ, ತಾನೆ! ಗುಂಡಪ್ಪನ ಮನಸ್ಸು ಮುಂದೆ ಮಾರ್ಪಟ್ಟದ್ದಕ್ಕೆ ಅವನು ಮೊದಲು ಬೆಂಗಳೂರಲ್ಲಿ ಪಟ್ಟ ಕಷ್ಟಗಳು ಮುಖ್ಯ ಕಾರಣವಾದ್ದರಿಂದ ನೀವು ಇದನ್ನೂ ತಿಳಿಯ ಬೇಕಾದದ್ದೇ! ಬಸವನಗುಡಿ ನಿವಾಸಿಗಳ ದಾಂಪತ್ಯಜೀವನ ಸಂಸಾರಸುಖ ಸಂಪದಭಿವೃದ್ಧಿ ಆರೋಗ್ಯ ಆಹಾರವ್ಯವಸ್ಥೆ ಪಾಕವೈವಿಧ್ಯ ಸಂತಾನ ಬಾಹುಲ್ಯ ಬಂಧುಪ್ರೇಮ ಜಾಮಾತೃಗಳ ಜಾತಾಬಾಕಿ ಎಲ್ಲವೂ ನಮಗೆ ಆಗ ಹೊಟ್ಟೆ ಮೇಲೆ ಹೊಡದಹಾಗೆ ವೇದ್ಯವಾಯಿತು ಮನೆಯ ಮಾಲೀಕರೊಬ್ಬರು ನಮ್ಮನ್ನು ಒಳಕ್ಕೆ ಕರೆಸಿ ಕೂರಿಸಿ ಕುರ್ಚಿ ಬಿಸಿ ಮಾಡಿಸಿ, "ಏನು ಬಂದಿರಿ? ನಾನು ತಮಗೇನು ಮಾಡಬಲ್ಲೆ? ವಿದ್ಯಾರ್ಥಿಗಳನ್ನು ಕಂಡರೆ ನನಗೆ ತುಂಬಾ ಕನಿಕರ, ನಾನೂ ಒಂದಾನೊಂದು ಕಾಲದಲ್ಲಿ ವಿದ್ಯಾರ್ಥಿಯಾಗಿದ್ದೆ, ನೋಡಿ ಇದೆ ನನ್ನ ಹೈಸ್ಕೂಲ್ ಗ್ರೂಫ್! ಇವರೇ ನಮ್ಮ ಹೆಡ್ಮೇಷ್ಟರು, ವಾಸುದೇವ ರಾಯರು ಅಂತ, ಊರೆಲ್ಲ ನಡುಗಿ ಸತ್ತರೂ (ಮಲೇರಿಯದಿಂದ) ಈತ ಕ್ವಿನೀನ್ ನುಂಗುತ್ತಿರಲಿಲ್ಲ, ಪಶುವೈದ್ಯಶಾಲೆಗೆ ಹೋಗಿ ಕ್ರಿಮಿವಿನಾಶಕ ದ್ರಾವಕ ಒಂದು ಡೋಸ್ ಕುಡಿದುಬಿಡುವರು, ಹ-ಹ್ಹ-ಹ್ಹ—ಹೇಗಿದೆ, ಕಥೆ! ಹೋಗಿಬನ್ನಿ! ಎಲ್ಲರಿಗೂ ಹೇಳಿ! ನಾನು ಹೇಳಿದೆ ಅಂತ ಮಾತ್ರ ಹೇಳಬೇಡಿ——ಇದೇ ನನ್ನ ಕಥೆ——ಇನ್ನೊಂದು ದಿನ ಬನ್ನಿ. ಇನ್ನೊಂದು ಹೇಳುತ್ತೇನೆ——ಏಳಿ ——ಏಳಿ ——" ಅಂದರು. ಮತ್ತೊಬ್ಬರು, ಜವಾಸನ್ನಟ್ಟಿದರು ನಮ್ಮನ್ನಟ್ಟಿಸುವುದಕ್ಕೆ! ಅವರ ಎದುರು ಮನೆಯವರು, "ಆಳು ಮಾಡಿದ ಕೆಲಸ ಹಾಳು" ಅಂತ ಹಿರೀ ಮಗನನ್ನೇ ಕಳುಹಿಸಿದರು. ಆತ ಹಿಟ್ಲರನ ಹಿರೀಮಗನಹಾಗಿದ್ದ. ನಾವು ಅಲ್ಲಿಂದ ಕಾಲು ಕಿತ್ತೆವು. ಮಗ

ಮಾಡಿದ ಕೆಲಸ ಮಧ್ಯಮ ಅಂತ ಬೇರೊಬ್ಬರು ತಾನೇ ಬಂದು, "ಮನೆಯಲ್ಲಿ ದೊಡ್ಡವರು ಯಾರೂ ಇಲ್ರಿ" ಅಂದರು. ನಾಯಿಗಳು ನಾಯಿಕ್ಸಾನಿಯವರು ಯಾರು ಯಾರ ಬಾಯಿಂದಲೋ ಉಗುಳಿಸಿಕೊಂಡೆವು. ಹತ್ತಾರು ಜನ 'ತಾಳಿ!' ಅಂತ ಹೇಳಿ ತಾವು ತಾಳಿ ಕಟ್ಟಿದ್ದ ತಾಟಕಿಯರನ್ನ ವಿಚಾರಿಸಿಕೊಂಡು ಬಂದು ಇಂಗ್ಲೀಷಿನಲ್ಲಿ 'ಸಾರಿ" ಅಂತ ಸಾರಿದರು. ಒಬ್ಬರು ನಮಗೆ ಆಹಾರ ಶಾಸ್ತ್ರದ ಮೇಲೆ ದೊಡ್ಡ ಉಪನ್ಯಾಸ ಕೊಟ್ಟರು. ಅವರು ಕೇವಲ ವಿಟಮಿನುಗಳನ್ನೇ ತಿಂಬುವ ಹಾಗೆ ತೋರಿತು, ನಮಗೆ ಹಾಗಲಕಾಯಿಯಲ್ಲಿ ಶೇಕಡ ೨ ರಷ್ಟು ಕಬ್ಬಿಣವಿದೆ, ಭದ್ರಾವತಿಯಲ್ಲಿ ಬೆಳೆದ್ದಾದರೆ ಶೇಕಡ ೮ ರಷ್ಟು ಸಿಗುತ್ತದೆ, ಕಬ್ಬು ಹೆಚ್ಚಾಗಿ ಬೆಳೆಯುವ ಕಡೆ ಜನ ಕೊಂಚ ಕಬ್ಬಿಣವನ್ನು ತಿನ್ನಲೇಬೇಕು, ಇತ್ಯಾದಿ ಪಚನ ಶಾಸ್ತ್ರರಹಸ್ಯಗಳನ್ನು ಅವರು ನಮಗೆ ಉಚಿತವಾಗಿ ಹಂಚಿದರು. ನಾವು ಆದಷ್ಟು ಬೇಗ ಅಲ್ಲಿಂದ ಹೊರಬಿದ್ದೆವು. ಮತ್ತೊಬ್ಬರು "ನೋಡಿ, ನನಗೆ ಪಿತ್ತ ಜಾಸ್ತಿ ನನ್ನ ಹೆಂಡತಿಗೆ ವಾಯು. ನಾವು ಮಾಧ್ವರು. ನಮಗೆ ಆಯುರ್ವೇದವಲ್ಲಿ ತುಂಬಾ ನಂಬಿಕೆ. ಬರ್ತೀರೇನು" ಅಂದರು. ಗುಂಡಪ್ಪನಿಗೆ ರೇಗಿತು. "ನನ್ನ ತಂದೆಗೂ ಆಯುರ್ವೇದದಿಂದಲೇ ಜೀವನ. ಆದರೂ ಅದು ಅಡುಗೆಮನೆಗೆ ನುಗ್ಗಿರಲಿಲ್ಲ, ಸಾರ್" ಅಂತ ಹೇಳಿ ಎದ್ದ. ಇನ್ನೊಬ್ಬರು ಆಂಗ್ಲೊ ಸಂಸ್ಕೃತ್ ಶಾಲೆಯ ಮುಖ್ಯೋಪಾಧ್ಯಾಯರಂತೆ. ಅವರೂ ವಾಚಾಲರು. ಯಾಕೋ ನಾವಿಬ್ಬರೂ ವಾರದ ಬೇಟೆಗಾಗಿ ಹೊರಟಿದ್ದ ಮೂಲೆಯಲ್ಲಿ ಕೂತು ಕೆಮ್ಮುತ್ತಿದ್ದ ಮೂಕರನ್ನೆಲ್ಲ ವಾಚಾಲತ್ವಕ್ಕೆಳೆಯಿತು. ಅವರು ನಮ್ಮನ್ನ ಮಂದಳಿಗೆ ಮೇಲೆ ಕೂರಿಸಿ, 'ಗೋ, ಅಂದರೆ ಏನರ್ಥ?' ಅಂದರು. ಗುಂಡಪ್ಪನಿಗಿಂತ ಥಟಕ್ಕನೆ ನಾನು "ಅರ್ಥವಾಯಿತು, ಸ್ವಾಮಿ. ನೂರಾರು ಕಡೆ ಕೇಳಿದೇವೆ ಇದನ್ನ" ಅಂತ ಹೇಳಿ ಏಳುವುದಕ್ಕೆ ಅಂತ ನೆಲದ ಮೇಲೆ ಕೈ ಊರಿದೆ. "ಹಾಗಲ್ಲ! ಹಾಗಲ್ಲ! ಕೂತುಕೊಳ್ಳಿ. ಅಮರ ಬರೆದ ಅಮರಸಿಂಹನಿಗೆ ಆಂಗ್ಲಭಾಷೆ ಗೊತ್ತಿತ್ತು ಅನ್ನುವುದಕ್ಕೆ ಒಂದೇ ಒಂದು ಪಂಕ್ತಿ ಹೇಳುತ್ತೇನೆ....ಆ ಮೇಲೆ ನೀವು ಹೊರಡಬಹುದು," ಅಂದರು. ಹುಚ್ಚಾಸ್ಪತ್ರೆಯ ಹೊರಗೂ ಇಷ್ಟು ಜನ ಈ ಬಡಾವಣೆಯಲ್ಲಿ ವಾಸವಾಗಿದಾರೆ ಅಂತ ನನಗೆ ತಿಳಿದಿರಲಿಲ್ಲ. "ನೋಡಿ....ಗೋರ್ವಾ ಗೋವೀ ಗೋಕುಲಂತು ಗೋಘನಂ

ಸ್ವಾರ್ತ್ ಗಮನ್ಸ್ವಜೇ” ಒಂದು ಸುಕ್ತಿ! ಗೋವರ್ಗ ಮನುಷ್ಯ ಹೋಯಿತೆ? ಗೋವಿಂ ಎಲ್ಲಿ ಹೋದನೆ? ಗೋಕುಲಂ ಕುಲ ನಾಶ ವಾಯಿತೆ? ಗೋಘನು ಪಾಪರಾದನೇ? ಇನ್ನು ಗಮನ ಗ್ರಾಮುವನ್ನು ಬಿಟ್ಟು, ಪರಿವ್ರಾಜಕನಾದವರಲ್ಲಿ ಆಶ್ಚರ್ಯವೇನಿದೆ? ಇನ್ನು ಹೊರಡಿ ಹೊರಡಿ” ಅಂದರು. ಆ ದಿನ ಸಂಜೆಹೊತ್ತಿಗೆ ನಾವೂ ಕೂಡ ಕೊಂಚ ವಿಲಕ್ಷಣವಾಗಿ ಮಾತನಾಡಲು ಪ್ರಾರಂಭಿಸಿಬಿಟ್ಟೆವು. ಬೇಗ ಹೋಗು ಬಸ್ ಸ್ಟ್ಯಾಂಡಿಗೆ ಅಂತ ಅನ್ನುವುದಕ್ಕೆ ಗುಂಡಪ್ಪ “ಗೋಸ್ಥಾನು!” ಅಂದ. ನಾನು ನಕ್ಕಾಗ ಅವನಿಗೆ ಬಹಳ ಹೊತ್ತಿನವರೆಗೆ ಅರ್ಥವಾಗಲೇ ಇಲ್ಲ. ಆ ವೇಳೆ ನಾವು ಬಸವನಗುಡಿಯ ಕಡೆ ತಿರುಗಿ ನೋಡಲೇ ಇಲ್ಲ.

ಏಕೆಂದರೆ, ನಾವು ಕೂತ ಬಸ್ಸಿನಿಂದಲೇ ನಮಗೆ ಬಹಳ ಅಪ್ರಾಯವೂ ನವಾದ ಸುದ್ದಿ ತಿಳಿಯುತ್ತಿತ್ತು. ಬಸ್ಸುಗಳಲ್ಲಿ ಪ್ರಯಾಣಮಾಡುವ ಬೆಂಗಳೂರಿನ ನಾಗರಿಕರಲ್ಲಿ ಹಲವು ರೀತಿಯವರಿದ್ದಾರೆ. ಆದರೆ, ಅವರ ಪೈಕಿ ತಮ್ಮ ಸ್ನೇಹಸಮಾಚಾರಗಳನ್ನು ಒಬ್ಬರಿಗೊಬ್ಬರು ಕೂಗಿಹೇಳುವ ಕಂಚುಕಂಠಗಳನ್ನು ಕಂಡರೆ ನನಗೆ ತುಂಬಾ ಪ್ರೀತಿ. ಗುಂಡಪ್ಪನಿಗೆ ಅವರಾಗದು. “ಮೃಗಶಾಲೆಯಲ್ಲಿ ಒಂದು ಬೋನಿನಿಂದ ಸಿಂಹ ಗರ್ಜಿಸಿದರೆ ಅದಕ್ಕುತ್ತರದಿಯೆ ಮತ್ತೊಂದು ಬೋನಿನಿಂದ ಹುಲಿ ಚೀರುವ ಹಾಗೆ ಕಂಡೆಕ್ಟರ್ ಪಕ್ಕದಿಂದ ಓಹೋಹೋ ಗಿರಿಮಾಮಯ್ಯಾ! ಅಂತ ಒಬ್ಬ ಘೀಳಿ ಹೊಡೆದರೆ ಡ್ರೈವರ್ ಪಕ್ಕದಿಂದ ಆತ ಏನಮ್ಮಾ! ಹೇಗೆ ಆಯಿತು? ಅಂತ ಕಹಳೆ ಊದುವವನು. ಇದೆಲ್ಲ ಚಂದ ಒಳ್ಳೆ ದುರಹಂಕಾರದ ಚಿಹ್ನೆ! ಇವರ ಅಮ್ಮ ಅಪ್ಪ ನಮಗೆ ಯಾಕೆ? ಈ ಬಸ್ಸಿನಲ್ಲಿರುವ ವಿಕ್ರಪರೆಲ್ಲ ಹುಳಗಳು! ಯಃಕಶ್ಚಿತ್ ಜನ ನಾವಿಬ್ಬರೇ ನಿಜವಾಗಿಯೂ ಇವರ ಪೈಕಿ ಗಮನಾರ್ಹರು! ಎಂಬ ಧೋರಣೆ ಇದೆ ಕಣೋ, ಇವರ ಕೂಗಾಟದಲ್ಲಿ” ಅಂತ ಗುಂಡ ವಾದಿಸಿದ. ಸರಿ, ಗುಂಡ! ಅಂತ ನಾನು ಅವನ ಅಭಿಪ್ರಾಯಕ್ಕೆ ಒಪ್ಪಿಗೆ ಇತ್ತ ಹಾಗೆ ನಟಿಸಿ, “ಆದರೂ, ಕೇಳಲ್ಲಿ! ಬ್ಯಾಕ್ ಸೀಟಿನವರು ನಮ್ಮ ಮುಂದಿನ ಸೀಟಿನವರೊಂದಿಗೆ ಹೇಳುತ್ತಿರುವುದನ್ನು!” ಅಂದೆ. ಕೇಳಿದೆವು. ಬಸ್ಸಿನ ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ಎಲ್ಲರ ತಲೆಯ ಮೇಲಿಂದಲೂ ಹಾರೋ ಪ್ಲೇನುಗಳ ಹಾಗೆ ರೊಯ್, ರೂಯ್, ಅಂತ ಹೋಗಿಬರುತ್ತಿದ್ದ ಅವರಿಬ್ಬರ

ಉತ್ತರ ಪ್ರತ್ಯುತ್ತರಗಳನ್ನ ನಾವು ಇಪ್ಪತ್ತೆರಡುಜನ, ಕೇಳಿದೆವು, ಕೇಳದೆ ಗತ್ಯಂತರವಿರಲಿಲ್ಲ

ಆದರೆ, ಕೇಳುತ್ತ ಕೇಳುತ್ತ ನಮ್ಮೆಲ್ಲರ ಕಿವಿಗಳರಳಿದುವು; ಕಣ್ಣು ಗಳಲ್ಲಿ ನೀರುಕ್ಕಿತು, ಎದೆ ಉಬ್ಬಿತು, ಹೊಟ್ಟೆ ತುಂಬಿತು

"ಅಲ್ಲ ಕಣೋ! ಥೈಲಿಥೈಲಿ ತುಂಬಿಟ್ಟುಕೊಂಡಿದ್ದರೂ, ಆ ಪಾಪಿ "

"ಅದನ್ನೇ ಅಮ್ಮಾ! ನಾನು ನಿನ್ನ ಟೆಂಪನದ ಮೇಲೆ ಬಡಿಯುತ್ತಾ ಇದ್ದದ್ದು! ಥೈಲಿಥೈಲಿ ತುಂಬಾ ರೂಪಾಯಿದ್ದರೂನೂ ಅವನು ಹಿಂದಿನದನ್ನ ಮರೆತಿಲ್ಲ, ಅಂತ"

"ಯಾವುದನ್ನ! . ಆ? ಅದನ್ನ ಮರೆತಿಲ್ಲವೆ?"

"ಗಟ್ಟಿಯಾಗಿ ಕೂಗಬೇಡ ಗೊತ್ತಾಗಿಹೋಗುತ್ತೆ ಆಸಾಮಿ ಯಾರು ಅಂತ."

"ಅದನ್ನ ಮರೆತಿಲ್ಲವೆ? ಅಂದೆ"

"ಅಯ್ಯೋ! ಅಯ್ಯೋ! ಅದನ್ನ ಮರೆಯದೆ ಇದ್ದರೆ ಅವನಿಗೆ ಉಳಿ ಗಾಲವೆಲ್ಲಿ?. ಅವನೂ ಮರೆಯಬೇಕು, ನಾವೂ ಮರೆಯಬೇಕು, ಅವನ ಮಕ್ಕಳು ಮರಿ ಕೂಡ ಮರೆಯಬೇಕು.. ಒಳ್ಳೆ ಗೆಣೆಯ ನೀನು!"

"ಹಾಗಲ್ಲ, ಕಣೋ! ಸರಿಯಾಗಿ ಬೊಗಳೋ!"

"ಅವನು ಮರೆತಿಲ್ಲ ಅಂತ ನಾನು ಹೇಳಿದ್ದು . ಮಲ್ಲೇಶಪುರಕ್ಕೆ.. ಎರಡು ಕೊಡಿ. "

"ಬೇಡ, ಬೇಡ.. ನಾನು ತೆಗೆದುಕೊಂಡಾಯಿತು. ಮುಂದಿನ ಬಸ್ ಸ್ಟಾಪಲ್ಲಿ ಇಳಿಯೋಣ.. ಬೇಗ ಬೊಗಳೋ... ಅವನು ಮರೆತಿಲ್ಲ ಅಂತ ಹೇಳಿದ್ದು....ಯಾವುದನ್ನೋ?"

"ವಾರ"

"ವಾರ ಭವಿಷ್ಯಾನೇ?"

"ಭವಿಷ್ಯ ಹಾಳಾಯಿತು. ಇವತ್ತು ಹೇಗಿದಾನೆ ನೋಡು, ಭೂಪತಿ ರಂಗ!"

"ಮತ್ತೆ, ವಾರ ಅಂದರೆ...."

"ವಾರದೂಟ"

“ ಹಾಕುತ್ತಾ ಇದಾನೋ, ಯಾರಿಗಾದರೂ ? ”

“ ಯಾರು ಹೋದರೂ....ಅದಕ್ಕೇ ಅಂತ ಪ್ರತ್ಯೇಕ....ಉಗ್ರಾಣ, ಒಗ್ಗರಣೆ, ಉಡುಪಿಯವರು, ಮಸಾಲೆ, ಪಡಸಾಲೆ....”

“ ಕಾಗದ ಕೊಡು ! ಕೆಲಸಕ್ಕೆ ರಾಜಿನಾಮೆ ಕೊಡುತ್ತೇನೆ. ..”

“ ಕಾಲೇಜು ಸೇರು ! ಕಾಗದ ಅವನೇ ಕೊಡುತ್ತಾನೆ. ವಿದ್ಯಾರ್ಥಿಗಳಿಗೆ ಮಾತ್ರ”

ಸರಿ ! “ ಅಮ್ಮಾ”ವರು ಇಳಿದ ಕಡೆಯೇ ನಾವೂ ಇಳಿದುವು ಅವರನ್ನನುಸರಿಸಿ ಆಪದ್ಬಾಂಧವರಾದ ಆ ಮಹಾನುಭಾವರನ್ನು ಪತ್ತೆಹಚ್ಚಿದುವು

ನಮಗೆ ಅವರು ಆಸನಕೊಟ್ಟು ಉಪಚರಿಸಲೇ ಇಲ್ಲ ನಮ್ಮನ್ನು ಕಂಡ ಕೂಡಲೇ ಅವರ ಮುಖದಲ್ಲಿ ಸಂತೋಷದ ಸುಳಿಗಾಳಿ ಬೀಸಿತು. ಆಳವಾದ ಒಂದು ಕೊಳದಮೇಲೆ ಕಿರುದೆರೆಗಳೇಳುವಂತೆ ಅವರ ಮುಖದಲ್ಲೂ ಹರ್ಷದ ಚಿಹ್ನೆಗಳು ಮಿನುಮಿನುಗಿದುವು “ ಇಬ್ಬರೂ ಅಂಗಿ ಬಿಚ್ಚಿ ತೋರಿಸಿ” ಅಂದರು ಹೊಟ್ಟೆಯ ಆಳತೆಯನ್ನು ಅಂದಾಜು ಮಾಡಿ ಉಗ್ರಾಣಕ್ಕೆ ತಿಳಿಸುವುದಕ್ಕಿರಬೇಕು ಅಂತ ನಾವು ನಲಿನಲಿಯುತ್ತಾ ಅಂಗಿ ಕಳಚಿದುವು ಆದರೆ ಅವರು ನೋಡಿದ್ದು ಬೆನ್ನು, ಬೈಸೆಪ್ಸ್ ! ಅನಂತರ ಅವರು ಬಹಳ ಹೊತ್ತು ಗಾಢವಾದ ಮೌನದಲ್ಲೇ ಮುಳುಗಿದ್ದರು ಕಡೆಗೆ, ವಾರಕ್ಕೆ ಮೂರು ದಿನ ಇಲ್ಲಿ ಊಟಮಾಡಬಹುದು, ಎರಡುಹೊತ್ತು ಆದರೆ, .ಉಳಿದ ನಾಲ್ಕುದಿನಗಳೂ ನೀವು ಇಲ್ಲಿಗೆ ಬಂದು ಹೋಗಬೇಕಾಗುತ್ತದೆ” ಅಂದರು “ ಫಳಾರಕ್ಕೋ ? ” ಅಂದ, ಗುಂಡಪ್ಪ ಆತನ ಕಿವಿಗಳು ಅದನ್ನು ಗ್ರಹಿಸಲೇ ಇಲ್ಲ. ನಾಲ್ಕುದಿನವೂ ಕಾಲೇಜು ಮುಗಿದ ಕೂಡಲೇ ನೀವು ಬಂದು (ನಿಮ್ಮ ವೇಳಾಪತ್ರಿಕೆಯನ್ನು ನಾನು ಕಾಲೇಜಿಂದ ತರಿಸಿಕೊಳ್ಳುತ್ತೇನೆ) ಕಾಯಿಪಲ್ಯಗಳಿಗೆ ನೀರುಹಾಕುವುದು, ನಮ್ಮ ಮನೆ ಆಳುಗಳು ಸೀಳಲು ಸಾಧ್ಯವಿಲ್ಲವೆಂದು ಒತ್ತಟ್ಟಿಗಿಟ್ಟಿರುವ ಕೊರಡುಗಳನ್ನು ಒಡೆಯುವುದು (ಕೊಡಲಿ ಕೊಡುತ್ತೇನೆ. .ನಿಮ್ಮ ಬೈಸೆಪ್ಸ್‌ಗಳೂ ಕೂಡ ಬಲವಾಗಿಯೇ ಇವೆ) ಮಕ್ಕಳನ್ನು ಪಾರ್ಕಿಗೆ ಎತ್ತಿಕೊಂಡು ಹೋಗಿ ಕೂರಿಸಿಕೊಳ್ಳುವುದು, ಮನೆ ನಾಯಿಯನ್ನ ನೀರಿಗೆ ಹಾಕಿ ಓಡಿಸಿಕೊಂಡು ಬರುವುದು,—ಇಷ್ಟುಕೆಲಸ ಮಾಡಬೇಕಾಗುತ್ತದೆ. ಅನ್ನದ ಋಣ ತೀರುತ್ತದೆ, ದಂಡ ಪಿಂಡ ಹಾಕಿದ ಅಂತ ನನ್ನನ್ನು

ಯಾರೂ ದೂರುವುದಿಲ್ಲ" ಅಂದರು. ನಾನು ಗಂಡಪ್ಪನ ಮುಖ ನೋಡಿದೆ; ಅವನು ನನ್ನ ಮುಖ ನೋಡಿದ ನಮ್ಮ ನಾಲಿಗೆಗಳು ಬಾಯಬಿಲದಲ್ಲಿ ಎಲ್ಲೋ ಉಡುಗಿಹೋಗಿದ್ದುವು, ಮೊದಲು ಅದನ್ನು ಪತ್ತೆಹಚ್ಚಿ ಉಪಯೋಗಿಸಿದ್ದ ಗಂಡ "ನಾವು ಇಲ್ಲಿ ಪಿಂಡಕ್ಕೆ ಬರುವ ದಿನವೇ ದುಡಾನೂ ಹಾಕಬಿಡಿ," ಅಂದ "ಪ್ರತಿ ಒಬ್ಬರೂ ಅದನ್ನೇ ಕೇಳುತ್ತಾರೆ ಆದರೆ ನಾನು ಪ್ರತಿ ಒಬ್ಬರಿಗೂ ಕೊಡುವುದು ಒಂದೇ ನಕಾರ ಕಟ್ಟಿಗೆ ಕಡಿದ ದಿನ ನಿಮ್ಮ ಹೊಟ್ಟೆಗೆ ಆಹಾರ ಪೂರೈಸುತ್ತಾ ಒಂದರೆ ನನ್ನ ಗತಿ ಏನು? ಉಳಿದ ನಾಲ್ಕು ದಿನ, ಇಲ್ಲಿ ದುಡಿತ, ಇನ್ನೆಲ್ಲೋ ಹೊಡೆತ ನಾನು ಹಾಕುವ ಮೂರು ದಿನ ಮಾತ್ರ ಬೆಳಗ್ಗೆ ಏಳುಗಂಟೆಗೆ ಸಂಜೆ ೬ ಗಂಟೆಗೆ ಒನ್ನಿ! ನಮ್ಮ ಮನೆಯಲ್ಲೇ ಆರಾಮವಾಗಿ ಕೂತು ಯಾವುದಾದರೂ ಪುಸ್ತಕ ಓದುತ್ತಿರಿ ಅಂದರು ಗಂಡಪ್ಪ ನನ್ನ ಮುಖ ನೋಡಿದ, ನಾನು ಅವನ ಮುಖ ನೋಡಿದೆ "ಘಾಟಿ" ಅಂತ ನಾವು ಕಣ್ಣುಸನ್ನೆಯಲ್ಲೇ ಹೇಳಿಕೊಂಡೆವು ಕಳಚಿ ಇರಿಸಿದ್ದ ಅಂಗಿಗಳನ್ನು ಪುನಃ ಧರಿಸಿದುವು

ಹೊಟ್ಟೆಗಳೆರಡೂ "ಬೇಕು! ಹಾಕು!" "ಹಾಕು! ಬೇಕು!" ಅಂತ ತಾಳ ಹಾಕಿದುವು "ಆಗಲಿ ಸ್ವಾಮಿ" ಅಂತ ಹೇಳಿ ಅವರು ಬರೆದಿರಿಸಿದ್ದ ಅನಾಥೆಗಳ ಪಟ್ಟಿಯಲ್ಲಿ ನಮ್ಮ ಹೆಸರುಗಳನ್ನೂ ಸೇರಿಸಿ ಅಲ್ಲಿಂದ ಪರಾರಿಯಾದುವು.

ಎದುರುಮನೆಗೆ ಹೋಗಿ, "ಸ್ವಾಮಿ! ಎದುರುಮನೆಯವರ ಹೆಸರೇನು?" ಅಂದೆವು

"ಕ್ಲಿಷ್ಟರಾಯರು, ಕ್ಲೋಸ್‌ಪೇಟೆ ಕ್ಲಿಷ್ಟರಾಯರು!" ಅಂದರು "ಸರಿ" ಎಂದು ಹೇಳಿ, ನಾವಿಬ್ಬರೂ ನಮ್ಮ ರೂಮಿಗೆ ಹೊರಟೆವು ವಾರಕ್ಕೆ ನಾಲ್ಕುದಿನ ಉಚಿತ ವ್ಯಾಯಾಮ ದೊರೆತಿರವ ಸುದ್ದಿ ಇನ್ನೆಲ್ಲೂ ಹೇಳಬಾರದು ಅಂತ ತೀರ್ಮಾನಿಸಿದೆವು

"ಪ್ರಕೃತಿದೇವಿ ನಿಷ್ಕರುಣಿ!" ಮಾನವ ಕೀಟಗಳು ಗೋಳಿಡುತ್ತಿರುವಾಗ ಅವಳಿಗೆ ಅದರ ಅರಿವೇ ಇರುವುದಿಲ್ಲ!" ಅಂತಾರೆ ಆದರೆ, ಅವತ್ತು ಪ್ರಕೃತಿದೇವಿ ನಮ್ಮೊಂದಿಗೆ ಸಹತಪಿಸಿ, ಅಶ್ರುಧಾರೆಯನ್ನು ಸುರಿದು ರಸ್ತೆಗಳನ್ನೆಲ್ಲ ರೊಚ್ಚೆ ಮಾಡಿದಳು. ಬಹಳ ಹೊತ್ತು ಮಳೆ ನಿಲ್ಲಲೇ ಇಲ್ಲ

ನಾವು ಜಗುಲಿಯಿಂದ ಜಗುಲಿಗೆ ಓಡೋಡಿ ಮುಂದುವರಿದೆವು. ಒಂದು ಜಗಲಿಯಲ್ಲಿ ಮಾತ್ರ ಬಹಳ ಹೊತ್ತು ನಿಂತೆವು. ಒಳಗೆ ಆರೋಗಣೆಯ ಸಮಯವಾಗಿತ್ತು. ರಾಯರು ಕೊಂಚ ಕೋಪಿಷ್ಠರು; ಅನ್ನದಲ್ಲಿ ಕಲ್ಲು ಸಿಕ್ಕಿತೋ ಏನೋ? ಭಯಂಕರ ರೀತಿಯಲ್ಲಿ ರೇಗಾಡುತ್ತಿದ್ದರು ತಾಯಿಯವರದು ಕೇವಲ ತಗ್ಗುಶ್ರುತಿ. ತಾಪತ್ರಯದಲ್ಲೇ ತೊಯ್ದ ಜೀವಿ ಅಂತ ತೋರಿತು "ಅಡಿಗೆ ಮಾಡಿರುವುದು ಗಡಿಗೆಗೂ ನಾಚಿಕೆ ಅಂತಾರಲ್ಲಾ ಹಾಗಾಗಿದೆ! ಆ ವಾರದ ಹುಡುಗರಿದ್ದಾಗ ಊಟ ಎಷ್ಟೋ ಚೆನ್ನಾಗಿತ್ತು.... ರುಚಿರುಚಿಯಾಗಿರುವುದು. ದಿನಕ್ಕೊಂದೊಂದು ಬಗೆ ಮಾಡುವಳು ಅಲ್ಲವೇನೋ" ಅಂದರು ಮರ ಅಂದಾಗ ನಾವು ನೆಟ್ಟಗಾದುವು ಅಲ್ಲವೇನೋ ಅಂತ ಅಂದದ್ದು ಮಗನ ಕಡೆ ತಿರುಗಿ ಅಂತ ಆ ಮೇಲೆ ಗೊತ್ತಾಯಿತು ಮಗನೂ ಕೂಡ ತಂದೆ ಕಡೇನೆ ವಕಾಲತ್ತು "ಹೌದಣ್ಣ" ಅಂದ, ಅರೆತುಂಬಿದ ಬಾಯಿಂದ ಆಗ, ಗೃಹಿಣಿ, "ವಾರದ ಹುಡುಗರು ಇದ್ದಾಗ ವಿಧವಿಧವಾಗಿ ಮಾಡಿ ಹಾಕದೆ ಇದ್ದರೆ ಅವರು ಊರೆಲ್ಲ ದೂರತ್ತಾರೆ ಜಿಪುಣರು, ಕೃಪಣರ, ಗೊಡ್ಡುಸಾರಿನವರ, ತೊಟ್ಟು ತುಪ್ಪದವರ, ನೀರುಮಜ್ಜಿಗೆಯವರು, ಅಂತ ಅದಕ್ಕೇ, ಸಾಲವಾದರೂ ಸೋಲಬಾರದು ಅಂತ ಮಾಡಿ ಹಾಕುತ್ತಿದ್ದುದ್ದು!" ಅಂದಳು "ಹಾಗಾದರೆ, ಲೋ! ನಾಳೇನೆ ಹಿಡಿದುಕೊಂಡು ಬಾ! ಇಬ್ಬರು ಸೋಮಾರಿಗಳನ್ನ! ಅಡಿಗೆ ಕೊಂಚ ಸಪ್ಪಗಾದರೆ, ಆ ಸಮಾಚಾರಕ್ಕೆ ಉಪ್ಪು ಹುಳಿ ಖಾರ ಸೇರಿಸಿ ಊರಿಗೆಲ್ಲ ಸಂತರ್ಪಣೆಮಾಡುವ ಆಸಾಮಿಗಳಾಗಿರಬೇಕು" ಅಂದರು, ರಾಯರು "ಭಲಾ" ಅಂದ, ಗುಂಡ ನನ್ನ ಭುಜದ ಮೇಲೆ ಗುದ್ದುತ್ತ!

ಹೊರಗೆ ನಾವು ಕತ್ತಲಲ್ಲೇ ನಿಂತಿದ್ದೆವು, ಎಂಜಲೆಲೆ ಎಸೆಯುವುದಕ್ಕೆ ರಾಯರು ಬರುವುದನ್ನೇ ಕಾಯುತ್ತ! ಒಳಗಿಂದ ಸ್ವಿಚ್ ಹಾಕಿ ದೀಪಹೊತ್ತಿಸಿ ಹೊಸಲು ದಾಟಿದರು ನಾವಿಬ್ಬರೂ ಒಟ್ಟಿಗೆ "ನಾವಿದೇವೆ ಸಾರ್! ನಡೆಸಿ ಕೊಡುತ್ತೇವೆ ಸಾರ್" ಅಂದೆವು ಎಂಜಿಲು ಸಹಿತವಾಗಿ ರಾಯರು ಅಲ್ಲೇ ನಿಂತರು "ಮೂರುದಿನ ವಾರ ಕೊಡಿ, ಸಾರ್! ತಾವು ಹೇಳಿದ ಸಂತರ್ಪಣೆ ನಾವು ನಡೆಸುತ್ತೇವೆ" ಅಂದೆವು ಆಗ ರಾಯರಿಗೆ ಅರ್ಥವಾಯಿತು ನಕ್ಕರು ಮಗನನ್ನು ಕರೆದರು. ಆಕೆಗೂ ಅರ್ಥವಾಯಿತು. ಗುರುವಾರ ಶುಕ್ರವಾರ ಶನಿವಾರ ಅಂತ ಗೊತ್ತುಮಾಡಿಕೊಂಡು, ಸೋನೆಯಲ್ಲೇ ಮುಂದಕ್ಕೆ ಸಾಗಿದುವು.

"ಇನ್ನುಳಿದದ್ದೊಂದೇ ದಿನ; ಭಾನುವಾರ. ಅವತ್ತು ಕ್ರಿಸ್ಟರುಯರು ಹೆಚ್ಚು ಕಷ್ಟ ಕೊಡಬಹುದಲ್ಲಾ ...ಹಸಿವು ವಿಪರೀತವಾಗುತ್ತೆ....ಏನು ಮಾಡುವುದು?" ಅಂತ ಶೋಚಿಸುತ್ತ ಹೋದೆವು .

ಮುಂದಿನ ಬೀದಿಯಲ್ಲಿ ಮತ್ತೊಬ್ಬರು ಸದ್ಗೃಹಸ್ಥರು ಏಂಜಿಲೆಲೆ ತಂದರು. ವಿದ್ಯುತ್‌ದೀಪ ಹೊತ್ತಿಸಿದರು. ಅವರ ವರಾಂಡಾದಲ್ಲಿ ಭಗವದ್ಗೀತೋಕ್ತವಾದ ವಿಶ್ವರೂಪ ದರ್ಶನದ ಚಿತ್ರವೊಂದು ನೇತಾಡುತ್ತಿತ್ತು. ಸರಿ "ನಹಿಕಲ್ಯಾಣ ಕೃತ್ ಕಶ್ಚಿತ್ ದುರ್ಗತಿಂತಾತಗಚ್ಛತಿ" ಅಂತ ಇವರಿಗೆ ಮಂದಟ್ಟಾಗಿರುತ್ತದೆ, ಬಾರೋ! ಹೋದರೆ ಒಂದು ನಮಸ್ಕಾರ! ಆದರೆ ಒಂದು ಪುರಸ್ಕಾರ! ಅಂದ ಗುಂಡ ಅವರ ಹಿಂದೇನೆ ನುಗ್ಗಿದುವು

ಬನ್ನಿ! ಕೂತುಕೊಳ್ಳಿ, ನೀವು ಕಾಲೇಜು ಹುಡುಗರೇನು? ತುಮಕೂರು ಡಿಸ್ಟ್ರಿಕ್ಟೇನು? ಕಾಲ ಕೆಟ್ಟುಹೋಯ್ತು, ಈಗ ಏನು? ಆಟ ಊಟ ಓಟ! ಎಲ್ಲಿಗೆ? ಯಾತಕ್ಕೆ? ಕೇಳಿ, ಒಬ್ಬರಿಗೂ ಗೊತ್ತಿಲ್ಲ ಎಲ್ಲಿಗಾದರೂ ಸರಿ! ಓಡಿದರಾಯಿತು ಜೋಳ್ಳಾದರೂ ಸರಿ! ಹಾರಿದರಾಯಿತು .. ಬೆಳಗಾದರೆ ನಿಧಾನವಾಗಿ ಬೇವಿನ ಕಡ್ಡಿಯನ್ನೋ ಮಾವಿನ ಸೊಪ್ಪನ್ನೋ ತಂದು ಪರಿಷ್ಕಾರವಾಗಿ ಹಲ್ಲುಜ್ಜುವ ಗೋಜಿಲ್ಲ. ಸಾಬೂನು ಸ್ನಾನ ಬೆರೆಸಿ ಹದ ಮಾಡಿದ ರದಫೇನವನ್ನು ಸವರಿ ಮುಕ್ಕಳಿಸಿದರಾಯಿತು. ಬಾಬಾಬುಡ್ಡರವರು ಅಕ್ಕರೆಯಿಂದ ಮಕ್ಕಾಕ್ಷೇತ್ರದಿಂದ ತಂದು ಕನ್ನಡಿಗರಿಗಾಗಿ ಬೆಳೆಸಿದ ಕಾಫಿ ಕಷಾಯವನ್ನು ನಿಧಾನವಾಗಿ ಬಿಸಿಬಿಸಿಯ ಆನಂದದಲ್ಲಿ ಸವಿದು ಕನಸು ಕಾಣಬಾರದೆ? ಊಹುಂ ಆವಸರ ದಾಂಧಲೆ. ಕಿಂಚಿತ್ 'ಕಾಫೀಂ ಗಲ್ಪಂತಿ' ಅಂತ ಒಬ್ಬರು ಅಂದೇ ಬಿಟ್ಟರಂತೆ, ಪಂಡಿತ ಮಂಡಲಿಯಲ್ಲಿ ಗಲ್ಪ್ ಎಂಬ ಇಂಗ್ಲೀಷ್ ಪದಕ್ಕೆ ಸಂಸ್ಕೃತ ಹುಡುಕುವುದಕ್ಕೆ ಸಾವಕಾಶ ಸಾಲದೆ! ಹಾಗೆ ಗಲ್ಪಿ ಬಿಟ್ಟು ಹೊರ ಹೊರಟರೆ ಭರಾಟೆಯೋ ಭರಾಟೆ! ಯಾರನ್ನು ಕಂಡರೂ "ಟೈಂ ಆಗಿಹೋಯ್ತು," "ನಾಳೆ ಕಾಣ್ಸೋಣ," "ಬರ್ತೇನೆ ಸ್ವಾಮಿ!" ಎರಡು ಕಾಲುಗಳ ಮೇಲೂ ನಿಂತು ಗಹಗಹಿಸಿ ಹರಟುವುದಕ್ಕೇ ಸಮಯವಿಲ್ಲ ಅಂತ ಅವರು ಪೀಠಿಕೆ ಹಾಕಿದರು. "ಹೊತ್ತಾಯಿತು, ಸ್ವಾಮಿ! ತಮ್ಮ ಉಪನ್ಯಾಸ ಕೇಳುವುದಕ್ಕೆ ಈಗ ಪುರಸತ್ತಿಲ್ಲ" ಅಂತ ನಾವು ಗೊಣಗಿದರೆ ಅವರು ಬಿಡುತ್ತಾರೆಯೇ?

"ತಮ್ಮ ಊಟ ಆಯಿತು, ಅಂತ ತೋರುತ್ತೆ!" ಅಂದ ಗುಂಡ, ಅದನ್ನೇ ಹೇಳೋಣ ಅಂತ ಹೊರಟೆ ಹಿಂದಿನ ಕಾಲದಲ್ಲಿ ಹೀಗಿರಲಿಲ್ಲ. ಒಬ್ಬರನ್ನೊಬ್ಬರು ಭೇಟಿಯಾದರೆ "ಎದ್ದಿರಾ?" ಅಂತಲೇ ಪ್ರಾರಂಭಮಾಡಿ, "ಇದ್ದೀರಾ" ಅಂತ ಮುಂದುವರಿಸಿ ಗಂಗಾಸ್ನಾನ ತುಂಗಾಪಾನ ಹೀಗೆ ಕುಶಲ ವಿಚಾರಿಸುತ್ತಿದ್ದರು ಈಗ ಅಂಥ ಗೆಳೆತನ, ಅಂಥ ಗಳತನ ಇಲ್ಲವೇ ಇಲ್ಲ ಅಂದರು

"ನಾವು ಹೀಗೆ ವಾರದ ಮನೆಗಳಿಗಾಗಿ " ಅಂತ ನಾನು ಮಾತು ತುರುಕಿದೆ "ವಾರವೇನು? ತಿಂಗಳುಗಟ್ಟಲೆ ಊಟ ಮಾಡಿದರೂ ಮಾಡಿ!" ಅಂದರು ಅವರು ಅದಕ್ಕೆ! ನಮ್ಮ ಹೃದಯಗಳು ಮೇಲೆದ್ದು ಬಾಯೊಳಕ್ಕೆ ಬಂದುವು "ತಿಂಗಳೇನು ಬೇಡಿ ಒಂದು ದಿನ ವಾರಕ್ಕೆ ನಮ್ಮಿಬ್ಬರಿಗೆ ಕಾಲೇಜು ಹುಡುಗರು!" ಅಂದೆ "ಭಾನುವಾರ" ಅಂತ ಗುಂಡ ಜ್ಞಾಪಿಸಿದ.

ನಮ್ಮ ಮನೆಯಲ್ಲಿ ಊಟ ಬಲು ನಿಧಾನ, ನೋಡಿ ಮಧ್ಯಾಹ್ನದ ಊಟ ಈಗ ಮುಕ್ತಾಯ "ತ್ವಮಸ್ಯ ವಿಶ್ವಸ್ಯ ಪರಂನಿಧಾನಂ" ಮತ್ತೆ ನಮ್ಮ ವಿಶ್ವ ಮಾತ್ರ ಓಡು ಅಂದರೆ ಓಡುತ್ತದೆಯೋ? ಕಾಲ ಸೊಟ್ಟಾಗಿರುವುದಕ್ಕೆ ಈ ಗಡಿಬಿಡಿಯೇ ಕಾರಣ ಹುಟ್ಟಿದ ಕೂಡಲೆ ಸಾಯುವ ಆತುರ! ಲಿವರಂತೆ ಸ್ಪ್ಲೀನಂತೆ, ಐವತ್ತೆಂಟು ತಂತ್ರಗಳು! ಸಾಯುವ ಮೊದಲೇ ಪ್ರಪಂಚದ ಸವಿಯನ್ನೆಲ್ಲ ಹೀರಿಬಿಡಬೇಕೆಂಬ ಆತುರ ಜನ್ಮಜನ್ಮಾಂತರಗಳ ಜಾಹ್ನವಿಯ ಮೇಲೆ ನಾವು ಹೂಡಿರುವ ನೌಕಾ ವಿಹಾರದಲ್ಲಿ ಈ ಜನ್ಮ ಒಂದುಸಲ ಹುಟ್ಟು ಹಾಕುವುದು ಅಷ್ಟೆ ಎಂಬ ಪರಿಜ್ಞಾನವೇ ಇಲ್ಲ

"ಮಧ್ಯಾಹ್ನದ ಊಟಕ್ಕೆ ಇಷ್ಟು ಹೊತ್ತಾಗುತ್ತೆ! ಆಗಬಹುದೆ?" ಅಂದರು. ಅದಕ್ಕೆ ಗುಂಡ "ಆಗಬಹುದು! ಆದರೆ, ಒಪ್ಪತ್ತು ಉಪವಾಸ ಬೀಳಬೇಕಲ್ಲ!" ಅಂದ. ಉಪವಾಸವೆಲ್ಲಿ ಬಂತು? ನಿನ್ನೆ ರಾತ್ರಿ ಊಟ ಇವತ್ತು ಮಧ್ಯಾಹ್ನ ಉಂಟಲ್ಲ .. ಹನ್ನೆರಡು ಗಂಟೆಗೆ ಬನ್ನಿ ನೀವು.... ಶನಿವಾರ ರಾತ್ರಿಯ ಊಟ ಅಡಿಗೆಮಾಡಿ ಬಡಿಸುತ್ತೇನೆ ತಿಂದು ಹೋಗಿ! ರಾತ್ರಿ ೯ ಗಂಟೆಗೆ ಬನ್ನಿ! ಭಾನುವಾರದ ಮಧ್ಯಾಹ್ನದ ಊಟ ಬಿಸಿ ಬಿಸಿಯಾಗಿರುತ್ತೆ....ತಿನ್ನಿ!....ಆಗಬಹುದು ತಾನೇ?" ಅಂದರು.

ಎಲ್ಲೋ ಜ್ಞಾನದಲ್ಲಿ ಗುಂಡ ಅವರಿಗೆ ಒಂದು ನಮಸ್ಕಾರ ಹಾಕಿದ ಹಾಕಿದ್ದು ಒಳ್ಳೆಯದೇ ಆಯಿತು ಏಕೆಂದರೆ, ಅದೊಂದು ಮಾರ ಅವರೊಬ್ಬರು ಸಂನ್ಯಾಸಿಗಳು ಶಿಷ್ಯರಿಲ್ಲದ ಸ್ವಾವಲಂಬಿಗಳು ವಿಳಂಬಾನಂಧ ಎಂಬ ನಾಮ ಧೇಯವನ್ನು ಧರಿಸಿ ಅಷ್ಟರಲ್ಲೇ ಸಂತುಷ್ಟರಾದವರು ಗಂಟೆಯ ಮುಳ್ಳನ್ನು ಬಲಾತ್ಕಾರವಾಗಿ ಮುಂದಕ್ಕೆ ತಳ್ಳಿ ಸರ್ಕಾರದವರು ಕಾಲನ ಚೀಲದಿಂದ ಅರವತ್ತು ನಿಮಿಷಗಳನ್ನು ಅನಾಮತ್ತಾಗಿ ಅಪಹರಿಸಿದ ಹಾಗೆ, ಅವರು ಉದಾರತೆಯಿಂದ ಕಾಲನಿಗೆ ಹತ್ತು ಹನ್ನೆರಡು ಗಂಟೆಗಳನ್ನು ದಾನ ಮಾಡಿ ದಾರೆ ನಿನ್ನೆಯ ಸ್ನಾನ ಇವತ್ತು! ನಿನ್ನೆಯ ಭೋಜನ ಈ ಹೊತ್ತು ಮಧ್ಯಾಹ್ನ! ನಿನ್ನೆಯ ಜ್ವರಕ್ಕೆ ಇವತ್ತು ಔಷಧಿ! ನಿನ್ನೆಯ ಅವಮಾನಕ್ಕೆ ಇವತ್ತು ಕೋಪ! ನಿನ್ನೆಯ ನಮಸ್ಕಾರಕ್ಕೆ ಇವತ್ತು ಆಶೀರ್ವಾದ

ಇನ್ನು ನಮ್ಮ ಓದು! ಅದರ ಕಷ್ಟವನ್ನು ನಾವು ಆದಷ್ಟು ಉಳಿಸಿ ಕೊಂಡೆವು ಗುಂಡ ಓದುವಾಗ ನಾನು ಕಿವಿ ಕೊಡುವುದು, ಅವನೋದುವಾಗ ನಾನು ಕಿವಿ ಕೊಡುವುದು, ಹೀಗೆ ವಿಂಗಡಿಸಿಕೊಂಡದ್ದರಿಂದ ನಾವು ನಾಲಿಗೆಗ ಳನ್ನು ಹೆಚ್ಚು ಸವೆಸಲಿಲ್ಲ ನಾವಿಬ್ಬರೂ ಪರೀಕ್ಷಾ ವಿಷಯಗಳಾಗಿ ಆರಿಸಿ ಕೊಂಡಿದ್ದ ಶಾಸ್ತ್ರಗಳೆಲ್ಲ ಒಂದೇ ರೀತಿಯವು ಆದ್ದರಿಂದ, ಉಪಾಧ್ಯಾಯರೂ, ಪಾಥೇಯಗಳೂ, ಇಬ್ಬರಿಗೂ ಒಂದೇ ರೀತಿಯವು

ನಮ್ಮ ನೋಟ್ಸುಗಳೋ? ಗುಂಡ ಎಲ್ಲಾದರೂ ಈಗ ಸಿಕ್ಕರೆ ಒಬ್ಬರಿ ಗೊಬ್ಬರು ಹೇಳಿ ನಗಬಹುದಾಗಿತ್ತು. ಆಗ ನಮಗೆ ಅವೇ ಸರ್ವಮಾನ್ಯ ಪಾಠ ಹೇಳುವ ಉಪಾಧ್ಯಾಯರಿಗೆ ಅಭ್ಯಾಸ ಬಲವಿದೆ ಅನೇಕ ವೇಳೆ ಒಂದು ಪಂಕ್ತಿ ಲಾಭ ಸಿಕ್ಕರೆ, ಅವರು ಆ ಪಂಕ್ತಿಯ ಟೀಕೆಯಲ್ಲೇ ಘಂಟಾ ಘೋಷದ ವರೆಗೂ ಹೇಳಬಲ್ಲರು ಅವರು ಅರೆನಿದ್ದೆಯಲ್ಲಿದ್ದರೂ ವಾಕ್ಯಗಳು ಒಂದರ ಹಿಂದೊಂದು ಮಾಟಗಾರನ ಬಾಯೊಳಗಿಂದ ಟೇಪ್ ಬರುವ ಹಾಗೆ ಹೊರ ಹೊರಡುತ್ತವೆ. ಆದರೆ, ವಿದ್ಯಾರ್ಥಿಗಳಿಗೆ ಆ ರಾಗಾಲಾಪನೆ ಅತೀವ ಹೊಸದು ಉಪಾಧ್ಯಾಯರ ಉಚ್ಚಾರಣಾವೈವಿಧ್ಯ ಪರಭಾಷಾಪಾಂಡಿತ್ಯ ತರ್ಕತಾಂಡವ ಪ್ರವಚನರಚನ ಇವುಗಳನ್ನು ಪರಿಚಯ ಮಾಡಿಕೊಂಡು ಮುಖ್ಯಾಮುಖ್ಯ ವಿವೇಚನೆ ನಡೆಸಿ, ಅವರು ಉಪಯೋಗಿಸುವ ಶಬ್ದಜಾಲವನ್ನು ಭೇದಿಸಿ ತಿರು ಳನ್ನು ಕಿವಿಯ ಮೂಲಕ ಹೀರಿ ಮೆದುಳಲ್ಲಿ ಸೋಸಿ ಬಲ ಭುಜಕ್ಕೆ ರವಾನಿಸಿ

ಬಲಗೈಗೆ ಹರಿಯಿಸಿ ಲೇಖನಿಗಿಳಿಸಿ ಕಾಗದದಲ್ಲಿ ಕಾದಿಟ್ಟುಕೊಳ್ಳುವುದೆಂದರೆ ಕಷ್ಟಸಾಧ್ಯವಲ್ಲದೆ ಮತ್ತೇನು! ಹೀಗೆ ಅವಸರವವಸರವಾಗಿ ವಿಧಿಯಿಲ್ಲದೆ ಬಿಡುವಿಲ್ಲದೆ ತಡೆಯಿಲ್ಲದೆ ನಾವು ಕಾಗದದಲ್ಲಿ ಗೀಚಿಕೊಂಡಿದ್ದನ್ನ ಅನಂತರ ಓದಿದಾಗ ನಮಗುಂಟಾಗುವ ಅರಿವು ಎಂಥದ್ದು? ಅದರಲ್ಲಿ ಮರೆಯುವುದೆಷ್ಟು? ನಮ್ಮ ಬುದ್ಧಿಯ ಚಕ್ರಕ್ಕೆ ಸಿಲುಕಿ ಮಾರ್ಪಾಟಾಗುವುದೆಷ್ಟು? ಪರೀಕ್ಷಾ ಸಮಯದಲ್ಲಿ ಮೆದುಳಿನ ಮೂಲಕ ಭುಜಹಸ್ತಗಳ ನೆರವುಗಳ ಮಾರ್ಗವಾಗಿ ಅವರಿತ್ತ ಕಾಗದಕ್ಕೆ ನಾವು ಲೇಖಣಿಯಿಂದಿಳಿಸುವುದೆಷ್ಟು? ಅದನ್ನ ಓದುವ ಗ ಪರೀಕ್ಷಕನ ಅರಿಷಡ್ವರ್ಗಗಳ ಸ್ವರೂಪ ಎಂಥದ್ದು? ಅವನು ಹಾಕಬೇಕೆಂದಿರುವ ನಂಬರೆಷ್ಟು? ಹಾಕವುದೆಷ್ಟು? ಊಹಿಸಿದರೆ, ಎದೆ ನಡುಗುವುದು ಆಗ! ನಾವು ಊಹಿಸಲೇ ಇಲ್ಲ ಗುಂಡ, ಮಾತ್ರ, ಆಗಾಗ, ನಾವು 'ನೋಟ್ಸು' ಓದುವಾಗ, "ಏನೋ ಇದು? ಚಂದು! ನಿಜವಾಗಿಯೂ ಹೀಗೆ ಹೇಳಿದರೆ? ಮೇಷ್ಟ್ರು?" ಅನ್ನುವನು "ದೇವರೇ ಗತಿ" ಅಂತ ನಾನೂ ರಾಗ ಎಳೆಯುವೆ

ನಮ್ಮ ಊಟದ ಲಕ್ಷಣ, ಓದಿನ ಅವಲಕ್ಷಣ, ಇವೆರಡರಿಂದಲೂ ಗುಂಡಪ್ಪನ ಗುಣ ಪುಟಗೊಂಡು ಅವನ ನಡೆ ನುಡಿಗಳಲ್ಲಿ ಬರಬರುತ್ತಾ ಬದಲಾವಣೆಗಳಾದುವು ಈಗ ಆತ ಹೆಡ್ ಗುಮಾಸ್ತೆಯಾಗಿ ಮದುವೆಯಾಗಿ ಸಂಸಾರಿಯಾಗಿ ಒಂದು ಗಂಡುಮಗು ತಂದೆಯಾಗಿ ಸುಖವಾಗಿದಾನೆ ಅಂತ ನೀವು ಹೇಳುತ್ತೀರಿ . ಆಗ, ನನಗೇನೋ ಅವನು ಇಷ್ಟು ನೆಮ್ಮದಿಯಾಗಿ ಬಾಳಿ ಬದುಕುತ್ತಾನೆ ಅಂತ ಅನ್ನಿಸಲೇ ಇಲ್ಲ

ಏಕೆ ಅಂತೀರೋ? ನನಗೆ ತಿಳಿದಮಟ್ಟಿಗೂ ಒಂದೇ ರೂಮಿನಲ್ಲಿ ಒಟ್ಟಿಗೇ ಇದ್ದು ಸದಾ ಸಂಗಡಲೇ ತಿರುಗತ್ತಾ ಇದ್ದರೂ, ಒಬ್ಬನ ಜೀವಾಳ ಪತ್ತೆ ಹಚ್ಚುವುದು ಬಹು ಕಷ್ಟ ಆ ಎದೆಯೊಳಗೆ ಕಲ್ಲಿದೆಯೋ ಕಮಲ ಇದೆಯೋ, ಕಂಡವರಾರು? . ಆದರೂ, ಹೇಳುತ್ತೇನೆ. ವಿಳಂಬಾನಂದಸ್ವಾಮಿಯವರ ಸಹವಾಸದಿಂದ ಗುಂಡನ ಅಂತಃಕರಣಕ್ಕೂ ಕೊಂಚ ಕಾಷಾಯ ತಗುಲಿತು. ಅವನದು ಆಯುರ್ವೇದದ ವಂಶ; ಸಂಸ್ಕೃತದಲ್ಲಿ ಸುಮಾರು ಸೈ ಎನಿಸಿದ್ದ. ಕ್ಲಿಷ್ಟರಾಯ್ಕರ ಮನೆಯಲ್ಲಿ ಅವನು ಹೆಚ್ಚು ರಭಸದಿಂದ ಕೊಡಲಿ ಬೀಸಿದ, ಒಬ್ಬರ ಹಂಗಿನಲ್ಲಿರಬಾರದು, ಅಂತ!

ಆ ಇನ್ನೊಬ್ಬರ ಮನೆಯಲ್ಲಿ ಬರಬರುತ್ತ ಅವನಿಗೆ ಬೇಸರಿಕೆ ಹೆಚ್ಚಿತು. ಅಲ್ಲಿಯ ಆತಿಥ್ಯವೇ ಕ್ಷತಕವೆನಿಸಿತು. "ನಾವಿಬ್ಬರೂ ಆ ಗಂಡನ ಜುಲ್ಮಾನೆ

ಗಳು, ಕಣೋ! ಪಾಪ! ಬಡಿಸುವಾಗ ಆಕೆ ಎಷ್ಟು ನೊಂದುಕೊಳ್ಳುತ್ತಿದಾಳೋ" ಎಂದು ಗುಂಡ ಕೊರಗಿದ. ವಿಳಂಬಾನಂದಸ್ವಾಮಿಗಳ ಹತ್ತಿರ ಅವನು ಹೆಚ್ಚು ಕಾಲವಿಳಂಬ ಮಾಡಹತ್ತಿದ ಮೂರು ನಾಲ್ಕು ತಿಂಗಳ ಅನಂತರ ಅವನು ಎರಡು ಹೊತ್ತೂ ಸಂಧ್ಯಾವಂದನೆ ಮಾಡತೊಡಗಿದ, ಶನಿವಾರ ಸಂಜೆ ಹನುಮಂತರಾಯನ ಗುಡಿಗೆ ಹೋಗುವುದನ್ನು ಅಭ್ಯಾಸಮಾಡಿದ, ಕೋಣೆಯೊಳಗೆಲ್ಲ ದೇವರ ಪಟಗಳು ಬಂದು ಗೋಡೆಗೊರಗಿಕೊಂಡುವು ನಾನು ಅಕ್ಕರೆಯಿಂದ ಯೂನಿರ್ಯ್ಸ ರೀಡಿಂಗ್ ರೂಮಿಂದ ಹರಿದು ತಂದು ಕಟ್ಟುಹಾಕಿಸಿ ಗೋಡೆಗೆ ತಗುಲಿಸಿದ್ದ ಸಿನಿಮಾ ತಾರೆಯ ಚಿತ್ರವನ್ನು ಒಂದು ದಿನ ಗುಂಡ ಕೈಗೆ ತೆಗಿದು "ಚಂದು! ಧೂಳಾಗುತ್ತೆ! ಗೋಡೆಗೆ ತಿರುಗಿಸಿಡುತ್ತೇನೆ" ಅಂದ ನಾನು ನಿಟ್ಟುಸಿರುಬಿಟ್ಟೆ ಬೇಡ ಅನ್ನಲಿಲ್ಲ, ತರುಣ ಸಾಹಿತ್ಯಮಾಲೆಯ ಪುಸ್ತಕಗಳನ್ನು ತಂದೋದಲು ಪ್ರಾರಂಭ ಮಾಡಿದ, ವಚನಗಳನ್ನೋದಿದ... 'ರಾಮದಾಸರ ಕಡೆ ಒಲಿದ, ರಾಮಕೃಷ್ಣ ಅಂದ! 'ಶಾಂತಮುಲೀಕ' ಹಾಡಿದ ಕಡೆಗೆ ಒಂದು ದಿನ ಸಾಕ್ಷಾತ್ ಭಗವದ್ಗೀತಯನ್ನೇ ತಂದ. ಮೂಗಿನ ತುದಿಯನ್ನೇ ನೋಡುತ್ತ ಕುಳಿತ!. . ನಾನು 'ಉಸ್ಸಪ್ಪ' ಅಂದೆ.

ಅಷ್ಟು ಹೊತ್ತಿಗೆ ಸರಿಯಾಗಿ ಲಗ್ನದ ಕಾಲ ಮೊದಲಾಯಿತು. ವಧಾನ್ವೇಷಣಕ್ಕಾಗಿ ನೂರಾರುಜನ ಪಿತೃಗಳು ನಮ್ಮ ಕಾಲೇಜ ಬಾಗಿಲಲ್ಲಿ ನಮ್ಮಂಥ ವಾರಾನ್ವೇಷಕರಿಗಾಗಿ ಕಾದು ಕೂತುಕೊಂಡರು ಗುಂಡನಿಗೆ ವೈರಾಗ್ಯ ನೆತ್ತಿಗೇರಿದ್ದರಿಂದ ಅವನು ಯಾರಿಗೂ ಗೋತ್ರ ತಿಳಿಸಲಿಲ್ಲ, ತಂದೆಯ ವಿಳಾಸವನ್ನೂ ಮರೆಮಾಚಿದ. ನಾನು ಅಷ್ಟು ಕಠೋರ ಹೃದಯನಾಗಿರಲಿಲ್ಲ ತಪ್ಪು ವಿಳಾಸ ಕೊಟ್ಟೆ.. .....ಗುಂಡನ ತಂದೆಯವರೂ ಕೂಡ ತಾವು ಯಾರು ಯಾರಿಗೋ ಜಾತಕ ಕೊಟ್ಟಿರುವುದಾಗಿ ಪತ್ರ ಬರೆದರು. ಅವುಗಳಿಗೆಲ್ಲ ಗುಂಡ 'ನ' ಕಾರವನ್ನೇ ಹೇಳಿದ. ಅವನ ಊರಿನಲ್ಲಿ ಅಧಿಕಾರಿಗಳಾಗಿದ್ದ ಯಾರೋ ಒಬ್ಬರು.... ನಾರಣಯ್ಯನೇ, ಹೂಂ, ನಾರಣಯ್ಯ, ಎಂಬವರೂ ಕೂಡ ತಮ್ಮ ಸ್ನೇಹಿತರ ಪರವಾಗಿ ಆಗಾಗ ಕಾಗದ ಬರೆಯುವರು.. .ಈಗ ಅವರಿಗೆ ವರ್ಗವಾಗಿದೆಯೇನು? ಆಗಿದೆ ಅಂತ ನನಗೆ ತಿಳಿಯದು.....ಗುಂಡನಿಗೆ ಕೆಲಸ ಕೊಟ್ಟದ್ದು ನಾರಣಯ್ಯನವರೋ? ಬಹಳ ಸಂತೋಷ. ಹಾಗಾದರೆ ಅವರು ತುಂಬಾ ದೊಡ್ಡ

ಮನುಷ್ಯರಿರಬೇಕು. ಅವರ ಪತ್ರಗಳಿಗೆ ಉತ್ತರ ಕಳುಹಿಸದಿದ್ದರೂ, ಅದನ್ನ ಮನಸ್ಸಿಗೆ ತಂದುಕೊಳ್ಳದೆ... .. ....ಇರಲಿ! ಎಲ್ಲಿಗೋ ಹೊರಟು ಬಿಟ್ಟಿತು. ನನ್ನ ಮಾತು. ಮದುವೆ ವಿಷಯದಲ್ಲಿ ನನಗೂ ಅವನಿಗೂ ಎಷ್ಟು ಬಿಸಿ ಬಿಸಿ ಚರ್ಚೆ ನಡೆದಿದೆ, ಅಂತೀರಿ ಈಗ ನೋಡಬೇಕು, ನಾನು ಗುಂಡನನ್ನ! "ಏನಯ್ಯಾ! ಸಂಕೋಲೆ, ಸೆರೆಮನೆ! ಸಂಕಟ! ಅಂತ ಒದರುತ್ತಿದ್ದಿಯಲ್ಲಾ ಈಗ. . . . ಹೇಗಿದೆ?" ಅಂತ ಅವನ ಬೆನ್ನಿಗೊಂದು ಬಲವಾಗಿ ಬಾರಿಸ. ಬೇಕು, ಅನಿಸುತ್ತಿದೆ!

ಸಂನ್ಯಾಸ ಅನ್ನುವುದು ದೈವೇಚ್ಛೆಗೆ ವಿರೋಧ, ಅಂತ ನಾನು! ಎಲ್ಲರೂ ಸಂನ್ಯಾಸ ತೆಗಿದುಕೊಂಡು ಮಾನವ ಕುಲವೇ ನಶಿಸಿ ಹೋದರೆ ಆಗ ಜಗತ್ತಿಗೆ ಕಲ್ಯಾಣ, ಅಂತ ಅವನು! "ವಿಶ್ವಾಮಿತ್ರ" ಅಂತ ನಾನು; ವಿವೇಕಾನಂದ ಅಂತ ಅವನು! ಗಾಂಧಿ ಅಂತ ನಾನು, ಏಸು ಅಂತ ಅವನು!. . .

ವಿಳಂಬಾನಂದರ ಹತ್ತಿರ ಕೂತು ಒಂದು ದಿನ ಇಬ್ಬರೂ ಬಹಳ ಹೊತ್ತು ಚರ್ಚೆ ಮಾಡಿದೆವು ಅವರು, "ಮದುವೆ ಮಾಡಿಕೊಂಡು ಗ್ರಹಸ್ಥನಾಗಿರೊದೇ ಸರಿ! ಆದರೆ ತಾಳಿ!" ಅಂದರು "ತಾಳಿದವನು ಬಾಳಿಯಾನು" ಅಂದರು ಕ್ಲಿಷ್ಟರಾಯರನ್ನು ಕೇಳಿದೆವು ಅವರು, "ಮಾಡಿಕೊಳ್ಳಿ, ಅಗತ್ಯವಾಗಿ ಮಾಡಿಕೊಳ್ಳಿ ಆದರೆ, ರೂಪಲಾವಣ್ಯಕ್ಕಿಂತ, ರೂಪಾಯಿ ಲಾವಣ್ಯಕ್ಕಿಂತ, ದೃಢಕಾಯರಾದವರನ್ನು ವರಿಸಿ ಮನೆಯನ್ನ ಆಸ್ಪತ್ರೆ ಮಾಡಿಕೊಳ್ಳಬೇಡಿ" ಅಂದರು ಆ ಇನ್ನೊಬ್ಬರಂತೂ, "ಚೆನ್ನಾಯಿತು! ಚೆನ್ನಾಯಿತು! ಅನುಮಾನ ಯಾಕೆ? ಲೇ! ಆ ಹುಳಿ ಇನ್ನೊಂದಿಷ್ಟು ಬಡಿಸು! ನಾಳೆ ಬೆಂಡೆಕಾಯಿ ಮಜ್ಜಿಗೆ ಹುಳಿ ಮಾಡಿಯೇ ತೀರಬೇಕು" ಅಂದರು.

ಬಿ ಎ ಪರೀಕ್ಷೆ ಮುಗಿಸಿ ಗುಂಡಪ್ಪ ಇಲ್ಲಿಂದ ಹೊರಟಾಗ, ನಾನು ಕೇಳಿದೆ ಅವನನ್ನ "ದೈವೇಚ್ಛೆ ಹೇಗೋ ಹಾಗಾಗಲಿ! ಕ್ಲಿಷ್ಟರಾಯರು ಹೇಳಿದ ಹಾಗೆ ಗಾತ್ರ ದೃಢವಾಗಿದ್ದು, ಗೋತ್ರ ಬೇರೆಯಾಗಿದ್ದರೆ, ಹುಂ ಅಂದು ಬಿಡುತ್ತೇನೆ. ಈ ಜಗತ್ತು ಪ್ರಳಯ ಕಾಲದವರೆಗೂ ನಡೆಯಬೇಕೆಂಬುದೇ ಪರಮಾತ್ಮನ ಸಂಕಲ್ಪ . . ಆದ್ದರಿಂದ ನಾನು ಹಿಂಜರಿಯುವುದಿಲ್ಲ" ಅಂದ. ಸರಿ! ನೀವು ಹೇಳುವ ಹಾಗೆ, ಈಗ ಗುಂಡಪ್ಪ ಸಂಸಾರಿಯಾಗಿದ್ದಾನಲ್ಲಾ—

ನಾನೊಂದು ಸಲ ಬರುತ್ತೇನೆ ಆ ಊರಿಗೆ!.. . ಹೇಳಿ, ಸಾರ್, ಗುಂಡಪ್ಪನಿಗೆ! ಚಂಮು, ಅಂದರೆ ಪತ್ತೆ ಹಚ್ಚುತ್ತಾನೆ ಬಿ ಎ. ದಲ್ಲಿ ಎರಡು ಸಲ ಹೋಯಿತಂತೆ.... " ಹಣಾ-ಹಣಿ " ಪೇಪರಲ್ಲಿದಾನಂತೆ....ಅಂತ ಹೇಳಿರಿ....

## ಗೆಳೆಯನ ಪ್ರಸಾರ ಮುಗಿಯಿತು

---

ರಾಲಂಃ ಮಾಗಲಾ ಪಟ್ಟಣದ ಮನುಜರ್ಗೆ ಕಾರುಣ್ಯಕೆಡೆಯಾದನು

—ಲಕ್ಷ್ಮೀಶ

ತಿರುವು ಮುರುವುಗಳಿರುವುದೇನು ಚಂದ ?

—ಶ್ರೀ ಪರಮೇಶ್ವರ

ನಯನಂಗಳ್ ಕರುಣಾರಸಾರ್ದ್ರಮಧುರಂಗಳ್ ಮಾತುಗಳ್ ತತ್ವನಿ
ಶ್ಚಯ ದೀಕ್ಷಾ ಗುರುಗಳ್ ವಿಶುದ್ಧಚರಿತಂಗಳ್ .

—ದೇವನೂರು ಶಿಲಾ ಶಾಸನ

# ೬ : ಮಾಯಾಮಾನವಗೌಳ

ನೀವು ಇದನ್ನೆಲ್ಲ ಬರೆದು ಪ್ರಕಟಿಸುತ್ತೀರೇನು? ಹಾಗಾದರೆ, ತಾಳಿ! ಕೊಂಚ ಗಂಭೀರವಾಗಿಯೇ ಮಾತನಾಡುತ್ತೇನೆ .. . . ಗುಂಡಪ್ಪ ಎಂಬ ತರುಣನ ಚರಿತ್ರವನ್ನು ಕುರಿತು ನಮ್ಮನ್ನು ಕೇಳಲಾಗಿದೆ ನಾವು ಅದನ್ನು ಬಹು ಸಂತೋಷದಿಂದಲೂ ಸಂಪೂರ್ಣ ಜ್ಞಾಪಕದಿಂದಲೂ ತಮಗೆ ಅರುಹಲು ಸಿದ್ಧರಿದ್ದೇವೆ ನಾವು ಈ ಕಲ್ಯಾಣಪುರಿಯನ್ನು ಪ್ರವೇಶ ಮಾಡಿದ್ದು ಈ ದೇಹದ ನೈದ್ಧಾಸ್ಯದೆಸೆಯಲ್ಲೇ ಇದಕ್ಕೆ ಮುಂಚೆ ಈ ಮೃತ್ ಪಿಂಡವು ಗೋಳಿನಕಂಡದಲ್ಲಿತ್ತು ಅಲ್ಲಿಂದ ಇದನ್ನು ಭಕ್ತರ ಕೋರಿಕೆಯ ಮೇರೆ ಲಾರಿಯ ಮೂಲಕ ಇಲ್ಲಿಗೆ ಸಾಗಿಸಲಾಯಿತು . ಬರೆದುಕೊಂಡಿರಾ? ... ನಮ್ಮ ಭೂಲೋಕಯಾತ್ರೆ ಹೇವಿಳಂಬಿ ನಾಮಸಂವತ್ಸರದಲ್ಲಾರಂಭ ವಾಯಿತು ಎಂಬುದು ಪ್ರತೀತಿ ಅವತಾರ ಮಾಡಿದ ಕೂಡಲೇ ಸ್ತ್ರೀಶಿಶು ಎಂಬ ಭ್ರಮೆಯಿಂದ "ಹೇ! ವಿಳಂಬಿ" ಎಂದು ನಮ್ಮನ್ನು ಸಂಬೋಧನ ಮಾಡಲಾ ಯಿತು ಆಗ ನಾವೇ, ಕೇವಲ ಶಿಶುವಾಗಿದ್ದರೂ ಕೂಡ "ಬೋಲೋಮತ್! ಲಡಕಾ ಹೈ" ಎಂದು ಕಂಠೋಕ್ತ ತಿಳಿಸಿ ಸತ್ಯಾಂಶವನ್ನು ಸಾರಿ ಮಾನ ಸಂರಕ್ಷಣೆ ಮಾಡಿಕೊಂಡೆವೆಂದು ಭಕ್ತರು ಹೇಳುತ್ತಾರೆ "ಹೇ! ವಿಳಂಬಿ"ಗೆ ಬದಲಾಗಿ ವಿಳಂಬ ಎಂಬ ನಾಮಧೇಯವನ್ನು, ಪಂಚಭೂತಾತ್ಮಕವಾದ ಈ ಜಂಗಮ ಜನಾರ್ದನನಿಗೆ, ಅವೇ ಭೂತಗಳ ಪ್ರೇರಣೆಯಿಂದ, ಕೊಡಲಾಯಿತು .. .. ಬರೆದಿರಾ?

ಯಾಕೆಂದರೆ ಜನರು ನಮ್ಮ ಹೆಸರು ನೋಡಿ ಬಾಯಿಗೆ ಬಂದ ಹಾಗೆ ಹರಟುತ್ತಿದ್ದಾರೆ ನಿಜಸ್ಥಿತಿ ಒಬ್ಬರಿಗೂ ಗೊತ್ತಿಲ್ಲ ನಾವೂ ನಮ್ಮ ಹೆಸರುಳಿ ಸಿಕೊಳ್ಳಬೇಕು ಅಂತ ಎಲ್ಲದಕ್ಕೂ ಕಾಲವಿಳಂಬ ಮಾಡುತ್ತಾ ಬರುತ್ತಿದೇವೆ. .. ಅದರ ಪರಿಯನ್ನು ವಿವರಿಸುತ್ತೇವೆ ತಾಳಿ.. ...

ಚರ ಅಚರ ಎಂಬ ಎರಡು ಬಗೆಯ ಜೀವರಾಶಿಗಳಲ್ಲೆಲ್ಲ ಜನ್ಮತಾಳಿದ ಮೇಲೆ ಮನುಷ್ಯಜನ್ಮ, ಅದರಲ್ಲೂ ಪುರುಷಜನ್ಮ, ಬರುವುದೆಂದು ಕೀರ್ತನ ಕಾರರಿಂದ ಸಾರಲ್ಪಡುತ್ತಿದೆ ಆದರೆ, ಶುನಕಜನ್ಮದಲ್ಲೂ ಹಲಕೆಲವು ಸಂದರ್ಭಗಳಲ್ಲಿ ಅಶ್ವ, ಗೋವು, ಮಹಿಷ ಮುಂತಾದ ಗೃಹಪ್ರಾಣಿಗಳ ಜನ್ಮ

ದಲ್ಲೂ ನಾಮವನ್ನು ಹಚ್ಚುವುದು ವಾಡಿಕೆ. ಅನಂತರ, ಈ ಸಂಸಾರಚಕ್ರದಲ್ಲಿ ಪರಿಭ್ರಮಣ ಹೊಂದುತ್ತ, ಮಾನವಜೀವಿಯಾಗಿ ಆವಿರ್ಭವಿಸುವ ಸುಯೋಗ ದೊರೆತಾಗ ನಾಮಕರಣ ಎಂಬ ಸಂಸ್ಕಾರವೇ ಸಂಘಟಿತವಾಗುತ್ತದೆ ಹಚ್ಚಿದ ನಾಮವನ್ನು ಉಳಿಸಿ ಬೆಳೆಸಬೇಕೆಂಬ ಭಾವನೆಗೆ ಪೋಷಕವಾಗಿ ಮನೋ ಬುದ್ಧ್ಯಹಂಕಾರಗಳು ಆಗ ನಮಗೆ ಲಭಿಸುವುವು. ನಾಮನಕ್ಷತ್ರಗಳ ಮೂಲಕ ಕೇವಲ ಅನಕ್ಷರಸ್ಥರೂ ಕೂಡ ಜನ್ಮರಾಶಿಯನ್ನು ಊಹಿಸಿ ಭವಿಷ್ಯವನ್ನು ತಿಳಿದುಕೊಳ್ಳುವಾಗ, ನಾಮದಿಂದ ಜೀವನಪಥವನ್ನೇ ನಿಶ್ಚಯಿಸಿ ಬಿಡಬೇಕೆಂಬುದು ನಮ್ಮ ಸಿದ್ಧಾಂತವಾಗಿರುತ್ತದೆ ಪಾಲಿಗೆ ಬಂದ ಪದಾರ್ಥ ದಿಂದಲೇ ಪರಮಾನ್ನವನ್ನ ಸಿದ್ಧಪಡಿಸಿ ಸಂತುಷ್ಟರಾಗಬೇಕು ಎಂಬ ಆಚಾರ್ಯೋಕ್ತಿಯಂತೆ, ವರಾಹಸ್ವಾಮಿಗಳೆಲ್ಲರೂ ಭೂಸಂಶೋಧನೆ ಗಣಿಕೆಲಸ ಮುಂತಾದವುಗಳಲ್ಲೂ, ಹುಚ್ಚುರಾಯರೆಲ್ಲ ಕವಿತಾರಚನೆಯಲ್ಲೂ, ನರಸಿಂಹರೆಲ್ಲರೂ ವಿಸ್ತರದುಪನ್ಯಾಸದಲ್ಲೂ, ರಾಮಚಂದ್ರರೆಲ್ಲರೂ ಅರಣ್ಯಸಂಚಾರ ದಲ್ಲೂ ತೊಡಗಬೇಕಾದದ್ದೇ ತತ್ತ್ವ ವರದರಾಜರೆಲ್ಲ ವರಾನ್ವೇಷಣದ ಕವಿಮರ್ಷ ಪಡೆಯಬೇಕಾದದ್ದೇ ನ್ಯಾಯ

ಅರ್ಥವಾಯಿತೆ ನಾನು ಹೇಳುವುದು ? ನಮಗೆ ನಂಟರನ್ನು ನಮ್ಮನ್ನು ವಿಚಾರಿಸಿದೆಯೇ ದೇವರು ಒದಗಿಸುವ ಹಾಗೆ ನಮ್ಮ ಹೆಸರುಗಳನ್ನೂ ನಮಗೆ ನಮ್ಮ ಅಪ್ಪಣೆಯಿಲ್ಲದೆ ಅಂಟಿಸುತ್ತಾರೆ ನಂಟರೊಂದಿಗೆ ಹೆಣಗಾಡಿ ಬದುಕುವ ಹಾಗೆ ನಾವು ಹೆಸರನ್ನೂ ಸಾರ್ಥಕಮಾಡಿ ಬದುಕಬೇಕು

ಅರ್ಥಾತ್, ಅಹಂ ಎಂಬ ಈ ಜೀವಿ `ಅನ್ನದಾನಾದಿ ಧರ್ಮಕಾರ್ಯಗಳೊಂದಿಗೆ ವಿಳಂಬಸೂತ್ರವನ್ನೂ ಸಹ ಯತ್‌ಕಿಂಚಿತ್ ಆಚರಣೆಗೆ ತಂದು ಅಂತ್ಯಕಾಲವನ್ನೂ ಕೂಡ ವಿಳಂಬಿಸಲು ಪ್ರಯತ್ನ ಮಾಡುತ್ತಿದೆ. ವರ್ಚಸ್ವಿಯಾದ ವಟುಗಳಿಗೆ ಪಾಕಶೇಷವನ್ನು ವಿತರಣ ಮಾಡುವುದೇ ನಮ್ಮದೊಂದು ವ್ರತ.

ಆದರೆ, ನನಗೇನು ತ್ರಾಸವಿಲ್ಲ. ಭಕ್ತರು ತಂದುಹಾಕುತ್ತಾರೆ, ತಾವು ಗಳಿಸಿ ಉಳಿಸಿದ್ದನ್ನ ! ನಾನು ಒಬ್ಬ ಭಕ್ತನಿಗೂ ಇನ್ನೊಬ್ಬನಿಗೂ ಪೈಪೋಟಿ ತಂದುಹಾಕುತ್ತಿದ್ದರೆ ಸಾಕು !. . ಅಡಿಗೆ ಮಾಡುವುದು ಕೂಡ ಸುಲಭ. ನಿನ್ನೆಯ ಅಡಿಗೆ ಇವತ್ತು ಪೂರೈಸಿದರೆ ಸಾಕು !

ನಿಮ್ಮ ಸ್ನೇಹಿತರಿಗೆ ನಾರಕ್ಕೊಂದುದಿನ ಅನ್ನಾದಿಗಳನ್ನು ನೀಡುವುದು ನನಗೆ ಬಹಳಮಟ್ಟಿಗೆ ಆನಂದದಾಯಕವಾಗಿತ್ತು ಈಗ ಅವರಿಬ್ಬರೂ ತಮ್ಮ ತಮ್ಮ ಮಾತಾಪಿತೃಗಳೊಂದಿಗೆ ಸ್ವಸ್ಥಮಾನಸರಾಗಿ ದಿನಗಳಂ ನೂಕುತ್ತಿರುವರೆಂದು ಕೇಳಿ ನಮಗೆ ಅತ್ಯಂತ ಆಪ್ಯಾಯಮಾನವಾಯಿತು ಗಂಡಪ್ಪಃ ಹಾಗೂ ಚಂದ್ರಶೇಖರ ಎಂಬ ಬ್ರಹ್ಮಚಾರಿಗಳು ನಮ್ಮ ದೃಷ್ಟಿಪಥದಲ್ಲಿ ಬಿದ್ದ ರಾತ್ರಿ ಅವರೊಂದಿಗೆ ನಾವು ಅಲ್ಪಸ್ವಲ್ಪ ಕಾಲ ವಿಚಾರವಿನಿಮಯ ಮಾಡಿದೆವು ಆಗಲೇ ನಮಗೆ ಅವರ ಅಂತಃಕರಣದ ಅಧಿದೇವತೆಗಳು ಯಾರೆಂಬುದು ವೇದ್ಯವಾಯಿತು ಗಂಡಪ್ಪಃ ಉತ್ತಮವಾದ ಯೋಗಜೀವಿ ಶೀತೋಷ್ಣಗಳಲ್ಲೂ ಸುಖದುಃಖಗಳಲ್ಲೂ ಏಕಪ್ರಕಾರವಾಗಿ ಕಲ್ಲುಗುಂಡಿನಂತೆ ನಿಲ್ಲಬಲ್ಲವನು ಗುಂಡಿಗೆ ಯಸ್ಯ ಬಲವಾ೯, ಸಃ ಗುಂಡಪ್ಪಃ ಆದರೆ, ಚಂದ್ರಶೇಖರ, ತದ್ವಿಪರೀತವಾಗಿ ಭೋಗಜೀವಿ ಕೌಮುದಿಗೆ ಕುತೂಹಲಿಸುವ ಸ್ವಭಾವ ಬೆಳುದಿಂಗಳು ಬಾನುಲಿ ಬಾತ್ಮಿ ಮುಂತಾದ ಕಲ್ಪನಾಪ್ರಪಂಚದಲ್ಲೇ ಕವಿಗಳ ಲೋಕದಲ್ಲೇ ಸಂಚರಿಸುವ ಬುದ್ಧಿ ಆದರೆ, ಯೋಗ ಭೋಗ ಸಾಮರಸ್ಯವೇ ಅತ್ಯುತ್ತಮವಾದ ಹಾದಿ ಎಂಬ ಸಂಕಲ್ಪದಿಂದ ನಾವು ಅವರಿಬ್ಬರನ್ನೂ ಅಂದಿನಿಂದ ಪ್ರತಿ ಭಾನುವಾರ ಚರ್ವಣ ಮಾಡುವಾಗಲೂ ಅನಂತರವೂ ನಮ್ಮ ಪದತಲದಲ್ಲೇ ಕುಳ್ಳಿರಿಸಿ ಗುಂಡಪ್ಪಃ ಎಂಬ ವಟುವಿಗೆ ಯೋಗಮಿಶ್ರವಾದ ಭೋಗವನ್ನೂ ಚಂದ್ರಶೇಖರನಿಗೆ ಭೋಗಮಿಶ್ರವಾದ ಯೋಗವನ್ನೂ ಉಪದೇಶ ಮಾಡುತ್ತಿದ್ದೆವು.. ...

ಏನು?. ಸಾಮಾನ್ಯ ಮನುಷ್ಯರು ಮಾತನಾಡುವ ರೀತಿಯಲ್ಲಿ ಹೇಳಿದರೆ ಸಾಕೆ? ಬರೆದುಕೊಳ್ಳುವುದು ಕಷ್ಟವೆ? ಗಡುಸಾದರೆ ಓದುವವರಿಗೆ ತ್ರಾಸವೆ? ಆಗಬಹುದು ಅದಕ್ಕೇನು? ಆದರೆ, ನಿಮ್ಮ ಕೋರಿಕೆಯ ಮೇಲೆ ಮಾತ್ರ ನಾವು ಹೀಗೆ ಅನುಗ್ರಹಮಾಡಿದೆವು ಎಂಬುದನ್ನೂ ನಿಮ್ಮ ವಾಚಕ ವೃಂದಕ್ಕೆ ತಿಳಿಸಿಬಿಡಿ, ಸಾಕು .

ಬನ್ನಿ! ಇಲ್ಲೇ ಬನ್ನಿ! ಈ ಚಾಪೆಯಮೇಲೆ ಕೂತುಕೊಳ್ಳಿ. ನಾನು ಹೇಳಿದ ಪವಾಡಗಿವಾಡ ಎಲ್ಲಾನೂ ಮರೆತುಬಿಡಿ ಗುಂಡಪ್ಪನದು ಒಳ್ಳೆಯ ಗುಣ; ಹುಡುಗ ಬುದ್ಧಿವಂತ ತಾಳ್ಮೆ ಇದೆ ಆದರೂ, ನನ್ನ ಪರಿಚಯದ ಎರಡು ವರ್ಷಗಳಲ್ಲಿ ಅವ್ನನು ಸದಾ ಬದುಕಿನಲ್ಲಿರುವ ಬೇನೆಗಳನ್ನೇ ಮನ

ಸ್ಸಿಗೆ ತಂದುಕೊಂಡು ಪೇಚಾಡುತ್ತಿದ್ದ. ಅಂತು ಭಾನುವಾರ ಮರಕ್ಕೆ ಬಂದಾಗ ನನಗೆ ಅವನು ಇಡೀ ವಾರದ ಅನುಭವಗಳನ್ನೆಲ್ಲ ವರದಿ ಮಾಡುವನು ನಿಮ್ಮ ಗುಂಡಪ್ಪ ಕೊಂಚ ನಾಶವಾದಿ! ಅವನ ಜೊತೆಯವ ಚಂದ್ರಶೇಖರ ಕೊಂಚ ಆಶಾವಾದಿ! ಮಣೆ ಮೇಲೆ ಕೂರಿಸಿ ಇಂಥ ಅನ್ನ ಸಾರು ಬಡಿಸುತ್ತಾರಲ್ಲಾ! ಬೆಂಚಿನ ಮೇಲೆ ಕೂರಿಸಿ, ಇಂಥ ಪಾಠ ಹೇಳಿಕೊಡುತ್ತಿದಾರಲ್ಲಾ!" ಅಂತಾನೆ, ಗಂಡಪ್ಪ ಆದರೆ, ಚಂದ್ರಶೇಖರ, "ಇಂಥ ಊಟ ಹಾಕಿದರೂ, ಮಣೆ ಕೊಟ್ಟು ಉಪಚಾರ ಮಾಡುತ್ತಾರಲ್ಲಾ! ಇಂಥ ಪಾಠ ಕಲಿತದ್ದಕ್ಕೂ ಡಿಗ್ರಿ ಕೊಡುತ್ತಾರಲ್ಲಾ!" ಅಂತ ಸಂತೋಷಪಡುವನು ಗುಂಡಪ್ಪ ಬರಬರುತ್ತ ಸಿಡುಕನಾದ, ಚಂದು ಸ್ವಲ್ಪ ಸ್ವಲ್ಪವಾಗಿ ಮುಡುಕನಾದ ನಾನು ಅವರಿಬ್ಬರನ್ನೂ ಕ್ರಮೇಣ ತಿದ್ದುವ ಕೆಲಸದಲ್ಲಿ ತೊಡಗಿದೆ

ಸಾಮಾನ್ಯವಾಗಿ ಬೆಂಗಳೂರಿಗೆ ಬರುವ ಬಡಹುಡುಗರೆಲ್ಲರೂ ಬಹಳ ಬೇಗ ಬೇಸರಗೊಳ್ಳುತ್ತಾರೆ ಇದು ವಿಲಾಸಪುರಿ ಇಲ್ಲಿಯ ನೂರಾರು ಶ್ರೀವಂತ ಪುತ್ರರ ನಡುವೆ, ಅವರ ಬೆಡಗು ಬಿನ್ನಾಣಗಳ ಬಿಸಿಲಿನಲ್ಲಿ ಬಡವರು ಬಳಲಿ ಬಾಡುತ್ತಾರೆ ಸ್ನೇಹಿತರ ಮಾತೆಲ್ಲ ಮೂವೀ ವಿಷಯಗಳು, ಅವರ ನೋಟವೆಲ್ಲ ನಕ್ಷತ್ರಗಳಕಡೆ, ಅವರ ಹಾಡೆಲ್ಲ ಹಿಂದಿ ಹೀಗಾಗಿ ಮಾರಾನ್ನದಿಂದ ಬದುಕುವವರು ಕೇವಲ ಅಂತ್ಯಜರಂತಾಗುತ್ತಾರೆ ಮಾನವ ಸಮಾಜದ ಅಲಕ್ಷ್ಯ, ಧೂರ್ತತನ, ಕ್ರೌರ್ಯ, ಇವುಗಳು ಅವರನ್ನು ಪದೇ ಪದೇ ಚುಚ್ಚಿ ನೋಯಿಸುತ್ತವೆ. "ಡಾನಿಗಲ್ ವಿಪ್‌ಕಾರ್ಡ್ ಮುಂತಾದ ಹೆಚ್ಚು ಖರ್ಚಿನ ಸೂಟುಗಳು, ಕೈರಾಟಿಯ ಕೈಮಗ್ಗದ ವೆಸ್ಟುಗಳ ಪಕ್ಕದಲ್ಲಿ ಸುಳಿಯುವುದೇ ಇಲ್ಲ, ಸ್ವಾಮಿಜಿ! (ಎಂಜಿನ್ ಡ್ರೈವರುಗಳಿಗಾದರೆ ಸದಾ ಕೈಯಲ್ಲಿ ಗಡಿಯಾರ ಇರಬೇಕಾದದ್ದು ..ಆದರೆ,) ಹೊತ್ತು ಗೊತ್ತಿಗೆ ಯಾವುದನ್ನೂ ನಡೆಸಬೇಕಾದ ಪ್ರಮೇಯವೂ ಉತ್ಸಾಹವೂ ಇಲ್ಲದಿದ್ದರೂ, ಗಡಿಯಾರವನ್ನು ಧರಿಸಿರುವವರು ಬರೀಕೈಯವರ ಕೂಡ ಮಾತನಾಡಲು ಅಸಹ್ಯಪಟ್ಟುಕೊಳ್ಳುತ್ತಾರೆ, ಸ್ವಾಮಿಜಿ! . . ನಾನು ಒಬ್ಬರು ಮೇಷ್ಟರನ್ನು ಕೇಳಿದೆ ಅವರು ಹೇಳಿದರು... . ಮನುಷ್ಯನಲ್ಲಿ ಸುಪ್ತಚೇತನ ಗುಪ್ತಚೇತನ ಎಂಬ ಎರಡು ಬಗೆಯ ಅಜ್ಞಾತ ಚೇತನಗಳಿವೆ ಅವೇ ಅವನ ಕೆಲಸ ಕಾರ್ಯಗಳನ್ನು ಬಹಳವಾಗಿ ನಡೆಯಿಸುವುವು. ಬಡವರಾದ ತಮ್ಮ ಸಹಜೀವಿ

ಗಳನ್ನು ತಿವಿದು ಮೊದಲಿಸಿ ನೋಯಿಸುವದರಿಂದ ಶ್ರೀಮಂತರ ಗುಪ್ತ ಹಾಗೂ ಸುಪ್ತ ಅಂತಃಕರಣದಲ್ಲಿ ಒಂದು ರೀತಿಯ ಆನಂದಲಹರಿ ಉಂಟಾಗುತ್ತದೆ, ಅಂದರು ಅವರಲ್ಲೂ, ಸ್ವಾಮಿ ಜಿ! ಬೇಸಿಗೆ ರಜದಲ್ಲಿ ಮದುವೆಯಾಗಿ ನಶ್ಯದ ಬಣ್ಣದ ಹೊಸ ಉಲ್ಲನ್ ಅಂಗಿ ತೊಟ್ಟವರ ವರಹಂಕಾರವಂತೂ ತುಂಬಾ ಅಸಹ್ಯ ಅವರು ಶ್ರೀಮಂತರ ಗುಂಪಿಗೆ ಸೇರುವಹಾಗಿಲ್ಲ; ಏಕೆಂದರೆ ಅದೊಂದೇ ಅವರ ಭಾಗ್ಯದ ಗುರುತು- ನಮ್ಮ ಸಹವಾಸವೂ ಅವರಿಗೆ ಬೇಕಿಲ್ಲ. ಹೀಗಾಗಿ, ಅಂಥವರೇ ಒಂದು ತಂಡ ಮಾಡಿಕೊಂಡು ಆದಷ್ಟು ಹೆಚ್ಚು ಕಾಲ ತಮ್ಮ ನಶ್ಯದ ಬಣ್ಣವನ್ನು ಮಾಸದೆ ಕಾಪುಡಲು ಪ್ರಯತ್ನ ಪಡುತ್ತಾರೆ ಅವರು ಒರಗದೆ ಕೂರುವರು, ಕುಂಗದಕ್ಕ ಕೈ ತಾಕದೆ ಬರೆಯುವರು ಬಸ್ಸಿನಲ್ಲಿ ಸಂಚಾರ ಮಾಡುವಾಗ ಅಂಗಿ ಕಳಚಿ ಮಡಿಲಲ್ಲಿ ಮಡಿಸಿಟ್ಟುಕೊಳ್ಳುವರು ಗಾಳಿ ಸಂಚಾರಕ್ಕೆ ಹೋಗುವಾಗ ಕಿಸೆಗೆ ಕೈ ತುರುಕುವುದೇ ಇಲ್ಲ! ಹರಿದು ಹೋದರೆ ಗತಿ? ರಾತ್ರಿಕಾಲ ರೈಲು ಪ್ರಯಾಣ ಮಾಡಿದರೆ ಕಿಟಕಿಯ ಹತ್ತಿರ ಕೂತು ಕೊಳ್ಳುವುದಿಲ್ಲ ನಡುವಣ ಬೆಂಚಿನ ಮೇಲೆಯೇ ಪವಡಿಸುತ್ತಾರೆ ಕಿಡಿ ಹಾರಿ ಅಂಗಿ ತೂತು ಬಿದ್ದೀತು ಎಂಬ ಭಯ ಹಗಲು ಹೊತ್ತೂ ಕಿಡಿ ಹಾರುತ್ತೆ, ಎಂಬ ಅರಿವೇ ಇಲ್ಲ ಅವರಿಗೆ ಪ್ರತ್ಯಕ್ಷವೇ ಪ್ರಮಾಣ" ಎಂದು ಮುಂತಾಗಿ ಗುಂಡಪ್ಪನು ತನ್ನ ಸಹಪಾಠಿಗಳನ್ನು ವಿಧವಿಧವಾಗಿ ಅವಹೇಳನ ಮಾಡು ವನು.

ಅಲ್ಲದೆ, ನಿಮ್ಮ ಗಂಡಪ್ಪನಿಗೆ ಕೃತಕವಾದದ್ದು ಯಾವುದೂ ಸರಿ ಬೀಳುತ್ತಿರಲಿಲ್ಲ ಯುವನಾಗರಿಕರು ಕೃತಕ ಸ್ನೇಹದಿಂದ ಕಂಡಕಡೆ ಕೈ ಕೈ ಹಿಸುಕುವುದು, ಬೆನ್ನು ಮೇಲೆ ಬಾರಿಸುವುದು, ಗುಂಪಾಗಿ ಸೇರಿ ಕಷಾಯ ಹೀರುವುದು, ಹೊಗೆ ಉಗುಳುವುದು ಇವೆಲ್ಲವೂ ಅವನಿಗೆ ಸುತರಾಂ ರುಚಿಸಲೇ ಇಲ್ಲ ಕ್ಲಿಷ್ಟರಾಯರು ಎಷ್ಟೇ ಕಷ್ಟ ಕೊಟ್ಟರೂ ಅವರ ತೆರದೆದೆಗಾಗಿ ಅವನು ಅವರನ್ನು ಕೊಂಡಾಡಿದ. ಹಾಗೆಯೇ ಆ ಇನ್ನೊಬ್ಬರನ್ನೂ ಕೂಡ. ತಾವು ತಮ್ಮ ಪಂಕ್ತಿಗೆ ಇಬ್ಬರು ಹೊಸಬರನ್ನು ಸೇರಿಸಿಕೊಂಡಿದ್ದು ತಮ್ಮ ಅನುಕೂಲ ಕ್ಕಾಗಿ ಮಾತ್ರ, ಎಂಬುದನ್ನು ಅವರು ತಮ್ಮ ಸ್ನೇಹಿತರಿಗೆಲ್ಲ ತುಂಬುಗಂಟ ಲಿಂದ ಸಾರಿದರಂತೆ! ಅಂಥ ಸಹಜತೆ ಗುಂಡಪ್ಪನಲ್ಲೂ ಇತ್ತು. ಪೋಲಿ ಮಾಲು ಗಳು ಇಮಿಟೇಷನ್ ಪದಾರ್ಥಗಳು ಮಿಲ್ ಖದ್ದರ್ ಬಣ್ಣದಮಿಠಾಸೆ ಪುರಿಸ್ ಚಿನ್ನ

ಪೌಡರ್ ಮುಖ ಇವುಗಳನ್ನೆಲ್ಲ ಅವನು ಹೀಯಾಳಿಸುತ್ತಿದ್ದ. "ನಿಮಗೆ ನನ್ನ ಮುಖ ತೋರಿಸಲು ನಾಚಿಕೆಯಾಗುತ್ತಿದೆ, ಆದ್ದರಿಂದ, ಇಕೊ! ಬೇರೊಂದನ್ನು ಸಿದ್ಧಮಾಡಿದ್ದೇನೆ ಇದರಲ್ಲಿ ನಾನಿಲ್ಲವೇ ಇಲ್ಲ!" ಎಂಬ ಮೋಸವಿದೆ ಆ ಮನೋಭಾವದಲ್ಲಿ ಅಂತ ಅವನು ವಾದಿಸಿ ನನ್ನನ್ನೂ ಒಪ್ಪಿಸಿಬಿಟ್ಟ. ಚಂದ್ರ ಮಾತ್ರ "ಕೆಲವು ಮುಖಗಳಿಗೆ ಪೌಡರ್ ಬೇಕೇ ಬೇಕು" ಎಂದು ಪಿಸುಗುಟ್ಟಿದ.

ಈಗ ಗುಂಡಪ್ಪ ಎಲ್ಲೋ ಆಫೀಸಿನಲ್ಲಿ ಹೆಡ್‌ಗುಮಾಸ್ತೆಯಾಗಿ ಕೆಲಸ ಮಾಡುತ್ತಿದಾನೆ ಅಂತೀರಿ. ನೀವು ಹೇಳದೆಯೇ ನನಗೆ ಗೊತ್ತುಂಟು, ಅವನು ನಿಸ್ಪೃಹನಾಗಿ ನಿರ್ಲಂಚನಾಗಿ ಚಾಕರಿ ನೋಡಿಕೊಳ್ಳುತ್ತಾನೆ, ಅಂತ ಅಂಥವರು 'ಬಕಮಧ್ಯೆ ಪಿಕೋ ಯಥಾ" ಅಂತ ತಾನೆ, ಎಂದು ನೀವು ಕೇಳಬಹುದು. ಆದರೂ, ಸತ್ಯಕ್ಕೆ ಯಾವತ್ತೂ ಸೋಲಿಲ್ಲ

ಕಂಟೋರ್ನ್ಮೆಂಟಿಂದ ಬರುವ ಹಲ ಕೆಲವರು ಭಕ್ತರಿಗಾಗಿ, ಹುಟ್ಟಿದಾಗಲೇ ಹಿಂದಿ ಮಾತಾಡಿದ ಕಥೆ, ಊಟಕ್ಕೆ ನಿಧಾನ ಎಂಬ ತಪಸ್ಸು, ರಾಮೇಶ್ವರದಲ್ಲಿ ಒಂದೇ ಶೀನಿನಿಂದ ಸಹಸ್ರಾರು ಮರಳು ಗುಡ್ಡೆಗಳನ್ನ ಸಮುದ್ರಕ್ಕೆ ಹಾರಿಸಿದ ಪವಾಡ, ಇವುಗಳನ್ನೆಲ್ಲ ನನ್ನ ಭಕ್ತರು ಪ್ರಚಾರ ಮಾಡುತ್ತಿರುವರೇ ಹೊರತು ನಾನು ನಿಮ್ಮ ಗುಂಡಪ್ಪನಿಗೂ ಅವನ ಸ್ನೇಹಿತನಿಗೂ ಮೊದಲಿಂದಲೂ "ಸತ್ಯವ್ರತರಾಗಿರಿ" ಅಂತಲೇ ಬೋಧನೆ ಮಾಡುತ್ತಿದ್ದೆ. ಆದರೆ, ಚಂದ್ರ ಅದಕ್ಕೆ ಅರ್ಹನಾಗಿರಲಿಲ್ಲ....ಅವನು ಈಗ ಯಾವ ಕಸಬನ್ನು ಅವಲಂಬಿಸಿದಾನೆಯೋ ತಿಳಿಯದು. . ಎಂಥದ್ದಾದರೂ ಅದರಲ್ಲಿ ಮಿಥ್ಯೆಯ ಪ್ರಭಾವವೇ ಹೆಚ್ಚಿರಬಹುದು ಅಂತ ನನಗೆ ತೋರುತ್ತೆ

ನಿಮ್ಮ ಗುಂಡಪ್ಪನಲ್ಲಿ ಮತ್ತೊಂದು ಸ್ವಾರಸ್ಯ. ಅವನ ದೃಷ್ಟಿ ಯಾವಾಗಲೂ ನರಳುವವರ ಕಡೆಗೇ ಹೊರಳುತ್ತಿತ್ತು. ಕೈ ಹಿಡಿದವಳ ಕೊಂಕುಳಲ್ಲಿ ಭಾರವಾದ ಟ್ರಂಕನ್ನಿರಿಸಿ, ನಿಸ್ತ್ರಾಣನಾದ ಮಗುವನ್ನು ತಾನು ಎತ್ತಿಕೊಂಡು ಛತ್ರೀಸಮೇತನಾಗಿ ರೈಲುಸ್ಟೇಷನಿಗೆ ಬಿಜಯಮಾಡುವ ಯಜಮಾನ, ಹುಡುಗರನ್ನ ಪರೀಕ್ಷೆಗೆ ಅಂತ ಸಾಲಾಗಿ ಬೆನ್ನು ಬಗ್ಗಿಸಿ ಕೂರಿಸಿ ಅವರು ಉತ್ತರಕ್ಕಾಗಿ ತಲೆ ಕೆರೆಯುವಾಗ ಉತ್ತರೋತ್ತರ ತಿಳಿದಿದ್ದರೂ ಅಲ್ಲೇ ಅಡ್ಡಾಡುವ ಉಪಾಧ್ಯಾಯರು, ಮಾಲೀಕ ಮಹಾಶಯ ಮೋಟಾರ್ ನಡೆಸು

ವಾಗ ಹಿಂದಿನ ಸೀರದಲ್ಲಿ ಸುಮ್ಮನೆ ಕುಳಿತು ಬೀಡಿ ಸೇದುವ ಡ್ರೈವರ್ ಸಾಹೇಬರು, ನಾಯಿ ಎಳೆದುಕೊಂಡು ವಾಕಿಂಗ್ ಹೋಗುವ ವಿರಾಮಜೀವಿಗಳು, ಇವರ ಮೇಲೆಲ್ಲ ಅವನಿಗೆ ಕಿಡಿ ಕಿಡಿ

ಬೆಂಗಳೂರಿಗೆ ಬಂದಾಗಲೇ ಗುಂಡಪ್ಪನ ಮನಸ್ಸು ಹತ್ತಾರು ಪೆಟ್ಟುಗಳಿಂದ ನೊಂದಿತ್ತು ನಾನು ಅವನನ್ನ ಆಗಾಗ ಅವನ ಊರು, ಮನೆ, ಜನ, ನಂಟರಿಷ್ಟರು ಉಪಾಧ್ಯಾಯರು ಇವರ ವಿಷಯಗಳನ್ನು ಕುರಿತು ಕೇಳುತ್ತಿದ್ದೆ. ಅವನ ಉತ್ತರಗಳಿಂದ ಅವನು ಬೆಳೆದ ಸನ್ನಿವೇಶವೇ ಆಶಾಜನಕವಾಗಿರಲಿಲ್ಲವೆಂದು ನನಗೆ ತಿಳಿಯಿತು ಕೇವಲ ಚಿಕ್ಕಂದಿನಲ್ಲೇ ಅವನಿಗೆ ತಾಪತ್ರಯದ ಕಾವು ತಟ್ಟಿರಬೇಕು, ಅವನನ್ನು ಮಡಿಲಲ್ಲಿ ಕೂರಿಸಿಕೊಂಡೇ, ಅವನ ಹಣೆಯ ಮೇಲೆ ತಮ್ಮ ಕಂಬನಿಗಳನ್ನು ಸುರಿಸುತ್ತಲೇ, ಅವನ ತಾಯಿ ಸಾಲ ಸೋಲಗಳ ಗುಣಾಕಾರ ಮಾಡಿರಬೇಕು, ಅವನಿಗೆ ಅನ್ನ ಉಣಿಸುವಾಗಲೇ ಸೊಸೆಯಮೇಲೆ ಅತ್ತೆ ಕಿಡಿ ಕಾರಿರಬೇಕು; ಹತ್ತಾರು ಭಕ್ಷ್ಯಗಳನ್ನು ಅವನಿಗೆ ಅವರು ಇಲ್ಲವೆಂದಿರಬೇಕು, ಹಬ್ಬದದಿನ ಅವನಿಗೆ ಅವರು ಹರಕಲನ್ನೇ ಉಡಿಸಿರಬೇಕು, ಎಂದು ನಾನು ಊಹಿಸಿದೆ. ಗಂಗು ಎಂಬ ತಂಗಿಯನ್ನು ಮಾತ್ರ ಅವನು ಪ್ರೀತಿಯಿಂದ ನೆನೆದು ಕೊರಗುತ್ತಿದ್ದ ಅವಳು ಬಿತ್ತಿ ಬೆಳೆಸಿದ ಹೂದೋಟ, ಅವಳು ಹೊಸದಾಗಿ ಬರೆದ ರಂಗವಲ್ಲಿಯ ಚಿತ್ರಗಳು, ಅವಳ ಇನಿದಾದ ಕೊರಲು, ಅವಳು ಮುನಿದಾಗಿನ ಮುಖ, ಇವೆಲ್ಲವನ್ನೂ ಅವನು ತನ್ನ ಅಂತರಂಗದ ಪರದೆಯ ಮೇಲೆ ಅಚ್ಚಳಿಯದಂತೆ ಚಿತ್ರಿಸಿದ್ದ ಚಿಕ್ಕಂದಿನ ಸ್ನೇಹಿತರಲ್ಲಿ ಒಬ್ಬರನ್ನೂ ಗುಂಡಪ್ಪ ಅಕ್ಕರೆಯಿಂದ ವಿವರಿಸುತ್ತಿರಲಿಲ್ಲ. ಕಾಶಿ ಎಂಬ ಒಬ್ಬನೊಂದಿಗೆ ದಿನವೂ ಕೇಶಾ ಕೇಶಿಯಾಗುವುದು, ಸ್ವಾಮಿಜಿ" ಅಂತ ಹೇಳಿ ಅವನು ತಲೆ ತಗ್ಗಿಸುವನು "ಯಾರ ಚಂಡಿಕೆ ಬಲವಾಗಿತ್ತು?" ಅಂತ ಕೇಳಿ ನಾನೂ ನಕ್ಕುಬಿಡುವೆ.

ಶೀನಿವಾಸರಾಯರು ಅಂತ ಒಬ್ಬರು ಮೇಷ್ಟರಿದ್ದರಂತೆ, ಗುಂಡಪ್ಪನಿಗೆ ಅವರು ಸದಾ ಇವನನ್ನ 'ಪಂಡಿತಪುತ್ರಾ' 'ಗುಳಿಗೆ ಗುಂಡಾ' ಅಂತ ಕರೆದು ಅವಮಾನ ಪಡಿಸುವರಂತೆ ಕಾಶಿ ಎಂಬ ಹುಡುಗನ ಮನೆಯಿಂದ ಅವರಿಗೆ ಹಾಲು ಮೊಸರು ಸರಬರಾಜಾಗುತ್ತಿತ್ತಂತೆ ಅವನ ಚಾಡಿಗೆಲ್ಲ ಅವರು ಕಿವಿ ಕೊಡುವರಂತೆ. "ಇಲ್ಲಿಗೆ ಬಂದ ಮೇಲೆ, ಯಾರೋ ಒಬ್ಬಿಬ್ಬರು ಮೇಷ್ಟರು

ಗಳನ್ನು ಪರಿಚಯ ಮಾಡಿಕೊಂಡ ವೇಳೆ, ನನಗೆ ಗೊತ್ತಾಯಿತು, ಸ್ವಾಮಿಜಿ, ವೇಷ್ಟರು ನಿಜವಾಗಿಯೂ ನಮ್ಮ ಮಿತ್ರರು, ನಮ್ಮ ಶ್ರೇಯಸ್ಸಿಗಾಗಿ ನಿಯಾಮಕವಾಗಿರುವವರು, ಅಂತ" ಅಂದ, ಗುಂಡಪ್ಪ ಒಂದು ದಿನ.

ಅವನ ತಾಯಿಗೆ ಅವನ ಅಜ್ಜಿ ಕೊಡುತ್ತಿದ್ದ ಹಿಂಸೆಯ ಫಲವಾಗಿಯೋ ಏನೋ, ಗುಂಡಪ್ಪನಿಗೆ ಪ್ರಾಯ ಬರುವುದರೊಳಗೆ ಸಂಸಾರ ಜೀವನದಲ್ಲಿ ಜಿಗುಪ್ಸೆ ವಿಪರೀತವಾಯಿತು. ಇಲ್ಲಿಗೆ ಬಂದ ವೇಲಂತೂ, ಸ್ವಾರ್ಥಪರರಾದ ಕ್ಲಿಷ್ಟರಾಯರು, ಆ ಇನ್ನೊಬ್ಬರು, ಇವರಿಬ್ಬರ ಅನ್ನ ಪ್ರಭಾವದಿಂದಲೂ ನನ್ನ ಕಾಷಾಯ ಪ್ರಭಾವದಿಂದಲೂ ಅವನನ್ನು ಈ ಜಿಗುಪ್ಸೆ, ಸನ್ಯಾಸಕ್ಕೇ ಸೆಳೆಯಿತು. ಮತ್ತೊಬ್ಬರ ಮನೆಯಲ್ಲಿ ಮಲ್ಲಿಗೆ ಹೂವಿನ ಹಾಗೆ ಮರ್ಯಾದೆಯಾಗಿ ಬೆಳೆದ ಒಂದು ಹೆಣ್ಣುಮಗುವನ್ನು ನಮ್ಮ ಸುಖ ಸೌಕರ್ಯಗಳಿಗಾಗಿ ಕೈಹಿಡಿದೆಳೆದುತಂದು ಅಡಿಗೆಮನೆಯಲ್ಲಿ ಒಲೆಮುಂದೆ ಕಟ್ಟಿ ಹಾಕುವುದು ಸ್ವಾತಂತ್ರ್ಯ ಪ್ರೇಮಿಯಾದ ಯಾವ ಭಾರತೀಯನಿಗೂ ತಕ್ಕುದಲ್ಲ ಅಂತ ಅವನು ಚಂದ್ರನ ಹತ್ತಿರ ರಾತ್ರೋರಾತ್ರಿ ಚರ್ಚಿಸುತ್ತಿದ್ದನಂತೆ.

ಸಾಮಾನ್ಯವಾಗಿ ಹುಡುಗರೂ ಹುಡುಗಿಯರೂ ವಿವಾಹಕ್ಕೆ ಒಪ್ಪಿ ವಿವಾಹ ಕಾಲಗಲ್ಲೂ ಕೂಡ ನಗುನಗುತ್ತಾ ನಲಿಯುವುದು ಯಾತಕೆಂದರೆ, ತಮ್ಮ ತಂದೆ ತಾಯಿಗಳು ಉಲ್ಲಾಸವಾಗಿ ಆನಂದವಾಗಿ ನಿಷ್ಕಂಟಕವಾಗಿ ಪರಮ ಪ್ರೇಮದಿಂದ ಒಂದು ದಿನವೂ ಒಬ್ಬರೂ ಆತ್ಮಹತ್ಯೆ ಅಥವಾ ಖೂನಿಯ ಯೋಚನೆ ಇಲ್ಲದೆ ಸುಖವಾಗಿ ಬಾಳುತ್ತಿದಾರೆ ಎಂಬ ಭ್ರಮೆಯಿಂದ! ಆದರೆ, ನಿಜವಾಗಿಯೂ ಮನಸಾವಾಚಾ ಯಾವ ದಂಪತಿಗಳು ತಾನೆ ಅಷ್ಟು ಪ್ರೇಮದಿಂದ ಒಟ್ಟು ಮೂವತ್ತು ನಲವತ್ತು ವರ್ಷ ಬಡತನ ಜಡತನಗಳ ಕೋಟಲೆಗಳ ನಡುವೆ ಬಾಳಿಯಾರು? ತಮ್ಮ ಮನಃಕಷಾಯಗಳನ್ನ ಮಕ್ಕಳಿಗೆ ಕುಡಿಸದೆ ಇರುವ ದಂಪತಿಗಳೇ ಜಾಣರು. ಆದರೆ, ಪಂಡಿತರ ಮನೆ ಕಷಾಯಗಳ ಕಹಿಯನ್ನು ಗುಂಡಪ್ಪ ಸವಿದು ಬಿಟ್ಟಿದ್ದ.

ಆದ್ದರಿಂದ ನನಗೆ ಅವನನ್ನು ಬೇರೆ ರೀತಿಯಿಂದ ತಿದ್ದಬೇಕಾಗಿ ಬಂತು ನನ್ನ ಆತ್ಮಕಥೆಯನ್ನು ನಾನು ಅವನಿಗೆ ವಿಸ್ತಾರವಾಗಿ ಹೇಳಿದೆ. ನನಗೆ ಈಗಲೂ ನೆನಪಿದೆ. ತುಳಸೀತೋಟದಿಂದ ಹಿಡಿದು ಸಂಪಿಗೆ ರಸ್ತೆವರೆಗೂ

ಎರಡು ಸಲ ಹೋಗಿ ಬಂದೆವು ನಾವು, ನನ್ನ ಜೀವನವನ್ನು ನಾನು ಅವನಿಗೆ ತಿಳಿಸಿ ಮುಗಿಸುವುದರೊಳಗೆ.

ನಾನೊಬ್ಬ ಬಾಲಸನ್ಯಾಸಿ ಅಂತ ಅವನು ತಿಳಿದಿದ್ದನಂತೆ. ನಾನು ಆ ದಿನ ಸಂಜೆ ಆ ವಿಷಯವನ್ನ ಗುಂಡಪ್ಪನಿಗೆ ನಾನು ಸ್ಪಷ್ಟವಾಗಿ ಹೇಳಿದೆ ನಾನು ಬಾಲಸನ್ಯಾಸಿ ಅಲ್ಲ, ಕಾಲಸನ್ಯಾಸಿ, ಅಂತ ಅಂದರೆ, ಕಾಲಕಾಲಕ್ಕೆ ಬ್ರಹ್ಮಚರ್ಯ ಗಾರ್ಹಸ್ತ್ಯ, ವಾನಪ್ರಸ್ಥ, ಸನ್ಯಾಸ, ಎಂಬ ಆಶ್ರಮಗಳನ್ನು ಸ್ವೀಕರಿಸಿ, ಜಗತ್ತಿನ ಮಿಥ್ಯೆಯನ್ನೂ ಪರಮಾತ್ಮನ ಸತ್ಯವನ್ನೂ ತಿಳಿಯಬೇಕೆಂಬ ತತ್ವಕ್ಕನುಸಾರವಾಗಿ ಸಕಾಲದಲ್ಲಿ ಸನ್ಯಾಸಿ ಆದವನು •ಗುಂಡಪ್ಪನಿಗೆ ಹೇಳಿದ ನನ್ನ ಜೀವನಚರಿತ್ರೆಯ ಸಾರಾಂಶವನ್ನ ನಿಮಗೂ ಹೇಳುತ್ತೇನೆ. ಆದರೆ, ಸಾರಾಂಶ ಮಾತ್ರ .. ಸಾರಾಯಾಂಶವನ್ನ ವಿಸ್ತರಿಸುವುದಿಲ್ಲ

ನಾನು ಹುಟ್ಟಿದ್ದು ಕೋಲಾರದ ಚಿನ್ನದ ಗಣಿಯಲ್ಲಿ ನನ್ನ ತಾಯಿ ಅಲ್ಲಿ ಚಾಕರಿಗೆ ಸೇರಿದ್ದಳು. ನನ್ನ ತಂದೆ, ತಾಯಿಯ ಆಸರೆಯಲ್ಲೇ ಬೆಳೆದವನು ದಿನವೂ ಸಂಜೆ ಹೆಂಡಕ್ಕೆ ನಾಲ್ಕಾಣೆ ಕೊಟ್ಟುಬಿಟ್ಟರೆ, ಅವನು ನನ್ನ ತಾಯಿಯನ್ನ ಪೊರಕೆಯಿಂದ ಹೊಡೆಯುತ್ತಿರಲಿಲ್ಲ, ಆ ದಿನ ಮಾತ್ರ ಮುಷ್ಟಿಯಿಂದ ಗುದ್ದು ! ಒಂದು ದಿನ ಅವನು ವೈಪರೀತು ಅಕಸ್ಮಾತ್ ಗುದ್ದಿದಾಗ ನನ್ನ ತಾಯಿ ತೀರಿಹೋದಳು ಆಗ ನನಗೆ ಮೂರು ವರ್ಷ. ಗಾಬರಿಗೊಂಡು ನಾನು ಕತ್ತಲಲ್ಲೇ ಮನೆಬಿಟ್ಟು ಓಡಿದೆ ನನ್ನ ತಾಯಿ ಸಂಗಡ ಕೂಲಿ ಕೆಲಸಮಾಡುತ್ತಿದ್ದ ಒಬ್ಬಳ ಹತ್ತಿರ ಹೋಗಿ ಅತ್ತು ಅತ್ತು ನಿದ್ದೆಹೋದೆ ಅನಂತರ ನನ್ನ ತಂದೆ ನನ್ನನ್ನ ಅನೇಕ ಸಲ ಕಂಡರೂ ಗುರುತಿಸಲಿಲ್ಲ ಶನಿ ಬಿಟ್ಟಿತು, ಅಂತ ನಾನು ಬೌರಿಂಗ್‌ಪೇಟೆಗೆ ಬಂದೆ ಅಲ್ಲಿ ಒಬ್ಬ ಗಾಣಿಗ ನನ್ನನ್ನ ಸ್ವಾಗತಿಸಿ ನನಗೆ ಅನ್ನವಸತಿಗಳನ್ನು ಕೊಟ್ಟ ಅವನ ಎತ್ತುಗಳನ್ನು ಗರ್ರನೆ ಸುತ್ತ ಹೊಡೆಯುವುದೇ ನನ್ನ ಪಾಲಿನ ಕೆಲಸ ಅವನು ಪರಮ ವೇದಾಂತಿ ಪರಮಾತ್ಮನ ಜ್ಯೋತಿಯೇ ಒಳಗೆ ಬೆಳಗುವಾಗ ಶಾಲೆಯಲ್ಲಿ ಕಲಿಯಬೇಕಾದ್ದೇನು, ಅಂತ ಅವನು ನನ್ನನ್ನೂ, ಅವನ ಮಕ್ಕಳನ್ನೂ ಶಾಲೆಗೆ ಕಳುಹಿಸಲೇ ಇಲ್ಲ.

ಅಲ್ಲಿ ಸುಮಾರು ಹತ್ತು ವರ್ಷಗಳಿದ್ದನಂತರ ನಾನು ಒಬ್ಬ ರೈತನ ಹತ್ತಿರ ಸೇರಿಕೊಂಡೆ. ಆದರೆ, ಅವನ ಎತ್ತುಗಳನ್ನೂ ಕೂಡ ನಾನು ಗಾಣದ

ಎತ್ತುಗಳ ಹಾಗೆಯೇ ನಡೆಸಿದೆನಾದ್ದರಿಂದ ಮೊದಲನೆಯ ದಿನವೇ ಹಳ್ಳಕ್ಕೆ ಬಿದ್ದು ಅವು ಕಾಲು ಮುರಿದುಕೊಂಡವು "ಬದುಕಿದೆಯಾ? ಬಡ ಜೀವವೇ?" ಅಂತ ನಾನು ಅಲ್ಲಿಂದ ಪರಾರಿಯಾಗಿ ಚಿಂತಾಮಣಿಗೆ ಬಂದೆ. ಅಲ್ಲಿ ಒಂದು ಅಂಗಡಿ ಆಳಾಗಿ ಸೇರಿ, ಆ ಸಾಹುಕಾರನ ಮಗಳೊಂದಿಗೆ ಮರೆಯಲ್ಲೇ ಹೈದರಾಬಾದಿಗೆ ಓಡಿಹೋದ ಆಕೆ ಮೈಮೇಲಿದ್ದ ಒಡವೆಗಳನ್ನು ಮಾರಿ ಅಲ್ಲೊಂದು ಮನೆ ಬಾಡಿಗೆಗೆ ಗೊತ್ತುಮಾಡಿಕೊಂಡು "ಜ್ಯೋತಿಷ ಪ್ರಕಾಶ" ಅಂತ ಹೆಸರು ಬದಲಾಯಿಸಿ ಗಡ್ಡ ಬೆಳೆಸಿ ಕೈತುಂಬ ಹಣ ಸಂಪಾದಿಸಿದೆ ನನ್ನ ಗೃಹಸ್ಥಾಶ್ರಮ ಜೀವನ ಬಹು ಸುಖವಾಗಿ ಹನ್ನೆರಡು ವರ್ಷ ಸಾಗಿತು. ಇಬ್ಬರು ಗಂಡು ಮಕ್ಕಳು. ಈಗ ಅವರು ಬಹುಶಃ ಮುಸಲ್ಮಾನರಾಗಿರಬಹುದು, ನನಗೆ ತಿಳಿಯದು ಅಲ್ಲೇ ಶಾಲೆಯಲ್ಲಿ ಓದಿ ಉರ್ದುವಿನಲ್ಲಿ ಪ್ರವೀಣರಾದರು ನಾನೂ ಉರ್ದು ಕಲಿತೆ

ಇದ್ದಕ್ಕಿದ್ದ ಹಾಗೆ ಒಂದು ದಿನ ಚಿಂತಾಮಣಿ ಸಾಹುಕಾರರು, ಹಲವರು ನಂಟರಿಷ್ಟರೊಂದಿಗೆ, ನಮ್ಮ ಮನೆಯೊಳಕ್ಕೆ ನುಗ್ಗಿದರು ನಾನು ಆಗ ಯಾರೋ ಒಬ್ಬರು ನವಾಬರ ಹಸ್ತಗುಣ ನೋಡುವುದಕ್ಕಾಗಿ ಪರಸ್ಥಳ ಹೋಗಿದ್ದೆ. ತಂದೆಯ ಭಯೋತ್ಪಾದಕವಾದ ಕೆಂಗಣ್ಣುಗಳನ್ನು ಕಾಣುತ್ತಲೂ ಆಕೆ ಹೆದರಿ ಚೀರಿ ಹಿತ್ತಲು ಭಾವಿಗೆ ಬಿದ್ದು ಪ್ರಾಣಬಿಟ್ಟಳು. ಈ ದುರಂತವನ್ನು ಕೇಳುತ್ತಲೂ ನಾನು ಬೇರೆ ಮಾರ್ಗವಾಗಿ ಬೊಂಬಾಯಿಗೆ ಹೋದೆ ಅಲ್ಲಿ ಒಂದೆರಡು ವರ್ಷ ವಾನಪ್ರಸ್ಥ ಮುಗಿಸಿಕೊಂಡು ಸನ್ಯಾಸಿಯಾಗಿ ಇಲ್ಲಿಗೆ ಬಂದೆ

ಆದ್ದರಿಂದ, ನಾನು ಗುಂಡಪ್ಪನಿಗೆ ಹೇಳಿದೆ: "ಅಯ್ಯ! ಸನ್ಯಾಸ ತೆಗೆದುಕೊಳ್ಳಬೇಕೆಂಬ ಆಸೆ ನಿನ್ನಲ್ಲಿ ಬಲವಾಗಿದ್ದರೆ, ಆ ನಿಶ್ಚಯವನ್ನು ಮದುವೆ ಎಂದಿಗೂ ಅಲುಗಾಡಿಸುವುದಿಲ್ಲ ನಿನ್ನಲ್ಲಿ ಆ ವಿಧವಾದ ಮನೋಭಾವ ಈಗ ಇಲ್ಲದಿದ್ದರೂ ಕಾಲಾನುಕಾಲಕ್ಕೆ ಕ್ರಮ ಕ್ರಮನಾಗಿ ನಿನ್ನಲ್ಲೂ ನೀನು ಕೈ ಹಿಡಿಯುವ ಆ ಹೆಣ್ಣು ಮಗುವಿನಲ್ಲೂ ತೀವ್ರ ವೈರಾಗ್ಯವನ್ನು, ಗೃಹಸ್ಥಜೀವನವೇ ಉಂಟುಮಾಡುತ್ತದೆ ಅದಕ್ಕೋಸ್ಕರವೇ ಈ ಸಂಸ್ಕಾರವನ್ನು ಸನಾತನಧರ್ಮಪ್ರವರ್ತಕರಾದ ಋಷಿಗಳು ಸ್ಥಾಪಿಸಿರುವುದು" ಅಂದೆ.

ಇದಾದಮೇಲೆ ನಾನು ಒಂದು ದಿನ ಚಂದ್ರನನ್ನ ಕೇಳಿದೆ "ಏನೋ! ಈಗ ಏನು ಹೇಳುತ್ತಿದಾನೆ?" ಅಂತ "ಕೊಂಚ ಹದಕ್ಕೆ ಬಂದಿದಾನೆ, ಸ್ವಾಮಿಜಿ" ಅಂದ

ನೀವು ನನ್ನ ಪರವಾಗಿ ಗುಂಡಪ್ಪನಿಗೆ ಹೇಳಿ ನಾನು ಅವನನ್ನ ತುಂಬಾ ವಿಚಾರಿಸಿದೆ ಅನ್ನಿ! ಅವನ ಹೆಂಡತಿ ಮಕ್ಕಳು ಎಷ್ಟು ಮಕ್ಕಳು? . ಒಂದು ಗಂಡು ಮಗುವೆ? ತುಂಬಾ ಸಂತೋಷ ಹೆಂಡತಿ, ಮಗು, ಚೆನ್ನಾಗಿರಲಿ ಅಂತ ಅಂದರು ಅನ್ನಿ. ಆಶ್ರಮ ಅನ್ನುವುದು- ತಾನಾಗಿ ಬರುತ್ತೆ . ಒಂದಾದ ಮೇಲೆ ಒಂದು ಅಂತ ಅನ್ನಿ! ಈ ಶ್ರಮವಾದ ಮೇಲೆ ಅಶ್ರಮ ಇದ್ದೇ ಇದೆ, ಅನ್ನಿ

## ಗುರುವಿನ ಪ್ರಸಾರ ಮುಗಿಯಿತು

---

ಆದದ್ದೆಲ್ಲಾ ಒಳಿತೇ ಆಯ್ತು
ಮಾಧವನಂಘ್ರಿಯ ಸೇವಿಸುವುದಕೆ
ಸಾಧನ ಸಂಪತ್ತಾಯ್ತು

—ಪುರಂದರ ದಾಸರು

ಮಾನಸರ ಬರವುಮಂ ಪೋಗುಮಂ ಕಂಡಿನಿತು ದಿವಸಮೀ
ಮರಗಳ ಗಿಡುಗಳ್ ಪೊದರುಗಳ ಮರೆಗಳೊಳೀ ಪೊಳಲಂ
ಕಂಡೆಮಿಲ್ಲೆಂದು ಮನದೊಳ್ ಬಗೆದು

—ವಡ್ಡಾರಾಧನೆ

## ೭ ಹಂಸಧ್ವನಿ

ತನ್ನ ಮಟ್ಟಿಗೆ ತಾನು ಸಕ್ಕರೆ ತಿಂದರೆ ಸಾಲದು, ಅದು ಕೇವಲ ಕೀಳು ಜೀವನ, ನರಕಕ್ಕೆ ದಾರಿ, ಅಕ್ಕಪಕ್ಕದವರನ್ನು ಅಕ್ಕರೆಯಿಂದ ಕಾಣಬೇಕು ಅಂತ ಸಾಮಾನ್ಯವಾಗಿ ಜನ ಹೇಳುವುದಿಲ್ಲವೆ? ಅವೆಲ್ಲ ಯಾವುದೋ "ಅಕ್ಕಪಕ್ಕದವರ ಸಮ್ಮೇಳನ"ದ ಠರಾವುಗಳು ಅಲ್ಲಿ ಪಿತೂರಿಕಾರರು ಸೇರಿ ಹೀಗೆಲ್ಲ ಪ್ರಚಾರಮಾಡಿ ಧರ್ಮ ಶಾಸ್ತ್ರಗಳನ್ನೆಲ್ಲ ತಮ್ಮ ಕಡೆಗೆ ತಿರುಗಿಸಿದರೆ ತಾನೆ, ಅವರಿಗೆ ಬೇಕುಬೇಕಾದಾಗ ಬೆಂಕಿ ನೀರು ಉಪ್ಪು ಮೆಣಸಿನಕಾಯಿ ಸಾಲ ದೊರೆಯುವುದು? ಮನೆ ಮಾರಿ ಪರರಿಗೆ ಉಪಕಾರಿ ಅಂದ ಹಾಗೆ! ನೀವು ಎಷ್ಟೇ ಹೇವರಿಸಿದರೂ ಕೂಡ ನಾನು ಈ ತತ್ವವನ್ನು ಒಪ್ಪುವುದಿಲ್ಲ ಎಲ್ಲಿ! ನಿಮ್ಮ ಕೈ ತೋರಿಸಿ ಐದು ಬೆರಳುಗಳೂ ಒಂದೇ ಸಮವಾಗಿ ಯಾಕಿಲ್ಲ, ಯೋಚನೆ ಮಾಡಿ! ಇದ್ದರೆ ಯಾವ ಕೈಗಾರಿಕೆ ತಾನೆ ಸಾಧ್ಯ? ಆ ನಾಯಿ ಬಾಲ ನೋಡಿ! ಎಲ್ಲಿ ನಿಮ್ಮ ಅಶಕ್ತ ಪೋಷಕ ಸಂಘದವರು ಬಂದು ಅದಕ್ಕೊಂದಿಷ್ಟು ಶಕ್ತಿ ಕೊಟ್ಟು, ಅದನ್ನ ಅರೆಗಳಿಗೆ ನೆಟ್ಟಗೆ ನಿಲ್ಲುವ ಹಾಗೆ ಮಾಡಲಿ ಸಾಧ್ಯವೆ? "ನಾನು ಡೊಂಕೊ, ನಿನ್ನ ನಾಮ ಡೊಂಕೊ?" ಅಂತ ಕೇಳಿದನಂತೆ ಒಬ್ಬ ದಾಸಯ್ಯ, ದೇವರನ್ನ? ಹಾಗೆಯೇ, ಲೋಕದ ಡೊಂಕನ್ನು ತಿದ್ದಲು ನಾವೇನು ನಾರಾಯಣರೇ? ಅಕ್ಕವೇನು ಪಕ್ಕವೇನು, ಧಕ್ಕಿದ್ದೇ ಲಾಭ, ಎಂಬ ನಾಣ್ಣುಡಿ ಬೇರೆ ಇದೆ, ಕೇಳಿಲ್ಲವೇ ನೀವು? ಅಯ್ಯೋ! ಬಿಡಿ ಅಂದರೆ! ನಮ್ಮ ಶಿರಸ್ಸೇ ನಮಗೆ ಭಾರವಾಗಿರುವಾಗ ಮತ್ತೊಬ್ಬನ ಮುಂಡಾಸನ್ನೂ ಹೊತ್ತುಕೊಳ್ಳುತ್ತೇನೆ, ಅಂತ ಕತ್ತು ನೀಡಿದರೆ, ನಮ್ಮನ್ನ ಬುದ್ಧಿವಂತರು ಅಂತ ಹೇಳಿಕೊಳ್ಳುವುದು ಸಾಧ್ಯವೇ?

ಯಾಕೆ ಹೇಳಿದೆ, ಅಂದರೆ, ನೀವು ಕೇಳಿದಿರಲ್ಲಾ, ಪಕ್ಕದ ಮನೆ ಪಂಡಿತರ ವಿಷಯ ಕೊಂಚ ಹೇಳಿ ಅಂತ ನನಗೆ ಯಾಕೆ, ಸ್ವಾಮಿ, ಅವರ ಗೋಜು? ಅವರವರ ಕರ್ಮಾನುಸಾರ ಅವರವರಿಗೆ ಪಡಿತರ ಅಳೆದು ಕೊಡುತ್ತಾನೆ ಮೇಲೆ ಕೂತಿರುವ ಸರಬರಾಯ! ಒಪ್ಪತ್ತೋ ಇಪ್ಪತ್ತೋ ತಿಂದು, ಒಂದು ಸಲವಾದರೂ ತೇಗದೆ, ಈ ಜನ್ಮವನ್ನ ಕಳೆದುಬಿಟ್ಟರಾಯಿತು. ಅಲ್ಲವೆ, ಹೇಳಿ.

ಆದರೂ ತಾವು ದೊಡ್ಡವರು! ಬನ್ನಿ ಅಂತ ಕರೆದರೂ ನಮ್ಮ ಮನೆಗೆ ಬಾರದ ಮಹನೀಯರು! ತಾವು ದಯಮಾಡಿಸಿ, ತಿಳಿದಿದ್ದನ್ನ ಹೇಳಿ, ಸಾಕು, ಅಂದಾಗ, ನಾನು ನಾಲಿಗೆ ಮಡಿಸಿ ಗಂಟಲೊಳಕ್ಕೆ ತುರುಕುವುದು, ಸರಿಯಲ್ಲ ಹೇಳುತ್ತಾ ಹೋಗುತ್ತೇನೆ, ನಿಮಗೆ ಬೇಕಾದ್ದನ್ನ ನೀವು ಬರೆದುಕೊಳ್ಳಬಹುದು

ನಾವಿಬ್ಬರೂ, ಅಂದರೆ, ಆ ಮನೆಯವರೂ ನಾವೂ, ಒಟ್ಟಿಗೆ ಈ ಊರಿಗೆ ಕರ್ನೂಲಿಂದ ಬಂದೆವು, ನಮ್ಮ ಮುತ್ತಾತಂದಿರ ಕಾಲದಲ್ಲಿ! ನಾವು ಪರಿಚಾರಕ ಕೆಲಸಕ್ಕೆ, ಅವರು ಅರ್ಚಕ ಕೆಲಸಕ್ಕೆ, ವಿಶ್ವೇಶ್ವರ ದೇವಸ್ಥಾನದಲ್ಲಿ ನಮ್ಮೂರು ಕಡೆ ಬ್ರಾಹ್ಮಣರೇ ಉತ್ತಮರು ಅಂತ ಈ ಊರಲ್ಲಿ ಪ್ರತೀತಿ ನಮ್ಮೂರಲ್ಲಿ ಗುಡಿ ಕಟ್ಟಿದರೆ ನಾವು ಈ ಪ್ರಾಂತದಿಂದಲೇ ಕರೆಸುತ್ತೇವೆ ನಮ್ಮವರನ್ನ ಕಂಡರೆ ನಮಗೆ ಅಲಕ್ಷ್ಯ ಕೇಳಿಲ್ಲವೆ ಕಥೆ? ಯಾರೋ ಉಪನ್ಯಾಸಕರು, "ಮಿತ್ರರೆ" ಅಂತ ಪ್ರಾರಂಭ ಮಾಡಿದಾಗ ಸಭಿಕರಲ್ಲೊಬ್ಬ ಕೋಪಗೊಂಡು ಕೂಗಿದನಂತೆ, "ಮಹನೀಯರೇ! ಅಂತ ಹೇಳೋಣವಾಗಲಿ!" ಅಂತ ಆಗ ಆತ ಹೇಳಿದನಂತೆ, "ತಾವೆಲ್ಲರೂ ನನಗೆ ಚಿರಪರಿಚಿತರಾದ್ದರಿಂದ ತಮ್ಮನ್ನ ನಾನು ಹಾಗೆ ಸಂಬೋಧಿಸಲಿಲ್ಲ, ಅಷ್ಟೆ! ಅನ್ಯಥಾ ನೊಂದುಕೊಳ್ಳಬಾರದು" ಅಂತ ಆ ಸಮಾಚಾರ! "ಸುತ್ತಲಜನ ಉತ್ತಮರಲ್ಲ", ಅಂತ ಗಾದೆಯೇ ಇದೆ ಇಲ್ಲವೆ ಹೇಳಿ.

ಸರಿ! 'ಹರಹರ' ಅಂತ ಆ ಸ್ವಾಮಿಯೇ ಸೂರು ಕೆಡಿವಿಕೊಂಡುಕೊಂಡು ಸೊರಗಿದ ಮೇಲೆ ನಾವು ಯಾರ ಹತ್ತಿರ ಹೋಗಿ ಕವಕವಿಸುವುದು? ಇನ್ನು ಯಾರನ್ನು ಅರ್ಚಿಸಿ ಏನು ಫಲ? ಯಾರ ಪರಿಚಾರಿಕೆಯಿಂದ ಬಿದ್ದ ಗುಡಿ ಮತ್ತೆ ಎದ್ದೀತು? ಕರೆದುತಂದವರೇ ಕೈಬಿಟ್ಟಾಗ, ನಮ್ಮವರು ಬಿಟ್ಟಲ್ಲೇ ತತ್ತರಿಸಿದರು ಹಿಂತಿರುಗುವ ಹಾಗೆಲ್ಲ ನಿಂತಿರುವಹಾಗಿಲ್ಲ! ...ಇಬ್ಬರ ಹತ್ತಿರವೂ ಇದ್ದ ಅಲ್ಪ ಸ್ವಲ್ಪ ಚಿನ್ನ ಬೆಳ್ಳಿ ಮಾರಿ ಈ ಮಹಮಂದಿರವನ್ನು ಕೊಂಡು, ಅಡ್ಡಗೋಡೆ ಎಬ್ಬಿಸಿ ಎರಡುಹೋಳು ಮಾಡಿ ಕೆಳಗೊಂದು ನೆಲ, ಮೇಲೊಂದು ನೆರಳು, ಸಂಪಾದಿಸಿದರು. ಇದೆಲ್ಲ ಐವತ್ತು ವರ್ಷದ ಹಿಂದಿನ ಮಾತು; ಈ ಬಿರುಕುಗಳೆಲ್ಲ ಈಚಿನವು. ನಮ್ಮ ತಂದೆ ಕಾಲದ್ದು.

ದೊಡ್ಡವರ ಕಾಲವಾದ ಮೇಲೆ, ಆಚೆಮನೆಯವರು ಆಯುರ್ವೇದಕ್ಕೆ ಕೈಹಾಕಿದರು ನಮ್ಮ ತಾತಂದಿರು ಸಂಗೀತಕ್ಕೆ ಬಾಯಿಬಿಟ್ಟರು ಅವರು ನಾಡಿಹಿಡಿದರು, ನಮ್ಮವರು ಗಂಟಲು ಸರಿಪಡಿಸಿದರು ಆ ಕಡೆ ವಾತ ಪಿತ್ತ ಕಫ! ಈ ಕಡೆ ರಾಗ ತಾಳ ಲಯ! ಬೆಳಗಾದರೆ ಅವರ ಮನೆಯಲ್ಲಿ ಶೀತ ಕೆಮ್ಮಲು ರೋಗಗಳ ಕೂಗು! ನಮ್ಮ ಮನೆಯಲ್ಲಿ ಶ್ರುತಿ ಪಲ್ಲವಿ ರಾಗಗಳ ಸೋಗು! ಅಲ್ಲಿ ಶರೀರದ ಚಿಕಿತ್ಸೆ, ಇಲ್ಲಿ ಶಾರೀರದ ಚಿಕತ್ಸ!

ಈಗ ಇದಾನಲ್ಲಾ ಗುಂಡಪ್ಪ, ಇವನ ತಂದೆಯ ಕಾಲದಲ್ಲಿ ಅವರ ಆಯುರ್ವೇದ ನಸಿದುಹೋಗುತ್ತಾ ಬಂತು ಇನ್ನೇನು ಗತಿ ಇಲ್ಲ ಎಂಬ ಉತ್ಕಟಾವಸ್ಥೆಯಲ್ಲಿ ಆಯುರ್ವೇದಕ್ಕೆ ಜನಗಳು ಶರಣು ಹೊಗುತ್ತಿರುವ ಹಾಗೆ, ಕೇವಲ ಬರಗಾಲದ ಉದರಪೂರಣಕ್ಕಾಗಿ ಮಾತ್ರ, ಯಾವ ಅಧಿಕಾರವೂ ಇಲ್ಲದೆ, ಅವರ ಹಿರಿಯರು ಬೇರು ನಾರು ಹುಡುಕಿದರೇ ಹೊರತು, ಪರಂಪರಾನುಗತವಾದ ಯಾವ ಪರಿಜ್ಞಾನವೂ ಅವರಿಗೆ ಇರಲಿಲ್ಲ, ಪಾಂಡಿತ್ಯವೂ ಇರಲಿಲ್ಲ ‘ಪಂಡಿತರ ಮನೆ ಎಲ್ಲಿ?’ ಅಂತ ನಮ್ಮ ಮನೆ ಬಾಗೆಲಿಗೆ ಬಂದು ಕೆಲವರು ಕೇಳುವಾಗ ನನಗೆ ಮೈ ಎಲ್ಲಾ ಉರಿದುಹೋಗುತ್ತೆ! ಪಂಡಿತರಂತೆ, ಪಂಡಿತರು! ಶೀಮೆಗೆ ಹೋಗಿ ವೈದ್ಯ ಕಲಿಯದೆ ದುರ್ವಿದ್ಯೆ ಕಲಿತು ‘ಡಾಕ್ಟರ್’ ಅಂತ ಅನ್ನಿಸಿಕೊಳ್ಳುತ್ತಿದಾರಲ್ಲಾ, ಹಾಗಾಯಿತು ಇದು! “ಗುಂಡೂಪಂಡಿತರ ಮಾತ್ರೆ, ವೈಕುಂಠಯಾತ್ರೆ” ಅಂತ ಹೇಳುವ ಹಾಗೆ ಪಕ್ಕದ ಮನೆಯವರನ್ನ ಪಂಡಿತರು ಅಂತ ನಂಬಿ ಎಷ್ಟು ಜನ ಪರಂಧಾಮವನ್ನೈದಿದರೋ, ಆ ಚಿತ್ರಗುಪ್ತನೇ ಬಲ್ಲ!

ಆತನಿಂದ ಇನ್ನೇನೂ ಪ್ರಯೋಜನವಿಲ್ಲದಿದ್ದರೂ “ನಮ್ಮ ಕೈಲಾದದ್ದು ನಾವೂ ಮಾಡಿದುವು” ಎಂಬ ತೃಪ್ತಿ ಒಂದು ಉಳಿಯುವುದು, ಅನ್ನಿ, ಸತ್ತವನ ನಂಟರಿಷ್ಟರಿಗೆ ಬರಬರುತ್ತಾ ಆವರ ಅನ್ನದಲ್ಲೂ ಕಲ್ಲು ಬಿತ್ತು. ಎಷ್ಟು ಬೇಯಿಸಿದರೂ ಬೇಯದ ಕಲ್ಲುಗಳು! ಊರು ಬರಬರುತ್ತ ದೊಡ್ಡದಾಯಿತು. ಮಿಡ್ಲಿಸ್ಕೂಲಿದ್ದದ್ದು ಹೈಸ್ಕೂಲು ಬಂತು, ಟೌನ್‌ಹಾಲಾಯಿತು; ಮಾಂಸದಂಗಡಿಗಳಿಗೆ ಪ್ರತ್ಯೇಕ ಮಾರ್ಕೆಟ್ ಕಟ್ಟಿದರು ಸಂತೆಗೆ ಮೊದಲೇ ಕಳ್ಳರು ಸೇರಿದರು, ಎಂಬ ಹಾಗೆ, ಖಾಯಿಲೆಗಳು ಹೆಚ್ಚುವ ಮೊದಲೇ ವೈದ್ಯರು ಸಿದ್ಧರಾದರು. ಮುಸಲ್ಮಾನರು ಯುನಾನಿ ಹಕೀಮುಗಳ ಸಹಾಯ ಕೋರಿದರು, ನಮ್ಮಂತಹವರಿಗೆ ದೇವರು ದಿಂಡರು ಜೋಯಿಸರು ಸೂರ್ಯನಮಸ್ಕಾರ

ಶನೀಶ್ವರನ ಪೂಜೆ ಆಂಜನೇಯನ ಗಡಿ ವಿಭೂತಿ ತಾಯಿತ ಕೂಶ್ಮಾಂಡದಾನ ಇತ್ಯಾದಿ ಇದ್ದೇ ಇದೆ. ವಿಧವಿಧವಾದ ರುದ್ರಾಕ್ಷಿಕಾಯಿ ಡೊಂಕುಡೊಂಕಾಗಿ ಬೆಳೆದಿರುವ ಬೇರು ಮುಂತಾದವುಗಳನ್ನು ಹರಡಿಕೊಂಡು ಹಾವು ಚೇಳು ಕಡಿತ ಹೊಟ್ಟೆಶೂಲ ಬಂಜೆತನ ಇವುಗಳನ್ನು ನಾಶಿಮಾಡಲು, ಬೀದಿಗರಿಗೆ ಮಾರುವ ಬೈರಾಗಿಗಳು ಬೇರೆ ಇಂಥಿಂಥಾ ದುರಭ್ಯಾಸಗಳಿಗೆ ಇಂಥಿಂಥಾ ರಸಾಯನ ಲೇಪನ ಧ್ವಜಗಳು ಇವೆ, ಹೆದರಬೇಡಿ, ಅಂತ ಪತ್ರಿಕೆಗಳೂ ಪ್ರಜಾಸಮೂಹಕ್ಕೆ ಪ್ರಚಾರಮಾಡಹತ್ತಿದವು ಕಡೆಗೆ ಇಂಗ್ಲೀಷ್ ಡಾಕ್ಟರ್ ಬೇರೆ ಇಳಿದು ಬಂದರು ನಮ್ಮೂರಿಗೆ, ಚಟ್‌ಪಟ್, ಅಂತ ನೆಟ್ಟಗೆ ಮನೆಯೊಳಕ್ಕೇನೆ ಚಕ್ಕಳದ ಬೂಟ್ಸು ಹಾಕಿಕೊಂಡು! ಇಂತಹ ಗೊಂದಲದಲ್ಲಿ, ಗುಂಡಪ್ಪನ ತಂದೆ ಉಳಿದದ್ದೇ ಹೆಚ್ಚು ಏನೋ ಎಂತೋ, ಬೆಂಗಳೂರಿಂದ ಮಗ ಬಂದು ಮತ್ತೆ ಸುಖ ಕಾಣಿಸಿಯಾನು ಎಂಬ ಒಂದು ನೆಚ್ಚಿಕೆಯಿಂದ ಅವರು ಪಂಚಪ್ರಾಣಗಳನ್ನೂ ಬಲವಾಗಿ ಹಿಡಿದಿದ್ದರು. ಅವರು ಸಾಯುವಾಗ ಅವನಿಗೆ ಈಗಿನ ಕೆಲಸ ಸಿಕ್ಕಿತ್ತು

ನಮ್ಮ ಮನೆ ಸಂಗೀತ ಕೂಡ ಸಾಂಗವಾಗಿ ನೆರವೇರಲಿಲ್ಲ ನಾವೂ ಸಂಗೀತ ಕೇಳಿಕೊಂಡು ಬರಲಿಲ್ಲ, 'ಗಾನಸುಧಾರಸ' ಕೊಟ್ಟು ಹುಟ್ಟಲಿಲ್ಲ ನಮ್ಮ ವಂಶಸ್ಥರು ಯಾರೂ ಗಾನವನ್ನು ಅಭ್ಯಾಸ ಮಾಡಿದ ಹಾಗೆ ತೋರಲಿಲ್ಲ ವಿಜಯನಗರದ ಸಾಮ್ರಾಜ್ಯದ ಅರಸರಾಗಿದ್ದ ಶ್ರೀ ಕೃಷ್ಣ ದೇವರಾಯರು ಒಂದುಸಲ ಗಜಪತಿರಾಜನ ಮೇಲೆ ದಂಡೆತ್ತಿಹೋದಾಗ ಸೈನ್ಯ ಸಮೇತ ನಮ್ಮೂರಿನ ಕೆರೆ ಹತ್ತಿರ ಬೀಡುಬಿಟ್ಟಿರಂತೆ. ರಾಯರಿಗೆ ದಿನವೂ ರಾತ್ರಿ ಆರೋಗಣೆ ಮಾಡಿದನಂತರ "ಸಂಗೀತಮುವಧಾರಯ" ಜರುಗಲೇ ಬೇಕು. ಆದರೆ, ಆ ದಿನ ಆಸ್ಥಾನದ ವಿದ್ವಾಂಸರಿಗೆ ಯಾವುದೋ ಸೂತಕ ತಗುಲಿತು ಸೂತಕ ಕಾಲದಲ್ಲಿ ಅವರ ಸಂಗೀತವೂ ಕೂಡ ಹೊಲೆ ಎಂದು ಅರಮನೆ ಜೋಯಿಸರು ಅಭಿಪ್ರಾಯಪಟ್ಟರು ಆದ್ದರಿಂದ ರಾಯರ ದಳಪತಿಗಳು ಗ್ರಾಮದೊಳಕ್ಕೆ ಬಂದು ನಮ್ಮವರನ್ನು ವಾಳಯಕ್ಕೆ ಎಳೆದೊಯ್ದರಂತೆ ಅವರು ಹೋಗಿ ಮಂದಹಾಸನ ಹಾಕಿಕೊಂಡು ಮಂಡಿಸಿ ತಮ್ಮದೇ ಆದ ಒಂದು ನವೀನ ರಾಗದ ಛಾಯೆಯನ್ನು ಕಿಂಚಿತ್ ಅಂದುತೋರಿಸುತ್ತಲೂ ಕೃಷ್ಣದೇವಪ್ರಭುಗಳು ಸಂತುಷ್ಟರಾಗಿ "ಗಾಣವಿದ್ಯಾಚತುರರೇ! (ರಾಯರು ನ, ಣ, ಗಳನ್ನು ಬಾಯಿಗೆ ಬಂದ ಹಾಗೆ ಹೇಳುತ್ತಿದ್ದರೆಂದೂ ಕರ್ಣಾಟಕ

ಕರ್ನಾಟಕ ಎಂದು ಅವರು ಮನಸ್ಸಿನಿ ಉಪಯೋಗಿಸುತ್ತಿದ್ದರೆಂದೂ ನಮ್ಮ ವಂಶದಲ್ಲಿ ಪ್ರತೀತಿ)'' ಸಾಕು, ನಿಲ್ಲಿಸಿ! ತಮ್ಮ ಅಸಾಮಾನ್ಯವಾದ ಶಕ್ತಿಸಾಮ ರ್ಥ್ಯಗಳನ್ನು ನಾನು ಎಷ್ಟೆಂದು ಹೇಳಲಿ! ಆಸ್ಥಾನದಲ್ಲಿರುವ ಯಾವ ದಿಗ್ದಂತಿ ಹಾಡಿದರೂ ಕೂಡ ನನಗೆ ತೃಪ್ತಿ ಎಂಬುದೇ ಉತ್ಪನ್ನವಾಗುತ್ತಿರಲಿಲ್ಲ. ಆದರೆ ತಾವು......ಇರಲಿ! ತಾವು ಹೊರಡಬಹುದು. ನನ್ನ ಮನಸ್ಸಿನಲ್ಲಿ ಆಗು ತ್ತಿರುವ ಭಾವಗಳನ್ನು ಸ್ಪಷ್ಟಪಡಿಸಲು ಸಾಧ್ಯವಿಲ್ಲ ..." ಅಂತ ಹೇಳಿ, ಕೂಡಲೇ ಮರ್ಯಾದೆ ಸಮೇತ ಹಳ್ಳಿಗೆ ಹಿಂತಿರುಗಿಸಿದರಂತೆ.

ಆ ದಿನ ರಾತ್ರಿ ರಾಯರಿಗೆ ನಿದ್ದೆಯೇ ಬರಲಿಲ್ಲವಂತೆ. ನಮ್ಮವರು ಅಂದು ಹೋದ ರಾಗಖಂಡ ಅವರ ತಲೆಯೊಳಗೆ ಹೊಕ್ಕು ವಿಪರೀತ ಬಾಧೆ ಕೊಡುತ್ತಿತ್ತಂತೆ. ಆದ್ದರಿಂದ, ಇಳಿರಾತ್ರಿ ಸಮಯದಲ್ಲಿ ಗಜಪತಿ ಕಡೆಯಿಂದ ಬಿಡಾರದೊಳಕ್ಕೆ ನುಸುಳಿಬಂದ ಗೂಢಚಾರನೊಬ್ಬ ರಾಯರ ಮಂಚದ ಕೆಳ ಗಿಂದ ಕಠಾರಿ ಸಮೇತವಾಗಿ ಹೊರಬಂದಾಗ ರಾಯರು ಅವನನ್ನು ಬಂಧಿಸಿ ದಂಡನಾಯಕರ ಹತ್ತಿರ ತಂದು 'ನೀವು ನಾಯಕರಾಗಿರುವುದು, ದಂಡ' ಅಂತ ಹೇಳಿ ರೇಗಿದರಂತೆ. ಹೀಗೆ, ನಮ್ಮ ವಂಶಜರ ಗಾನ ವಿಜಯನಗರ ಸಾಮ್ರಾಜ್ಯದ ಉಳಿವಿಗೂ ಏಳಿಗೆಗೂ ಕಾರಣಭೂತವಾಗಿತ್ತು.

ಇವೆಲ್ಲ ಈಗ ಹಳೇ ಕಥೆಯಾಗಿ ಹೋಯಿತು! ನೀವು ನಂಬುತ್ತೀರೋ ಏನೋ? ಈ ಊರಲ್ಲಿ ಅನೇಕರಿಗೆ ನಾನು ಹೇಳಿದೇನೆ ಇದನ್ನ! ಒಬ್ಬರೂ ನಂಬಿಲ್ಲ ಇದುವರೆಗೂ!

ನಮ್ಮ ಪೂರ್ವಿಕರು ಈ ಊರಿಗೆ ಬಂದ ಮೇಲೆ ಪಡಬಾರದ ಕಷ್ಟ ಗಳನ್ನೆಲ್ಲ ಅನುಭವಿಸಿ ಕಡೆಗೆ "ಹಳೇ ಗಾಣದ ಹಿಂಡಿಯೇ ಗತಿ" ಎಂಬ ಹಾಗೆ, ಸಂಗೀತವನ್ನೇ ಅಭ್ಯಾಸ ಮಾಡಿ ಹಿಂಡಿದರು. ಈ ಊರೇನು ಗಂಧರ್ವಲೋಕವಲ್ಲ ಆದ್ದರಿಂದ, ಊರಿನ ಯೋಗ್ಯತೆಗೆ ತಕ್ಕ ಘನವಿದ್ವಾಂಸ ರಾಗಲು ಅವರಿಗೆ ಬಲು ಬೇಗ ಸಾಧ್ಯವಾಯಿತು.

ಸಂಗೀತಗಾರ ಅಂತ ಅನ್ನಿಸಿಕೊಂಡುಬಿಟ್ಟರೆ, ಈಗಿನ ಕಾಲದಲ್ಲಿ ಅವನ ಹೊಟ್ಟೆಗೆ ತಾಳಹಾಕುವ ಸಂದರ್ಭ ಒದಗುವುದಿಲ್ಲ. ತೊಡೆ ತಟ್ಟಿಕೊಂಡು ಸುಖವಾಗಿ ಜೀವಿಸಬಹುದು, ನಡತೆ ನುಡಿತ ಎರಡೂ ಶುದ್ಧವಾಗಿದ್ದರೆ, ಗನ್ನ ಗತಕ, ಯಾವುದೂ ಮಾಡದೆ ಆಸಾಮಿ ಸಭ್ಯನಾಗಿದ್ದರೆ, ಅಲ್ಲವೆ ಹೇಳಿ! ಪುಣ್ಯಾತ್ಮರು ನಮ್ಮವರು ಸರಸ್ವತಿ ಅಂತ ಒಂದು ಹೆಣ್ಣುದೇವತೆ

ಕಲ್ಪಿಸಿ ಅವಳ ಕೈಗೆ ವೀಣೆ ಕೊಟ್ಟರು! ಪುಸ್ತಕ ಕೊಟ್ಟರು! ಜಪಸರವನ್ನೂ ಕೊಟ್ಟರು, ಅನ್ನಿ! ಅವತ್ತಿನಿಂದ ಹೆಣ್ಣಿಗೂ ಸಂಗೀತಕ್ಕೂ ಗಂಟು, ಆದ್ದರಿಂದ ಕನ್ಯಾರ್ಥಿಗಳಾಗಿ ಮನೆಮನೆ ನುಗ್ಗುವ ವಿದ್ಯಾವಂತ ತರುಣರೂ, ಅವರನ್ನು ನುಕರಿಸುವ ಅವಿದ್ಯಾವಂತ ತರುಣರೂ "ಹುಡುಗಿಗೆ ಹಾಡು ಕಲಿಸಿದೀರಾ?" ಅಂತ ಕೇಳುತ್ತಾರೆ ಆದ್ದರಿಂದಲೇ ನಾವು ಬದುಕುತ್ತಿರುವುದು

ಹಾಡಿನ ರಾಗವೇನು? ತಾಳವೇನು? ಶ್ರುತಿ ಎಷ್ಟನೆಯುದು—ಬಿಳಿ ಒಂದೋ ಕರಿ ಎರಡೋ? ಅದರ ಸಾಹಿತ್ಯವೇನು, ಭಾವವೇನು, ಭಾಷೆ ಯಾವುದ, ಕರ್ತೃ ಯಾರು?—ಮುಂತಾದ್ದು ಯಾವುದೂ ಅಳಿಯನಿಗೆ ತಿಳಿ ಯದಿದ್ದರೂ, ಸಂಗೀತದ ವಿಷಯದಲ್ಲಿ ಆತನ ತಲೆ ತೂತು ಬಿದ್ದ ಸೋರೆ ಬುರುಡೆಯಾದರೂ, ಆಕೆ ಬಂದು ಹಾರ್ಮೋನಿಯಂ ಹಿಡಿದು ಒಂದು ವರ್ಣ ಒಂದು ಕೀರ್ತನೆ ಹಾಡಿ ಹೋಗಬೇಕು "ಸಾಕ್ಷಾತ್ ಕೋಗಿಲೆ!" ಅಂತ ಆಕೆಯ ಪರವಾಗಿ ಯಾರಾದರೊಬ್ಬರು ಮೆಚ್ಚಲೇಬೇಕು.

ಹೀಗಿರುವುದರಿಂದ ನಮಗೆ ಯಾವ ಕೊಂಪೆಯಲ್ಲೂ ನಾಲ್ಕು ಕಾಸು ಬಂದೇ ಬರುತ್ತೆ. ಕೊಂಪೆ ಆದಷ್ಟೂ ಕಾಸು ಜಾಸ್ತಿ, ಅನ್ನಬಹುದು ಯಾಕೆಂದರೆ "ಸ್ವಾಮಿ! ಮೊದಲೇ ಹಾಳು ಹಂಪೆ! ಹಳ್ಳಿ ಹುಡುಗಿ! ಬೆಡಗಿಲ್ಲ ಬಿನ್ನಾಣವಿಲ್ಲ! ಒರಟು ಕೈ! ಪೈಲ್ವಾನ್ ಮೈ! ಅಂತ ಅಸಹ್ಯಪಟ್ಟುಕೊಳ್ಳುತ್ತಾರೆ, ಕನ್ಯಾರ್ಥಿಯರು ಕಂಠವಾದರೂ ಚೆನ್ನ ಅನ್ನಿಸೋಣ! ಎರಡೇ ಎರಡು ಹಾಡು ಚೆನ್ನಾಗಿ ಕಲಿಸಿಬಿಡಿ" ಅಂತ ಅಂಗಲಾಚುತ್ತಾರೆ. ಸರಿ! ಸರಳೆ ಜಂಟಿವರಿಸೆ ಗೀತೆ ಕೀರ್ತನೆ ಅಂತ ನಮ್ಮ ವ್ಯವಸಾಯಕ್ಕೆ ಪ್ರಾರಂಭ ಒಂದು ಹೆಣ್ಣುಮಗುವನ್ನು ಧೈರ್ಯವಾಗಿ ಕನ್ಯಾರ್ಥಿ ಎದುರು ನಿಲ್ಲಿಸಲು ತಂದೆತಾಯಿಗಳು ನಮಗೆ ಕನಿಷ್ಠ ಪಕ್ಷ ಅರವತ್ತು ಎಪ್ಪತ್ತು ರೂಪಾಯಾದರೂ ಕೊಡಬೇಕಾಗುತ್ತದೆ

· ಗಂಡು ದೇವರು ಹಾಗಲ್ಲ ಅವರ ಕೈಗೆ ಯಾರೂ ವೀಣೆ ಕೊಟ್ಟಿಲ್ಲ ಗದೆ, ಶೂಲ, ಪಾಶ, ಅಂಕುಶ ಮುಂತಾದ ಆಯುಧಗಳನ್ನೇ ಅವರು ಹಿಡಿದು ನಿಂತಿದ್ದಾರೆ ಸಂಗೀತ ಸಾಧನ ಅಂತ ಹೇಳಬೇಕಾದರೆ ಬರೀ ಶಂಖ ವಾದ್ಯ ಒಂದೇ! ತುಂಬುರು ನಾರದರು ತಂಬೂರಿ ಹಿಡಿದಿದ್ದರೂ ಅವರದು ಭಜನೆ, ಸಂಗೀತಕ್ಕೆ ಸೇರಿಲ್ಲ ಆದ್ದರಿಂದಲೋ ಏನೋ ಗಂಡಿಗೂ ಗಾನಕ್ಕೂ ಗಂಟುಬೀಳದೆ ಇದ್ದದ್ದು... ...

ಏನು? ಗಂಡಪ್ಪನ ವಿಷಯವೇ? ಮರೆತು ಬಿಟ್ಟೆನೇ?..ಹೌದು! ನನ್ನ ರಾಗಾಲಾಪನೆಯಲ್ಲೇ ನಾನು ಕಾಲ ಕಳೆದು ಬಿಟ್ಟೆ ಅಲ್ಲವೇ ಹೇಳಿ!

ಪಕ್ಕದ ಮನೆಯುವರಿಗೂ ನಮ್ಮ ಮನೆಯುವರಿಗೂ ಮಾತುಕತೆ ನಿಂತು ಈಗ ಸುಮಾರು ಇಪ್ಪತ್ತು ವರ್ಷ ಆಗಿರಬಹುದು ನಿಮ್ಮ ಗುಂಡಪ್ಪನ ಉಪನಯನದ ದಿವಸ ಅವರ ಮನೆಯಲ್ಲಿ ಸ್ಥಳ ಸಾಲದು ಅಂತ ನಮ್ಮ ಮನೆಯಲ್ಲೂ ಊಟಕ್ಕೆ ಎಲೆ ಹಾಕಿದರು ಅಲ್ಲಿರದ ಪದಾರ್ಥಗಳನ್ನು ತಂದು ಇಲ್ಲಿ ಕುಳಿತಿದ್ದವರಿಗೂ ಅವರ ಮನೆಯುವರೇ ಬಡಿಸುತ್ತಿದ್ದರು ಆ ಸಂದರ್ಭದಲ್ಲಿ ನಾವು ಅವರಿಗೆ ಸೇರಿದ ಒಂದು ಕುಕ್ಕೆ ಲಾಡುವನ್ನು ಕದ್ದು ಬಚ್ಚಿಟ್ಟು ತಿಂದೆವು ಅಂತ, ಪಂಡಿತರ ತಾಯಿ ದೂರಿದರು ಗುಂಡಪ್ಪನ ತಾಯಿ ಅಂದರೆ, ಆಕೆಯ ಸೊಸೆ, ಈ ಪಿತೂರಿಗೆ ಸೇರಿದ್ದರೆಂದೂ, ಇದಾದನಂತರ ದಿನವೂ ನಮ್ಮ ಮನೆಗೆ ಬಂದು, ನಮ್ಮ ಜೊತೆ ಕೂತು ಮಾಲನ್ನು ತಿನ್ನುತ್ತಿದ್ದರು ಎಂದೂ ಆಕೆ ಊರಲ್ಲೆಲ್ಲ ಸಾರಿದರು ಉಪನಯನದ ದಿನ ಊಟದ ಮಧ್ಯದಲ್ಲೇ ಕುಕ್ಕೆ ವಿಷಯವಾಗಿ ರಂಪವೆದ್ದಾಗ, ಆಹ್ವಾನಿತರಾದ ಒಬ್ಬರು ಪೋಲೀಸ್ ಇನ್ಸ್ಪೆಕ್ಟರು ಎದ್ದು ಬಂದು, ಎಂಜಿಲು ಕೈಯಿಂದಲೇ ನಮ್ಮ ಮನೆಯಲ್ಲಿದ್ದ ಹೆಡಗೆ ಗಡಿಗೆಗಳನ್ನೆಲ್ಲಾ ಮಗುಚಿ ಶೋಧನೆ ನಡೆಸಿದರು ಆದರೂ, ಆಕೆ ಬಾಯಿ ಮಾತ್ರ ನಮ್ಮನ್ನು ದೂಷಿಸುತ್ತಲೇ ಇತ್ತು.

ಅಂದಿನಿಂದ ನಮಗೂ ಅವರಿಗೂ ಮನಸ್ತಾಪ ಹೊತ್ತಿ ಈಗ ಎಂದಿಗೂ ಆರದ ಕುದಿತದಲ್ಲಿ ನಿಂತಿದೆ ಅವರ ಮನೆಯಿಂದ ಗುಂಡೂನು ಗಂಗೂನೂ ನಾವು ಈ ಕಡೆ ಸ್ವರ ಕಲಿಯುವಾಗ ಅಪಸ್ವರದಲ್ಲಿ ಕೆಮ್ಮುತ್ತಿದ್ದರು ಗುಂಡ ಓದುವುದಕ್ಕೆ ಅಂತ ಪುಸ್ತಕ ಹಿಡಿದು ಕೂತರೆ ನಾನೂ ನನ್ನ ತಂಗಿಸೂ ತಿದಿ ಒತ್ತಿದ ಹಾಗೆ ಹಾರ್ಮೋನಿಯಂ ಒತ್ತುತ ಕಾಮವರ್ಧಿನಿ· ರಾಗ ಹಿಡಿದು ಶಿವಶಿವಶಿವ ಎನರಾದಾ ಅಂತ ಕೇಳುತ್ತಿದ್ದೆವು ಭವಭಯಬಾಧ ಅಂತ ಕೂಗಿ ನಿಸಾನಿದಾ ಪಾಮಾಗಾಮಾ ಪಾದಾಪಾ ಪಮಗಮ ಪದ ಅಂತ ಹಾಡಿ, ಸಂಗತಿ ಹಾಕಿ, ಭಾಗವತುಲತೋ ಘೋಷಿಂಚಿ, ಗೊಂದಲ ಎಬ್ಬಿಸಿ ಅವನು ತರಹರಿಸುವ ಹಾಗೆ ಮಾಡುತ್ತಿದ್ದೆವು ಆಚೆ ಮನೆಯಲ್ಲಿ ಶ್ರಾದ್ಧ ಬಂದರೆ, ನನ್ನನ್ನ ಕರೆದು ನನ್ನ ತಾಯಿ, "ತಮ್ಮ" (ನನ್ನ ಹೆಸರು

ಶ್ರೀಕಂಠ, ಕರೆಯುವುದು ತಮ್ಮಯ್ಯ ಅಂತ, ಆದರೆ, ಅಗತ್ಯವಾಗಿ ನನ್ನಿಂದ ಏನಾದರೂ ತುರುತ್ತಿನ ಕೆಲಸ ನಡೆಯಬೇಕಾದರೆ ತಮ್ಮು ಅಂದರೆ ಸರಿ, ನಾನು ಸೋತುಬಿಡುತ್ತಿದ್ದೆ!) "ತಮ್ಮು! ಕೊಂಚ ಕಾಲ ಭೈರವಿ ಬೊಗಳೋ"! ಅನ್ನುವಳು ನಕಲಿಗೆ ಅಂತ ನಾನು ನಾಯಿಗಳ ಬೊಗಳಾಟವನ್ನು ಸಂಗೀತದ ಧಾಟಿಯಲ್ಲಿ ಸ್ವರಸಮೇತ ಅನುಕರಣ ಮಾಡಲು ಕಲಿತಿದ್ದೆ. ಪಂಡಿತರ ಕಿವಿಗೆ ಕರ್ಕಶವಾಗಿ ಕೇಳಬೇಕು ಅವರ ಪಿತೃಗಳು ಕೊಕ್ಕರಿಸಬೇಕು, ಎಂಬುದೇ ನನ್ನ ತಾಯಿಯ ಉದ್ದೇಶವಾದ್ದರಿಂದ ನಾನು ಅವರ ಮನೆಯಲ್ಲಿ ಬ್ರಾಹ್ಮಣ ಭೋಜನ ಮುಗಿಯುವ ತನಕ ಇಲ್ಲಿ ಕೂತು ಊಳಿಡುತ್ತಿದ್ದೆ! ನಮ್ಮ ಮನೆಯಲ್ಲಿ ನಮ್ಮಪ್ಪನ ಶ್ರಾದ್ಧದ ದಿನ ಗುಂಡಪ್ಪನಿಗೆ ಅವನ ಅಜ್ಜಿ ಪ್ರೇರೇಪಣ ಮಾಡುವರು ಆದರೆ ಅವನಿಗೆ ಸಂಗೀತ ಬರದು ಅವನ ಬೊಗಳು ಇತ್ತ ಕಡೆ ಕೇಳಿಸಿ ನಮ್ಮಪ್ಪನನ್ನ ಪೀಡಿಸುತ್ತಿರಲಿಲ್ಲ, ಆಗ ಗೂಬೆಯ ಹಾಗೆ ಕೊಂಚಹೊತ್ತು ಅವನ ತಂಗಿ ಕೂಗಿ ನಮಗೆ ತೊಂದರೆ ಕೊಡಲು ಯತ್ನಿಸುವಳು ಆದರೆ ಹಗಲು ಹೊತ್ತು ಕೂಗುವ ಗೂಬೆಗೆ ಯಾವ ಪಿತೃ ತಾನೆ ಹೆದರೀತು? ಹೀಗಾಗಿ, ತಮ್ಮ ಮನೆ ಮಾರಿ ದೇಶಾಂತರ ಹೊರಟು ನೆಮ್ಮದಿ ಸಂಪಾದಿಸಲು ಪಂಡಿತರು ತುಂಬಾ ಪೇಚಾಡಿದರು ಅವರ ಗೋಳೆಲ್ಲ ನಮಗೆ ಈ ಕಡೆ ಕೇಳಿಸುವುದು ಏಕೆಂದರೆ, ಅವರ ತಾಯಿಗೆ ಕಿವುಡು! ಅವರ ಹತ್ತಿರ ಪಂಡಿತರು ಯಾವುದನ್ನೂ ಗೋಪ್ಯವಾಗಿ ಯೋಚನೆ ಮಾಡುವ ಹಾಗಿಲ್ಲ ಊರು ಬಿಟ್ಟು ಹೊರಡುವುದಕ್ಕೆ ಆಕೆ ಹೂಂಗುಟ್ಟಲೇ ಇಲ್ಲ "ಹೇನಿಗೆ ಹೆದರಿ ಹಜಾಮನನ್ನ ಕರೆಸಿದಳಂತೆ—ಹಾಗಾಗುತ್ತೆ" ಅಂದುಬಿಟ್ಟರು. ಮನೆಯನ್ನ ಬಾಡಿಗೆಗಾದರೂ ಕೊಟ್ಟು ಬೇರೆ ಬೀದಿಗೆ ಬದಲಾಯಿಸುವುದು ವಾಸವನ್ನ, ಅಂತ ನೂರಾರು ಸಲ ಯೋಚನೆ ಮಾಡಿದ್ದಾರೆ. ಆದರೆ, ಅವರು ಅದರ ವಿಷಯವಾಗಿ ಪರಸ್ಪರ ಆಡುವ ಮಾತುಗಳನ್ನು ಕೇಳಿದ ಕೂಡಲೇ ನಾವೂನೂ ಶರಕ್ಕೆ ಪ್ರತಿಶರ ಹೂಡುವೆವು. ನಮ್ಮದು ಯಾವಾಗಲೂ ಒಂದೇ ಉಪಾಯ ರಾಮಬಾಣದ ಹಾಗೆ ಒಂದು ಕೂಪಬಾಣ! ನಟ್ಟನಡುರಾತ್ರಿ ಎದ್ದು ಹಿತ್ತಲ ಬಾಗಿಲ ಹತ್ತಿರ ಕೂಗುವುದು. "ಅಯ್ಯೋ! ಪಂಡಿತರ ಮನೆ ಬಾವಿಗೆ ಯಾರೋ ಬಿದ್ದರು!" ಅಂತ. ಸರಿ! ಎದುರುಮನೆ ಎಂಕೋಜಿ, ಹಿಂದಿನ ಮನೆ ಹಯಾತ್ ಖಾ ಬೀಟ್ ಪೋಲೀಸ್ ಭೀಮಪ್ಪ ಎಲ್ಲರೂ ಓಡೋಡಿ ಬರುತ್ತಾರೆ. ಯಾಕೆ ಬಾವಿ

ಬಡಿದಿರಿ, ಅಂತ ನಮ್ಮನ್ನ ವಿಚಾರಿಸುತ್ತಾರೆ. ಅತ್ತೆ ಮೇಲೆ ಮುನಿಸಿಕೊಂಡು ಪಂಡಿತರ ಹೆಂಡತಿ ಬಾವಿಗೆ ಬಿದ್ದರು ಅಂತ ತೋರುತ್ತೆ ಎಮ್ಮೆ ಗುಂಡು ಎತ್ತಿಹಾಕಿದಷ್ಟು ಸಪ್ಪಾಯಿತು, ಅಂತ ನನ್ನ ತಾಯಿ ಒದರುತ್ತಾಳೆ ಭೀಮಪ್ಪ ಗೋಡೆಹಾರಿ ಬಾವಿಯೊಳಕ್ಕೆ ಬಗ್ಗಿನೋಡಿ, ತಾಯೀ! ತಾಯೀ! ಅಂತ ಹಲುಬುತ್ತಾನೆ ಆಕೆ ಮನೆಯೊಳಗಿಂದ ಬರುವಾಗ, "ಯಾಕೆ ತಾಯಿ? ಬಾವಿಗೆ ಬೀಳಲಿಲ್ಲವೇ ಇನ್ನೂ?" ಅಂತ ಕೇಳಿ ಹೊರಟುಹೋಗುತ್ತಾನೆ "ಸದ್ದೆಲ್ಲಿಂದ ಬಂತು ಮತ್ತೆ?" ಅಂತ ಬೆಳಗಾಗುತ್ತಲೂ ಬೀದಿಯಲ್ಲಿ ಚರ್ಚೆಯಾದಾಗ "ಯಾವುದೋ ಪ್ರೇತ ಪಿಶಾಚಿ ಇರಬೇಕು! "ಸತ್ತೇ" ಅಂತ ಚೀರಿಕೊಂಡು ಬಿತ್ತು" ಅಂತ ನನ್ನ ತಾಯಿ ಹರವರಿಸುವರು! ಹೀಗೆ ನಾವು ಅವರ ಮನೆ ಬಾಡಿಗೆ ಮಾತನ್ನು ಮುಂದುವರಿಸುತ್ತಾ ಇದೇವೆ. ಅವರೂ, ಪಾಪ, ಆಡುವುದಕ್ಕಿಲ್ಲ, ಓಡುವುದಕ್ಕಿಲ್ಲ, ಅಂತ ಅವರು ನರಳುತ್ತಾ ಇದಾರೆ

ನಮ್ಮ ಸಂಗೀತ ಕೂಡ ಅವರಿಗೆ ವಿಚಿತ್ರ ಹಿಂಸೆಯಾಗಿದೆ ಎಂದು ಎಂಕೋಜಿ ಹತ್ತಿರ ಎಗರಾಡಿದರಂತ! ಆಗ ಅವನು "ಬಿಡಿ ತಾಯಿ! ಹೊಡೆದುಕೊಳ್ಳಲಿ! ಎಷ್ಟರತನಕ ಹೊಡೆದುಕೊಳ್ಳುತ್ತಾರೆ? ಗಂಟಲು ಒಡೆಯುವ ತನಕ ತಾನೆ?" ಅಂತ ಸಂತೈಸಿದನಂತೆ "ನಿಮ್ಮ ಕಿವಿಯಂತೂ ತೂತು! ನಿಮ್ಮ ಸೊಸೆ ಕಿವೀನೂ ತೂತು ಬೀಳಲಿ, ಸುಮ್ಮನಿರಿ" ಅಂದನಂತೆ. ಹಯಾತ್‌ಖಾ ಹತ್ತಿರವೂ ಹೇವರಿಸಿದರಂತೆ ಅವನು, ಕೂಗಲಿ, ತಾಯಿ! ರಾತ್ರಿ ಹನ್ನೆರಡುಗಂಟೆ ತನಕ ಕೂಗಲಿ! ನನ್ನ ಬೀಬಿ ಒದರಾಟ ನನ್ನ ಬೇಬಿ ಕಿರಲಾಟ ಎರಡೂ ಸಂಪೂರ್ಣ ಮುಳುಗಿಹೋಗುತ್ತದೆ, ಅವರ ಬೊಬ್ಬೆಯೊಳಗೆ!" ಅಂದನಂತೆ.

ಆವರೂ ಮುದುಕಿ, ಪಾಪ, ಮಗನ ಕೈಲಿ ಐದಾರು ಅರ್ಜಿ ಬರೆಸಿ ಮುನಿಸಿಪಾಲಿಟಿ ಡಬ್ಬದೊಳಗೆ ಹಾಕಿ ಬಂದಿದಾಳೆ, ನಮ್ಮ ಗಂಟಲುಗಳನ್ನ ಕೊಯ್ದು ಕೊಡಬೇಕು, ಅಂತ! ಇನ್ನೂ ಆ ಡಬ್ಬದೊಳಕ್ಕ ನಾವು ಮಾತ್ರ ಕೈ ಹಾಕಿಲ್ಲ. ಅವರ ಮನೆ ಗೊಂದಲಗಳನ್ನು ಸಹಿಸಿಕೊಂಡೇ ಕುಳಿತಿದ್ದೇವೆ, ಕಿವಿಗಳೆಲ್ಲ ನೆಟ್ಟಗಿದ್ದರೂ! ಅಲ್ಲೇನು ಆರ್ಭಟಕ್ಕೆ ಕಡಿಮೆ ಇಲ್ಲ. ಇಬ್ಬರು ಅತ್ತೆಯರು, ಇಬ್ಬರು ಸೊಸೆಯರು! ಕಾಳಗದ ಕೋಲಾಹಲವೋ ಕೋಲಾಹಲ! ಬಟ್ಟಲು ಬಸಿ ಬಿಂಗುರಿ ಬಾಸಣ ಎಲ್ಲವೂ ಆಯುಧಗಳೇ! ಸಿಡಿಲು,

ಮಿಂಚು, ಆ ಮೇಲೆ ಬಹಳ ಹೊತ್ತಿನವರೆಗೆ ಮಳೆ ಆದರೂ, ನಾವು ಸುಮ್ಮನಿದ್ದೇವೆ ಏಕೆಂದರೆ, ಸಂಸಾರದ ಸಾರವೇ ಸಮರ! ಅಲ್ಲವೇ? ನೀವೇ ಹೇಳಿ!

ಇತ್ತೀಚಿನವರೆಗೆ ಪಕ್ಕದ ಮನೆ ಸುದ್ದಿ ನಮ್ಮ ಕಿವಿಗೆ ಬೀಳುತ್ತಿದ್ದದ್ದು ಈ ಬಿರುಕುಗಳಿಂದ ಬರುವ ಶಬ್ದದ ಮೂಲಕ ಬೆಳಗಿಂದ ಬೆಳಗಿನವರೆಗೂ ನಡೆಯುವ ಕೋಲಾಹಲದ ಧ್ವನಿಗಳೇ ನಮ್ಮ ಬಾತ್ಮಿಗಳು, ಬೆಳಕು ಹರಿಯುವ ಮೊದಲೇ ಗುಂಡಪ್ಪನ ಹುಡುಗ ಎದ್ದು ಬಿಡುತ್ತಾನೆ, ಅವನೇ ಅಲ್ಲಿ ಆಲಾರಂ ಗಡಿಯಾರ "ಅಜ್ಜಿ ಹತ್ತಿರ ಮಲಗಿಸು" ಅಂತ ರೋದನ ಮಾಡುತ್ತಾನೆ "ಯಾವ ಅಜ್ಜಿಯೋ? ಕೆಪ್ಪಿಯೇನೋ?" ಅಂತ ಆಕೆ ಗದರಿಸುವ ಗಲಾಟೆಯಲ್ಲಿ ಮುದುಕಿಗೆ ಎಚ್ಚರವಾಗುತ್ತೆ ಸರಿ! ಮುದುಕಿ ಗೂರಲು ಸಹಿತ ಎದ್ದು ಉದ್ದಕ್ಕೂ ಕೆಮ್ಮುತ್ತಾ ಬಚ್ಚಲು ಮನೆಗೆ ನುಗ್ಗಿ ಒಲೆ ಹೊತ್ತಿಸಿ ಬೆಂಕಿ ಕಾಯುತ್ತಾಳೆ ಗುಂಡನ ತಾಯಿ ಉದಯರಾಗ ಹೇಳುತ್ತಾ ಅಡಿಗೆ ಮನೆ ಎಲ್ಲ ಉಡುಗಿ ಸಾರಿಸಿ, ಪಾತ್ರೆಗಳನ್ನೆಲ್ಲ ಪಡಲಿಟ್ಟು ತಿಕ್ಕಬೇಕಾದವುಗಳನ್ನು ಹೊರಕ್ಕೆಸೆಯುವಳು ಆ ಶಬ್ದ ಕೇಳಿ ಶಪಿಸುತ್ತಾ ಗುಂಡನ ಹೆಂಡತಿ ಮಗು ಬೆನ್ನಿಗೆ ಎರಡು ಬಾಸುಂಡೆ ಬಿಗಿದು ಅವನನ್ನು ಗುಂಡಪ್ಪನ ಮಡಿಲೊಳಗೆ ಹಾಕಿ ಬಾವಿ ಹತ್ತಿರಕ್ಕೆ ಧಾವಿಸುವಳು ಅವನಿಗೆ ಆಲಿಬಾಬನ ಕಥೆ, ಕಿಂದರಿ ಜೋಗಿಯ ಕಥೆ, ಪುಣ್ಯಕೋಟಿ ಕಥೆ ಇವುಗಳಲ್ಲೊಂದನ್ನು ಹೇಳಿ, ಮತ್ತೆ ನಿದ್ದೆಮಾಡಿಸಿ, ಗುಂಡಪ್ಪ ಭಗವದ್ಗೀತೆಗೆ ಸಿದ್ಧ ಮಾಡುತ್ತಾನೆ ಅಷ್ಟು ಹೊತ್ತಿಗೆ ದೊಡ್ಡತ್ತೆ ಒಂದು ಕಡೆ, ಸಣ್ಣ ಸೊಸೆ ಎದುರುಗಡೆ, ನಡುವೆ ತಾಯಿ, ಹೀಗೆ ಬಾವಿ ಸಮೀಪದಲ್ಲೇ ಕುರುಕ್ಷೇತ್ರ ತಯಾರಾಗಿರುತ್ತದೆ. ಆ ರಣರಂಗವನ್ನು ಅವಲೋಕಿಸಲಾರದೆ, ಗೀತೆಯನ್ನು ಕೆಳಗಿಟ್ಟು ಗಾತ್ರವೆಲ್ಲ ಸೀದು ಹೋದಹಾಗೆ ಕೂತು, "ಯಾಕೊ, ವಿಪರೀತಕ್ಕೆ ಬಂತಲ್ಲ?" ಅಂತ ನಿಟ್ಟುಸಿರುಬಿಡುತ್ತಾನೆ ಅಡಿಗೆ ಮನೆಯಲ್ಲಿ ಕಾಫಿಗೆ ನೀರು ಕಾಯಿಸುತ್ತಿರುವ ಸೊಸೆ ಹತ್ತಿರ ಹೋಗಿ ಮುದುಕಿ ವಿಶ್ವರೂಪ ತಾಳಿ ಆ ಅಮ್ಮಿಲ್ಲಾದ್ರಿ ಮಗಳನ್ನೂ ಅವಳ ಪತೀಪುತ್ರರನ್ನೂ ಆಶೀರ್ವಾದ ಮಾಡುತ್ತಾಳೆ. ಆಕೆ ದರದರನೆ ಮುಂದುವರಿದು ಗುಂಡಪ್ಪನನ್ನ ಆಹ್ವಾನಿಸುತ್ತಾಳೆ. ಗುಂಡಪ್ಪ, "ತಾಳೆ! ಬಿಸಿ ಸ್ವಲ್ಪ ಆರಲಿ!" ಅಂತ ಹಿಂಜರಿಯುತ್ತಾನೆ. ಆಪಕ್ಷದವಳು, "ಹೊಳೆ ನೀರಿಗೆ ದೊಣೆ ನಾಯಕನ ಅಪ್ಪಣೆ ಯಾಕೆ?

ಬಂದು ಕುಡಿಯಿರಿ ಧೈರ್ಯವಾಗಿ” ಅಂತ ಹುರಿದುಂಬಿಸುತ್ತಾಳೆ. ಗುಂಡಪ್ಪ ಓಡೋಡುತ್ತ ಹೋಗಿ ಸ್ನಾನ ಸಂಧ್ಯಾವಂದನೆ ಪೂಜೆ ಇತ್ಯಾದಿಗಳನ್ನು ಮುಗಿಸಿ ಪಾನ ಪೂರೈಸಿ “ವಾತಪುತ್ರಾ” ಅಂತ ಕುಂಬಿಕ್ಕಿ ಮನೆ ಮುಂಭಾಗಕ್ಕೆ ಬರುತ್ತಾನೆ

ಆಗ ಟಪಾಲು ತೆಗಿದುಕೊಂಡು ಈರನೋ ಬೀರನೋ ಹೊಸಲಲ್ಲೇ ಕೆನೆಯುತ್ತಿರುತ್ತಾರೆ ಅವರನ್ನು ಕಳುಹಿಸಿದ ಮೇಲೆ, ಮಗನನ್ನು ಎಬ್ಬಿಸಿ, ಅವನ ಮುಖ ಮೂತಿಗಳನ್ನೊರಸಿ ಅವನಿಗೆ ಮತ್ತೆ ಆಲಿಬಾಬನ ಕಥೆ ಹೇಳಿ, ಕಾಫಿ ಕುಡಿಸಿ ಬಾವಿ ಹತ್ತಿರ ಕೂರಿಸುತ್ತಾನೆ ಆ ಹುಡುಗನೋ ಹದ್ದುಗಿದ್ದ ಯಾವುದೂ ಇಲ್ಲದ ಪೋಲಿ ನಾಲ್ಕು ವಯಸ್ಸಾದರೂ ಅ ಆ ಇ ಈ ಬರುವುದಿಲ್ಲ, ಗುಂಡಪ್ಪನನ್ನು ತೋರಿಸಿ, ಇವರು ಯಾರೋ ಅಂದರೆ ಗುಮಾಸ್ತೆ ಅಂತಾನೆ “ಲೋ! ಗುಮಾಸ್ತೆ” ಅಂತಲೇ ಅವನು ಅಪ್ಪನನ್ನು ಕರೆಯುವುದು. ಅವನ ಬಾಯಿ ಮೇಲೆ ಬಡಿಯುತ್ತಾನೆ, ಗುಂಡಪ್ಪ ಆದರೂ, ಹುಡುಗ ಮಾತ್ರ ತಿದ್ದಿಕೊಂಡಿಲ್ಲ ಅವನ ಚೇಷ್ಟೆಯಿಂದ ಹೆಂಗಸರೊಳಗೆ ದಿನೇ ದಿನೇ ಮನಸ್ತಾಪ ಹೆಚ್ಚುತ್ತಿದೆ ಅವನನ್ನು ಬಡಿದು ತಿದ್ದಬೇಕು ಅಂತ ತಾಯಿ, ಮುದ್ದಾಡಿಸಿ ತಿದ್ದಬೇಕು ಅಂತ ಗುಂಡಪ್ಪನ ಹೆಂಡತಿ, ತಿದ್ದಬೇಕಾಗಿಯೇ ಇಲ್ಲ ಅಂತ ಅಜ್ಜಿ, ಹೀಗೆ ಗಳಿಗೆಗಳಿಗೆಗೂ ಅವರಲ್ಲಿ ವಾಗ್ವಾದವೊಳಿತು ಕಾಳ್ಗಿಚ್ಚಿನಂತೆ ಬೆಳೆಯುತ್ತಿದೆ

ಬೆಳಗಿನ ಅಡಿಗೆಗೆ ತಾಯಿ, ರಾತ್ರಿಯದು ಅಜ್ಜಿಯ ಕೆಲಸ ಅಂತ ಅವರಲ್ಲಿ ಒಪ್ಪಂದವಾಗಿದ್ದಂತೆ ತೋರುತ್ತೆ ಏಕೆಂದರೆ, ಬೆಳಗ್ಗೆ ಅಡಿಗೆ ಮನೆಯಿಂದ ಕೇಳಿ ಬರುವುದು ದೇವರ ಸ್ತೋತ್ರಗಳು; ರಾತ್ರಿ ಉಬ್ಬಸದ ಒದ್ದಾಟ. ನಡು ನಡುವೆ ತಿಂಡಿ ಕಾಫಿ ತಯಾರಿಸುವುದು, ಸೊಸೆಯ ಇಲಾಖೆಗೆ ಸೇರಿದ್ದು ಸಾಮಾನ್ಯವಾಗಿ ಊಟಕ್ಕೆ ಕುಳಿತಾಗಲೇ ದಿನದ ತಿಸ್ರಗಳೆಲ್ಲವನ್ನೂ ಅವರು ಬಯಲಿಗೆಳೆದು ಇತ್ಯರ್ಥಮಾಡುತ್ತಿರುವುದು. ಆದ್ದರಿಂದ, ಊಟದ ವೇಳೆ ಸಟ್ಟುಗ, ತಪ್ಪಲೆ ಗಂಗಾಳ ಗಲಾಸು ಇವುಗಳ ಟಿಂಟಣಿಕೆಯ ಮಧ್ಯೆ ಗುಡುಗು ಮಿಂಚುಗಳ ಆರ್ಭಟವೂ “ಅಯ್ಯೋ” ಎಂಬ ಚೀತ್ಕಾರವೂ ನಮಗೆ ಕೇಳಿ ಬರುವುವು.

ಊಟವಾದ ಕೂಡಲೇ ಗುಂಡನ ತಾಯಿ ಮನೆಯಿಂದ ಹೊರಬಿದ್ದು, ಎದುರು ಬೀದಿಯ ಒಂದೆರಡು ಮನೆಗಳಿಗೆ ಭೇಟಿ ಇತ್ತು ಅಂಜನೇಯನ

ದೇವಸ್ಥಾನದಲ್ಲಿ ಅಖಂಡವಾಗಿ ನಡೆಯುತ್ತಿರುವ ಪುರಾಣ ಪ್ರವಚನಕ್ಕೆ ಹೋಗುತ್ತಾರೆ ರಾತ್ರಿ ಎಲ್ಲಿ ಯಾವ ಯಾರ ಹರಿಕಥೆ, ಶಿವಕಥೆ ಇದ್ದರೂ ಮನೆಯಿಂದ ಹೊರಹೊರಟು ಅದನ್ನು 'ಕೇಳುವ' ಪುಣ್ಯ, ಅಜ್ಜಿಗೇ ಮೀಸಲು. "ಮಲಗಿದರೆ ಕೆಮ್ಮು; ಕೂತರೆ ಸೊಮ್ಮು! ಕೆಮ್ಮಿಗಿಂತ ಸೊಮ್ಮೇ ವಾಸಿ" ಅಂತ ಹೇಳಿ ಆಕೆ ಅಲ್ಲಿಗೆ ಹರಿದು ಹೋಗಿ ಬಿಡುತ್ತಾಳೆ

ಗುಂಡಪ್ಪನ ಮಗ ಇನ್ನೂ ಶಾಲೆಗೀಲೆ ಸೇರಿಲ್ಲ ಮನೆಯಲ್ಲೇ ಇದ್ದು ಆಡಳಿತ ನಡೆಸುವುದೇ ಅವನ ಕಸಬು! ಆದ್ದರಿಂದ ಗುಂಡಪ್ಪನ ಹೆಂಡತಿ ತನ್ನ ಸೂರ್ಯಾಣ, ಹೊಲಿಗೆ, ಗಾಜಿನ ಕೊಳವಿ ತೋರಣ, ಎಲ್ಲವನ್ನೂ ಒತ್ತಟ್ಟಿಗಿಟ್ಟು ಅವನ ಸಂಗಡ ಕಾದಾಡುವುದರಲ್ಲೇ ಕಾಲ ಕಳೆಯುತ್ತಾಳೆ

ಸಂಜೆ ಗುಂಡಪ್ಪ ಬಂದ ಕೂಡಲೇ ಅವನ ಮಗ ಮನೆಯವರ ಮೇಲೆಲ್ಲಾ ಮೊಖದ್ದಮೆ ದಾಖಲುಮಾಡುವನು ಅವನು, 'ವಾತಾತ್ಮಜಾ' ಅಂತ ಕೊರಗಿ "ನನಗೆ ಕಾಫೀನೂ ಬೇಡ, ಏನೂ ಬೇಡ" ಅಂತ ರೇಗಿ, ರುಮಾಲನ್ನು ಕಿತ್ತೆಸೆದು ಬೆವರು ಸಹಿತ ಅಂಗಿಯಿಂದ ಹೊರಬಂದು, ನಾರಾಯಣರಾಯರ ಮನೆಗೆ ಕಂಬಿ ಕೀಳುವನು ರಜಾದಿನಗಳಲ್ಲೂ ಅಷ್ಟೆ ಈಚೆಗೆ ನಾರಾಯಣರಾಯರೇ ಅವನ ತ್ರಿಕಾಲ ಮಿತ್ರ! ಆತ ಒಂದು ಒಂದೂವರೆ ಗಂಟೆ ಹೊತ್ತಿಗೆ ಪಕ್ಕದ ಮನೆ ಮುಂದೆ ಬಂದು ಸೈಕಲ್ ಬೆಲ್ ಅಲ್ಲಾಡಿಸಿ, "ಮಿಸ್ಟರ್ ಗುಂಡಪ್ಪ" ಅನ್ನುವನು, ಕೀಚಲು ಧ್ವನಿಯಲ್ಲಿ! ಕೊಂಚ ಹೊತ್ತು ಮೌನವಾಗಿದ್ದು, ಮತ್ತೆ ಬಲವಾಗಿ ಬೆಲ್ ಅಲ್ಲಾಡಿಸಿ, "ರೀ! ಮಿಸ್ಟರ್!" ಅಂತ ಅಷ್ಟೇ ಕೀಚುವನು! ಒಳಗಿಂದ ಮಿಸ್ಟರ್‌ರವರು "ಬಂದೆ! ರಾಯರೇ!" ಅಂತ ದಡಬಡಾಯಿಸಿಕೊಂಡು ಎದ್ದು, ಮಗನನ್ನ ಹೆಂಡತಿಗೊಪ್ಪಿಸಿ, ಬರುತ್ತೇನೆ ಅಂತ ತಾಯಿಗೆ ಹೇಳಿ, ಹೊರಟೆ ಅಂತ ಅಜ್ಜಿಗೆ ಸನ್ನೆ ಮಾಡಿ, ತಲೆ ಮೇಲೆ ರುಮಾಲು ಹೇರಿ, ಬೀದಿಗಿಳಿದ, ಸೈಕಲ್‌ನವರ ಜೊತೆ ನಡೆದು ಹೋಗುವನು, ಇಸ್ಪೀಟ್ ಆಡುವುದಕ್ಕೋ ಏನೋ?

ಕತ್ತಲಾದ ಮೇಲೆ ಮನೆಗೆ ಬರುವನು, ಕದನ ನಿಂತು ಶಾಂತಿ ನೆಲೆಸಿರ ಬಹುದೆಂಬ ಊಹೆಯ ಮೇಲೆ. ಕೈಯಲ್ಲೇನಾದರೂ ಕಾಯಿ ಪಲ್ಯ, ಹೂ ವೀಳ್ಯದೆಲೆ, ಹಣ್ಣುಹಂಪಲು, ಬಿಸ್ಕತ್ತು, ಕಡಲೆಪುರಿ ಇರುವುದು ಆದರೆ, ಅದರಲ್ಲೊಂದಕ್ಕೂ ಜಗ್ಗದೆ, ಹೆಂಗಸರೂ ಮಗುವೂ ಅವನನ್ನ ಕಾಳಗಕ್ಕೇ

## ೮: ನೀತಿಗೌಡ

ಎಂಕೋಜಿ ಮನೆ ಇದಲ್ಲ, ಪಕ್ಕದ್ದು ನಾನು ಇದಿಷ್ಟನ್ನು ಮಾತ್ರ ಬಾಡಿಗೆಗೆ ತೆಗಿದುಕೊಂಡು ಬೀಡಿ ಸಾಬೂನು ಎಲೆ ಅಡಿಕೆ ನಶ್ಯದಪುಡಿ ಚಿಲ್ಲರೆಸಾಮಾನು ಮಾರುತ್ತಾ ಇದೇನೆ, ಹತ್ತು ಹನ್ನೆರಡು ವರ್ಷಗಳಿಂದ ಬನ್ನಿ! ಕೂತುಕೊಳ್ಳಿ ಪೇಪರ್ ಕೊಡಲೇ! ಈ ಪೇಪರಿಗೋಸ್ಕರವೇ ಇಲ್ಲಿಗೆ ಬೆಳಗಿನ ಹೊತ್ತು ಜನಗಳು ಬರುವುದು, ಓಹೋ! ಅವರೂ ಬರುತ್ತಾರೆ! ಅಂದರೆ ನಿತ್ಯ ಬರುವುದಿಲ್ಲ ಅವರ ಮನೆಗೆ ಪೇಪರ್ ತರಿಸುತ್ತಾ ಇದ್ದರು ಇನ್ನೂ ತರಿಸಬಹುದು ಅಂದರೆ, ಆಗಾಗ ಬೇಡ ಅಂತಾರೆ ಆಗಾಗ ಕೊಡು ಅಂತಾರೆ ಅವೆಲ್ಲ ಗುಂಡಪ್ಪನವರ ಮನೆಯ ಒಳ ಆಡಳಿತದ ಸೂತ್ರದಾರ ಯಾರ ಕೈಯಲ್ಲಿದೆ ಅನ್ನುವುದರ ಮೇಲೆ ಹೋಗುತ್ತೆ ಆ ಕಿವುಡು ಮುದುಕಿ ಕೈ ಮೇಲಾಗಿದ್ದರೆ, ಪೇಪರಿಲ್ಲ, ತಾಯಿಯದಾದರೂ ಊಹೂಂ, ಹೆಂಡತಿಯ ರಾಜ್ಯಭಾರವಾದರೆ ಗುಂಡಪ್ಪನವರಿಗೆ ಪೇಪರುಂಟು; ಹೇಗಿದೆ? ಆದ್ದರಿಂದ ಅಲ್ಲಿಗೆ ಪೇಪರ್ ಬರದೆ ಇರುವ ದಿನಗಳಲ್ಲಿ ಗುಂಡಪ್ಪನವರು ಇಲ್ಲಿಗೇ ಬರುತ್ತಾರೆ ಅವರು ಅದನ್ನು ಹಿಡಿದು ಓದುತ್ತಾ . ಕೂತರೆ ನಾನು ಬೇರೊಬ್ಬರನ್ನೂ ಅದರೊಳಕ್ಕೆ ಬಗ್ಗುವುದಕ್ಕೂ ಕೂಡ ಬಿಡುವುದಿಲ್ಲ. ಕಣ್ಣುರುಳಿಸಿಕೊಂಡು,ನೊಣ ಮುತ್ತಿಕೊಂಡ ಹಾಗೆ ಬಂದುಬಿಡುತ್ತವೆ, ಹೆಡ್‌ಗುಮಾಸ್ತೆ ಅಂತ ಕೊಂಚವೂ ಹೆದರಿಕೆಯೇ ಇಲ್ಲ ನಮ್ಮೂರಿನವರು ನಮ್ಮ ಬೀದಿಯುವರು ಪಂಡಿತಪುತ್ರರು ಅಂದಮಾತ್ರಕ್ಕೆ ಗೌರವ ಕೊಡಬೇಡವೇನು? ಯಾವಾಗಲೂ, ಕೊಟ್ಟು ತೆಗೆದುಕೊಳ್ಳಬೇಕು

ಅವರ ತಂದೆಯುವರನ್ನು ನಾನು ಚೆನ್ನಾಗಿ ಬಲ್ಲೆ.. ಮೊನ್ನೆ ಮೊನ್ನೆಯುವರೆಗೂ ಇದ್ದರಲ್ಲಾ ಕಡೆಕಡೆಗೆ ತುಂಬಾ ಪೇಚಾಡಿ ಹೋದರು ಇಲ್ಲಿ ಬಂದರೆ, ನೀವು ಕೂತಿದೀರಲ್ಲಾ ಅಲ್ಲೇ, ಕೂಡುವರು "ಕೆಂಚಣ್ಣಾ! ನಮ್ಮ ದೇಶದ ಖಾಯಿಲೆಗೆ ಯಾವುದೋ ದೇಶದ್ದು ಔಷಧಿ ಬಂತಲ್ಲೋ" ಅನ್ನುವರು. ನಾನು, "ಯಾಕೆ, ಪಂಡಿತರೆ! ಮೆಣಸಿನಕಾಯಿ ಪಪಾಯಿಹಣ್ಣು ಸೀಮೆಅಕ್ಕಿ ಬಟಾಟೆ ಸೇಬು ಗುಲ್‌ಖ಼ — ಇವೆಲ್ಲ ನಮಗೆ ಒಗ್ಗಿಲ್ಲವೆ?" ಅನ್ನುವೆ. ಅವರ ಮುಖ ಕೆಂಪಗಾಗುವುದು. ಸುಮ್ಮನೆ ಕೊಂಚಹೊತ್ತು

ಹಾಗೆಯೇ ಕೂತಿದ್ದು ಒಂದು ಚಿಟಿಕಿ ನಶ್ಯ ನೇದಿಬಿಟ್ಟು ಹೊರಟೇಬಿಡುವರು. ಅವರಿಗೆ ಕಾಲ ಅನುಕೂಲವಾಗಿದ್ದಾಗ ನಾನು ನೂರಾರು ರೂಪಾಯಿನಷ್ಟು ಶುಂಠಿ ದ್ರಾಕ್ಷಿ ಕಟುಕರೋಹಿಣಿ ಮೆಣಸು ಹಿಪ್ಪಲಿ ಮುಂತಾದವುಗಳನ್ನು ಲಾಭಕ್ಕೆ ಮಾರಿದೇನೆ ಆದ್ದರಿಂದ ಒಳಗಿನ ಅಂತರಾತ್ಮ, ಅಯ್ಯೋ, ಅಂತ ಅರಚುತ್ತ ತಕ್ಷಣ ನಾನೇ ಎದ್ದುಹೋಗಿ ಅವರನ್ನು ಹಿಂದಕ್ಕೆ ಕರೆದು ಅವರ ಬುರುಡೆಯಲ್ಲಿ ನಶ್ಯ ತುಂಬಿ ಕಳುಹಿಸುವೆ ನಿಮ್ಮ ಗುಂಡಪ್ಪನವರಿಗೆ ಅಂತ ಅವರ ಹತ್ತಿರ ಒಂದು ಕಲ್ಲುಸಕ್ಕರೆ ಚೂರನ್ನೂ ರವಾನಿಸುವೆ.

ಅದೆಲ್ಲ ಈಗ ಕನಸಾಗಿ ಹೋಯಿತು ಈಗ ಪಂಡಿತರ ಮನೆಯಿಂದ ನಮಗೆ ಬರುವ ವ್ಯಾಪಾರ ಅಂದರೆ ಒಂದು ಬಿಲ್ಲೆಗೆ ಕಾಫಿಪುಡಿ, ಎರಡು ಬಿಲ್ಲೆಗೆ ಹುಣಸೆಹಣ್ಣು, ಮಗುವಿಗೆ ಒಂದು ಪೆಪ್ಪರ್ಮೆಂಟು, ಒಂದು ಕಾಸಿಗೆ ಮುಂಡಕ್ಕಿ ದಿನ ಬೆಳಗಾದರೆ, ಇಷ್ಟೆ, ಚೂರು, ಪಾರು! ನಾನೇ ಇಲ್ಲಿಂದ ಹೋಗಿ ತಲಪಿಸಬೇಕು ಪುಸ್ತಕದಲ್ಲಿ ಬರೆದಿಟ್ಟುಕೊಳ್ಳಬೇಕು ಸಣ್ಣ ಪುಟ್ಟ ಹುಡುಗರೇ ಇಲ್ಲ ತೆಗೆದುಕೊಂಡುಹೋಗುವುದಕ್ಕೆ ಗುಂಡಪ್ಪನವರ ಮಗ ಇನ್ನೂ ಹೀಚು! ರಸ್ತೆಯಲ್ಲೇ ಚೆಲ್ಲಿಬಿಡುತ್ತದೆ ಅತ್ತಿಗೆ ತಿಳಿಯದೆ ನೊನೆ ತರಿಸಿಕೊಳ್ಳುವ ಸಕ್ಕರೆ ರವೆ ಬಾದಾಮಿ ಗೋಡಂಬಿ ಇವು ಬೇರೆ, ಇತ್ತೀಚೆಗೆ ಗಂಡಪ್ಪನವರ ತಾಯಿಯ ತಾಪತ್ರಯವೂ ನನಗೆ ತಪ್ಪಿದ್ದಲ್ಲ, ಆಕೆ ಬೇರೆ "ಕೆಂಚಣ್ಣ! ಪುರಾಣಕ್ಕೆ ಹೋಗುತ್ತಿದೇನ ತಟ್ಟೆಯಲ್ಲಿ ಹಾಕಲಿಕ್ಕೆ ಒಂದು ಬಿಲ್ಲೆ ಕೊಡು ನಿನಗೆ ಪುಣ್ಯ ಬರುತ್ತೆ" ಅಂತಾರೆ "ಕೆಂಚಣ್ಣ! ನಿನ್ನ ಹೆಸರಿನಲ್ಲಿ ಒಂದು ಕಾಯಿ ಒಡೆಯುತ್ತೇನೆ, ಆಂಜನೇಯನಿಗೆ ನಿನ್ನ ಮನೆ ಹೆಂಚಿನ ಮೇಲೆ ಮಂಗಗಳ ಕಾಟವಾದರೂ ಕಡಿಮೆ ಆದೀತು" ಅಂತಾರೆ. ಆ ಈರ ಬೇರೆ, "ಕೊಡು ಕೆಂಚಣ್ಣ! ಎದ್ಗುಮಾಸ್ತೆ ಹೇಳವರೆ! ಅಂತ ಕುತ್ತಿಗೆ ಮೇಲೇನೆ ಕೂತುಬಿಡುತ್ತಾನೆ ಅಂತು ಇಂತು, ಬರೆದು ಬರೆದು ಬೆರಳೆಲ್ಲ ಸವೆದುಹೋಯಿತು

ಹಳೇ ಬಾಕಿ ತೀರಿಸದ ಹೊರತು ಮುಂದಕ್ಕೆ ಮಾತನಾಡಬೇಡಿ, ಅಂತ ಮುಖತಃ ಹೇಳೇಬಿಡುವುದು, ಅಂತ ಹಲ್ಲು ಕಚ್ಚಿಕೊಂಡು ಕೂತಿದ್ದರೂ, ಆ ಮಹರಾಯರ ಮೋರೆ ನೋಡುತ್ತಲೂ, ನನಗೆ ಯಾಕೊ, ನನ್ನ ಮಗನ ನೆನಪು ಬರುವುದು. ಅವನು ಬೆಳೆದಿದ್ದರೆ ಇಷ್ಟೇ ಮೋಪಾಗಿರುವನು; ಇಷ್ಟೇ

ಬಣ್ಣ ಇದ್ದಿರುವುದು ಅವನಿಗೂ, ಆದರೆ, ಅವನು ಈಗ ಬೆಳೆಯುತ್ತಿರುವುದು ಆ ಶ್ರೀರಾಮನ ಪಾದದಲ್ಲಿ .

ಕೂತುಕೊಳ್ಳಿ, ಸ್ವಾಮಿ! ಎಂಕೋಜಿಗಿಂತ ಗುಂಡಪ್ಪನವರ ವಿಷಯ ನನಗೆ ಗೊತ್ತಿದೆ ನನ್ನ ಹತ್ತಿರ ಬಂದು ತನ್ನ ಮನಸ್ಸಿನಲ್ಲಿರುವುದನ್ನ ತೋಡಿಕೊಳ್ಳುವ ಹಾಗೆ, ಅವರು ಎಂಕೋಜಿ ಹತ್ತಿರ ಎಂದೂ ಎರಡು ಮಾತಿಗಿಂತ ಹೆಚ್ಚು ಆಡಿದ್ದೇ ಇಲ್ಲ

ಗುಂಡಪ್ಪನವರು ಪೇಪರ್ ಹಿಡಿದು ಕೂತರೆ, ನಾನು ಅವರನ್ನ ನೂರಾರು ವಿಷಯ ಕೇಳುವೆ. ಅವರೂನೂ ಅವರ ಬಿ ಎ ಯೊಳಗಿರುವುದನ್ನೆಲ್ಲ ನನ್ನ ತಲೆಗೆ ತುಂಬಲು ಪ್ರಯತ್ನ ಪಡುವರು ಆದರೆ, ಇದಿಷ್ಟು ಸಾಮಾನುಗಳ ಬೆಲೆ, ಸೇರಿಗೆಷ್ಟು, ಪಾವಿಗೆಷ್ಟು, ಅಸಲ್ ಎಷ್ಟು, ಲಾಭನೆಷ್ಟು, ನಿನ್ನೆ ಎಷ್ಟು, ಇವತ್ತೆಷ್ಟು ಎಂಬ ಗುಣಾಕಾರದಲ್ಲಿ ನನಗೆ ಯಾವುದೂ ನೆನಪಿರುವುದಿಲ್ಲ ಯಾವನೋ ಒಬ್ಬ ನಮ್ಮೂರಲ್ಲಿ, ಯಾರೋ ಸಂಗೀತಕಾರರನ್ನ "ಸ್ವಾಮಿ! ಕಲ್ಯಾಣಿರಾಗದಲ್ಲಿ ಒಂದು ಕೀರ್ತನೆ ಹೇಳಿ! ಈವಾಗ ನೀವು ಹೇಳಿದ್ದು ಕಲ್ಯಾಣಿಯಾದರೆ, ಪುನಃ ಅದನ್ನೇ ಹಾಡಬೇಕಾದ್ದಿಲ್ಲ" ಅಂದನಂತೆ. ಹಾಗೆಯೇ, ಕೇಳಿದ ಪ್ರಶ್ನೆಯನ್ನೇ ಮತ್ತೆ ಕೇಳಿದ್ದೂ ಉಂಟು ನಾನು, ಎಷ್ಟೋ ಸಲ

ಅನೇಕ ದಿನಗಳಲ್ಲಿ ಗುಂಡಪ್ಪನವರು ನನ್ನ ಮಾತುಗಳನ್ನು ಕಿವಿಗೆ ಹಾಕಿಕೊಂಡೇ ಇಲ್ಲ ಇಲ್ಲ. ಕೊಂಚ ಹೊತ್ತು ಹಾಗೆಯೇ ಕುಳಿತಿದ್ದು, ಕಂಬನಿ ತುಂಬಿದ ಕಣ್ಣುಗಳಿಂದ ನನ್ನನ್ನ ನೋಡಿ "ಕೆಂಚಣ್ಣ! ನೀನು ಪುಣ್ಯವಂತ" ಅನ್ನುವರು "ಹಾಗನ್ನಬೇಡಿ, ದೇವರು! ನನ್ನ ಮಗ ಇದ್ದಿದ್ದರೆ, ಈಗ ನಿಮ್ಮ ಹಾಗೆ ಬೆಳೆದಿರುವನಲ್ಲಾ" ಅಂತ ನಾನು ಹೇಳಿದರೆ, "ಆತನೂ ಪುಣ್ಯವಂತ!" ಅಂತ ಹೇಳಿ, ಇಳಿದು ಹೊರಟೇ ಬಿಡುವರು, ಪಂಡಿತರ ಹಾಗೇನೇ ದಡದಡನೆ!

ಮುಖ್ಯವಾಗಿ ಅವರಿಗೆ ಹೆಂಗಸರದೇ ಹಾವಳಿ ಜಾಸ್ತಿ! ಒಂದು ದಿನ ಅಲ್ಲಿ, ನೀವು ಕೂತಿದೀರಲ್ಲಾ ಆಲ್ಲೇ, ಬಂದು ಕೂತು ಕೊಂಚ ನಗುನಗುತ್ತಾ ಮಾತು ತೆಗೆದರು ಗುಂಡಪ್ಪನವರು... "ಕೆಂಚಣ್ಣ! ಈ ಕಾಲದಲ್ಲಿ ನೋಡು, ಹೆಂಗಸರೊಬ್ಬರಿಗೂ ಆರೋಗ್ಯವೇ ಚೆನ್ನಿಲ್ಲ! -ಹಿಂದೆಲ್ಲ ಅವರು ಒಬ್ಬರನ್ನೊಬ್ಬರು ಭೇಟಿಯಾದಾಗ, ಸೀರೆ ನಮೂನೆ ಸರದ ನಮೂನೆ ಮಾತನಾಡು

ತ್ತಿದ್ದರು. ಈಗ ಅವೆಲ್ಲ ಇಲ್ಲ.... ತಲೆನೋವು ಅಂತ ಪ್ರಾರಂಭಿಸಿ ಬಿಡುತ್ತಾರೆ. ವೈದ್ಯಪುಷ್ಟಿಯಾಗಿದ್ದರೆ ಅವಮಾನ, ಲತಾಂಗಿತನಕ್ಕೆ ಅಪಕೀರ್ತಿ ಅಂತ ತಿಳಿದಿದ್ದಾರೆ ಇಂಗ್ಲೀಷ್ ಡಾಕ್ಟರುಗಳು ಕೂಡ 'ತಲೆನೋವು' ಎಂಬ ಒಂದು ಸಣ್ಣ ತೊಂದರೆಯ ನಿವಾರಣೆಗಾಗಿ ಕಣ್ಣಿಗೆ ಕನ್ನಡಕ, ಕಾಲಿಗೆ ಚಪ್ಪಲಿ, ಹಲ್ಲಿಗೆ ಉಚ್ಚಾಟನೆ, ಕಿವಿಗೆ ದ್ರಾವಕ, ಗಂಟಲಿಗೆ ಕತ್ತರಿ ಇವೆಲ್ಲವನ್ನೂ ವಿಧಿಸುತ್ತಾರೆ ಹೇಳಿದ್ದನ್ನೆಲ್ಲ ಮಾಡಿಸಿದರೂ ತಲೆಸಿಡಿತ ವಾಸಿಯಾಗುವುದಿಲ್ಲ, ಕೆಂಚಣ್ಣ!" ಅಂದರು

"ಒಳಗಿನ ಕೊರಗು ಹೊರಗಿನ ರೋಗವಾಗಿ ಕಾಣಿಸುತ್ತೋ, ಏನೋ ಹಾಳು!" ಅಂದೆ ನಾನು 'ಹೂಂ ಕೆಂಚಣ್ಣ!' ಅಂದರು

"ಹೆಂಗಸು ಅಂದರೆ ಗೃಹಲಕ್ಷ್ಮಿ ಅಲ್ಲವೆ ಸ್ವಾಮಿ! ಆ ತಾಯಿ ಏನು ಕೇಳಿದರೂ ತೆಗಿದು ಕೊಟ್ಟುಬಿಡಿ, ಇಲ್ಲ ಅಂತ ಅನ್ನಬೇಡಿ ಒಂದಿಷ್ಟು ಗೋಡಂಬಿ ದ್ರಾಕ್ಷಿ ಕೇಳಿಯಾರು ಬಸುರಿಯೋ ಏನೋ, ಇನ್ನೇನು ಮಹಾ ಬೇಕಾದೀತು?" ಅಂದೆ, ನಾನು, ಮೆಲ್ಲಗೆ

"ಆಕೆ ಕೇಳುವುದನ್ನೆಲ್ಲ ಕೊಟ್ಟರೆ ಮನೆಯಲ್ಲಿ ಬೇರೆ ಕೆಲವರಿಗೆ ತಲೆನೋವು ಉಂಟಾಗುತ್ತಲ್ಲಾ, ಕೆಂಚಣ್ಣ? ಅದೂ ಅಲ್ಲದೆ, ಖಾಯಿಲೆಯಾಗಿರುವಾಗ ನಾವು ಜನಗಳನ್ನ ಪ್ರೀತಿಯಿಂದ ಶುಶ್ರೂಷೆ ಮಾಡುವುದೇ ತಪ್ಪು! ನಾನು ಓದಿದೇನೆ, ಹಾಗಂತ!" ಅಂದರು, ಅಲ್ಲೇ ಕೂತುಕೊಂಡು

"ಯಾವ ರಾಕ್ಷಸ ಬರೆದ, ಸ್ವಾಮಿ, ಅಂತಹ ಪುಸ್ತಕವನ್ನ? ಅವನಿಗೇನಾದರೂ ಮಕ್ಕಳು ಮರಿ ಇವೆಯೋ? ಹಾಸಿಗೆ ಹಿಡಿಯುತ್ತಲೂ ಅವನ್ನು ತಿಪ್ಪೆಗುಂಡಿಗೆ ಎತ್ತಿ ಬಿಸಾಕಿ ಬಿಡುತ್ತಾನೋ?' ಅಂತ ನಾನು ರೇಗಿದೆ

"ಹಾಗಲ್ಲ, ಕೆಂಚಣ್ಣ! ನಾವೇನು ಮಾಡುತಿದೇವೆ, ಈಗ? ಕಲ್ಲುಗುಂಡಿನ ಹಾಗೆ ಓಡಾಡುತ್ತ ಇರುವಾಗ ಉಂಡೆಯಾ, ತಿಂದೆಯಾ, ಮಲಗಿದೆಯಾ, ಎದ್ದೆಯಾ ಅಂತ ವಿಚಾರಿಸುವುದೇ ಇಲ್ಲ ಪ್ರೀತಿಯ ಮಾತು ಒಂದನ್ನೂ ಆಡುವುದಿಲ್ಲ, ಆದರೆ ಮೈ ಬೆಚ್ಚಗಾಗಿ ಜ್ವರ ಅಂತ ಕಾಲು ಚಾಚಿದರೆ ಸರಿ ಶಯನೋತ್ಸವ ನಡೆಸಿ ಷೋಡಶೋಪಚಾರಮಾಡಿ ಕಂಬಳಿ ಸೇವೆ ಬೀಸಣಿಗೆ ಸೇವೆ ಗಂಜಿ ಸೇವೆ ಎಲ್ಲ ಸಾಂಗವಾಗಿ ಮಾಡಿ ಶುಶ್ರೂಷಿಸುತ್ತೇವೆ ಆದ್ದರಿಂದ ನಮ್ಮ ಪ್ರೀತಿಗಾಗಿ ತವಕಪಡುತ್ತಿರುವ ಅವರ ಒಳ

ಜೀವ ತಲೆನೋವು ಜ್ವರ ಅಂತ ನೆಪ ಹುಡುಕಿ ಹಾಸಿಗೆ ಹಿಡಿದು ನಮ್ಮನ್ನೇ ಕಾಡಿಸುತ್ತದೆ” ಅಂತ ವಿವರಿಸಿದರು.

“ಹಾಗಂತ ಹೇಳಿ ನಾವೂ ಕಾಡಿಸಬೇಕೇನು?”, ಅಂದೆ.

“ಖಾಯಿಲೆ ಬಂದರೆ ಹೆಚ್ಚು ಮುದ್ದಾಡಿಸಬಾರದು!” ಅಂದರು.

“ಸುಖವಾಗಿರುವಾಗ ಅಲಕ್ಷ್ಯವನ್ನೂ ಮಾಡಬಾರದು, ಅಲ್ಲವೆ?” ಅಂತ ನಾನೂ ಸೇರಿಸಿದೆ

“ಹಂ ಅದು ಮುಖ್ಯ ಕೆಂಚಣ್ಣ!. . ಆದರೆ, ಅದೇ ನಾಸ್ತಿ ನಮ್ಮ ಮನೆಯಲ್ಲಿ!” ಅಂತ ಕೊರಗಿದರು.

“ನೀವೇನೋ ಓದಿದ್ದೀರಿ! ಪ್ರಪಂಚಾನೆಲ್ಲ ಅರೆದು ಕುಡಿದು ಜೀರ್ಣಿಸಿ ಕೊಂಡಿದೀರಿ! ಆದರೆ ಅವರಿಬ್ಬರೂ ಕೋಪಮಂಡೂಕಗಳಲ್ಲವೆ, ಸ್ವಾಮಿ!” ಅಂದೆ

“ಹೌದು, ಕೆಂಚಣ್ಣ! ನಾನು ಓದಿದ್ದೆಲ್ಲ ಹೀಗೆ ಸಂಕಟಪಡುವುದಕ್ಕೆ, ಅಷ್ಟೆ! ನೇರವಾದ ದಾರಿ ಗೊತ್ತಿದ್ದೂ ದೂರವಾದ ದಾರಿಯಲ್ಲಿ ಸುತ್ತಬೇಕಾಗಿದ್ದರೆ ಹೇಗಾಗುತ್ತೆ? ಯೋಚನೆ ಮಾಡು” ಅಂದರು ನಾನು ಸುಮ್ಮನೆ ತಕ್ಕಡಿ ತಿಕ್ಕುತ್ತಾ ಕೂತಿದ್ದೆ.

ಮೊನ್ನೆ ಅವರು ಮುಖಕ್ಕೆ ಪೇಪರ್ ಮರೆಮಾಡಿಕೊಂಡು ಓದುತ್ತಾ ಇದ್ದರು, ಯಾವುದೋ ಯುದ್ಧದ ವಿಷಯವನ್ನ ಹಾರನಹಳ್ಳಿಯಿಂದ ಒಬ್ಬ ಹೈದ ಈ ಊರಿಗೆ ಬರುತ್ತಾ ಒಂದು ಬೂದುಕುಂಬಳಕಾಯಿ ಹಿಡಿದು ಕೊಂಡು ಬಂದ “ಕೊಡು ಎರಡಾಣೆಗೆ!” ಅಂದೆ ಕೊಟ್ಟು ಬಿಟ್ಟು ಕಾಸಿಸ್ಕೊಂಡು ಆಸ್ಪತ್ರೆ ಕಡೆ ಓಡಿದ ಎದುರು ಬೀದಿ ಶ್ರೀಕಂಠಯ್ಯನ ಮನೆಯಲ್ಲಿ ಸಂಡಿಗೆಗೊಂದು ಕಾಯಿ ಬೇಕಿತ್ತು ಅಂತ ಹೇಳಿದ್ದರು ಅಂಗಡಿ ಯಲ್ಲಿ ಒಬ್ಬರು ಕಾವಲಿದಾರಲ್ಲಾ ಅಂತ ಸರಕ್ಕನೆ ಅವರ ಮನೆಗೆ ನುಗ್ಗಿ, ಅದನ್ನ ಕೊಟ್ಟು ಓಡಿ ಬಂದು ಕುಪ್ಪಳಿಸಿ ಕೂತು ಬಂದ ನಾಲ್ಕಾಣೆಯನ್ನ ಈ ಪೆಟ್ಟಿಗೆಯೊಳಗಿಟ್ಟೆ ಹಿಡಿದು ಬಿಟ್ಟರಲ್ಲಾ, ಹೆಡ್ ಗುಮಾಸ್ತೆಯವರು, “ನೀನು ಮಾಡಿದ್ದು ಅನ್ಯಾಯ! ನೀನು ಪಾಪಿ” ಅಂತ! ಆಫೀಸಿನಲ್ಲೂ ಹೀಗೆಯೇ ಅಂತೆ ಅವರ ದುರ್ಬೀನು ದೃಷ್ಟಿ! ತನ್ನ ಕಾಗದದ ಮೇಲೇನೆ ಕೈಯಾಡಿಸುತ್ತಾ ಇರುವುದು, ನಿಗಾ ಎಲ್ಲ ಮತ್ತೊಬ್ಬನ ಕೈವಾಡದ ಮೇಲೆಯೇ ಇರುತ್ತದಂತೆ!.. .... ಈರ ಹೇಳಿದ್ದ “ಕೆಂಚಣ್ಣ! ಎರಡಾಣೆ

ಪದಾರ್ಥಕ್ಕೆ, ಎರಡು ನಿಮಿಷದೊಳಗೆ ನಾಲ್ಕಾಣೆ ದೋಚಿದ್ದನ್ನ ದೇವರೊಪ್ಪು ವುದಿಲ್ಲ." ಅಂದರು. ನನಗೆ ಗಾಬರಿಯಾಯಿತು, ರೇಗಿತು. "ಬಿಡಿ, ಸ್ವಾಮಿ! ಕೈಗೆ ಬಂದ ಮಗನನ್ನೇ ದೇವರು ಅನಾವಶ್ಯಾಗಿ ಕಸಿದುಕೊಂಡು ಬಿಟ್ಟರಲ್ಲಾ, ನಾನು ಮನೆಯಲ್ಲಿಲ್ಲದ ಹೊತ್ತಿನಲ್ಲಿ!" ಅಂದೆ.

ಏಕೆ ಹೇಳುತ್ತೇನೆ, ಅಂದರೆ, ಹೀಗೇನೆ ನನಗೂ ಅವರಿಗೂ ವಾಗ್ವಾದ ನಡೆಯುವುದು ಏಂಕೋಜಿಗೇನು ಗೊತ್ತು ಅದರ ಸ್ವಾರಸ್ಯ! ಅವರು ಭಾರಿ ಹದ್ದೇದಾರರ; ನಾನು ದಾರಿಯಲ್ಲಿ ಬಿದ್ದಿರುವ ಕಲ್ಲಿನ ಚೂರು. ಆದರೂ ಗುಂಡಪ್ಪನವರ ಹೃದಯ ಎಂಥದ್ದು! 'ಹಾಗಲ್ಲ, ಕೆಂಚಣ್ಣ, ಹೀಗಲ್ಲ ಕೆಂಚಣ್ಣ' ಅಂತ ಆ ಉದ್ದಿನ ಮೂಟೆ ಮೇಲೆ ಕೂತು, ನಮಗೆ ಹೇಳುವ ಅವರ ರೀತಿ ಯನ್ನು ತೋರಿಸುವುದಕ್ಕೋಸ್ಕರ ಈ ವಿಷಯ ಎತ್ತಿಕೊಂಡೆ, ಈಗ. ದೊಡ್ಡ ತನ ಅಂದರೆ, ಅದು! ಜರೀ ರುಮಾಲು ಜಬರ್ದಸ್ತು ಜವಾನರು ಅವೆಲ್ಲ ಬರೀ ಜಳ್ಳು!

ಮಗನನ್ನ ಜ್ಞಾಪಿಸಿಕೊಂಡು ಮನಸ್ಸು ಚಿಕ್ಕದು ಮಾಡಿಕೊಂಡೆನಲ್ಲ ಅಂತ, ಅವರು, "ಕೆಂಚಣ್ಣ! ನೀನಿಲ್ಲದ ಹೊತ್ತಿನಲ್ಲಿ ನಿನ್ನ ಮನೆಗೆ ದೇವರು ಕನ್ನ ಕೊರೆದು ನಿನ್ನ ಚಿನ್ನ ಹೊತ್ತರು ಅಂತ ದೂರುತ್ತೀಯಲ್ಲಾ! ಆದರೆ, ನಿನ್ನ ಮನೆ ಮಡದಿ ಮಗ ನೀನು ಎಲ್ಲವೂ ದೇವರದೇ ಆಗಿರುವಾಗ ಇಟ್ಟುಕೊ ಅಂತ ಹೇಳಿ ಕೊಟ್ಟಿದ್ದನ್ನ ಕೇಳಿದಾಗ ಕೊಟ್ಟು ಕೈಮುಗಿಯುವುದಲ್ಲವೆ ನಿನ್ನ ಕರ್ತವ್ಯ?" ಅಂದರು "ಬಿಡಿ ಸ್ವಾಮಿ! ನಾನು ಯಾವಾಗ ಈ ಮಾತೆತ್ತಿದರೂ ನೀವು ಇದನ್ನೇ ಹೇಳುತ್ತಿದೀರಿ! ನಿಮ್ಮ ಮಾತು ನಿಜ ಅಂತ ಇಲ್ಲಿ ಕೂತಾಗ ತೋರುತ್ತೆ; ಮನೆಗೆ ಹೋಗುತ್ತಲೂ ತಲೆಕೆಳಗಾಗಿ ಬಿಡುತ್ತದೆ" ಅಂದೆ "ಅದಿರಲಿ, ಸ್ವಾಮಿ! ನಾನು ಮಾಡುವ ವ್ಯಾಪಾ ರವೇ ಪಾಪ ಅಂತ ನೀವು ಹೊಟ್ಟೆಮೇಲೆ ಪೆಂಗನಾಮ ಎಳೆದರೆ ನನ್ನ ಗತಿ ಏನು? ಶ್ರೀಕಂಠಯ್ಯನಂತಹ ಶಿಂಗ್ಲೀಕನಿಗೆ ಮೋಸಮಾಡಿದರೆ, ಅದೂ ಪಾಪ ಅಂತೀರಲ್ಲಾ?" ಅಂದೆ

"ಶಿಂಗ್ಲೀಕನಾದರೇನು ಇಂಗ್ಲೀಕನಾದರೇನು, ಮೋಸಕ್ಕೆಂದಿಗೂ ಮಾನ ಬರುವುದಿಲ್ಲ ಆತನಿಗೆ ಅದರ ಬೆಲೆ ಅಂದಾಜು ಮಾಡಲು ಬರುವು ದಿಲ್ಲವೆಂಬ ಧೈರ್ಯದಿಂದ, ನೀನು ಆರಾಣೆ ಕೇಳಿ ಐದಾಣೆಗಿಳಿಸಿ, ಅವರು ಮೂರಾಣೆ ಅಂತ ಎದ್ದು ನಾಲ್ಕಾಣೆಗೆ ಹತ್ತಿದಾಗ, ನೀನು ಏನೋ ಮಹಾ

ಉಪಕಾರ ಮಾಡುವವನ ಹಾಗೆ ನಟಿಸಿ ನಾಲ್ಕೂವರೆಗೆ ಇಳಿದು ಬಂದು, ಮತ್ತೆ ಮೂರು ನಿಮಿಷ ಚರ್ಚೆಮಾಡಿ ನಷ್ಟವೇ ಆಯಿತು ಅಂತ ಗೋಳಾಡಿ ನಾಲ್ಕಾಣೆಗೆ ಕೊಟ್ಟು ಬಂದು ನಗುನಗುತ್ತಾ ಪಾವಲಿಯನ್ನ ಪೆಟ್ಟಿಗೆಯೊಳ ಗಿಟ್ಟೆಯಲ್ಲಾ, ಈ ವ್ಯಾಪಾರದಿಂದ ನಿನ್ನ ಅಂತರಂಗದಲ್ಲಿ ಎಷ್ಟು ಧರ್ಮಚ್ಯುತಿ ಉಂಟಾಗಿದೆ ಎಂಬುದನ್ನು ನೀನು ಬಲ್ಲೆಯಾ?" ಅಂತ ಕೇಳಿದರು ಅವರ ಮಾತಿನಲ್ಲಿ ನಿಜವಾಗಿಯೂ ನೈರಾಶ್ಯ ತುಂಬಿತ್ತು

"ಅಯ್ಯೋ! ನಿಮ್ಮ ವ್ಯಾಪಾರಕ್ಕೂ, ನಮ್ಮ ವ್ಯಾಪಾರಕ್ಕೂ ಅಜಗಜಾಂತರ ಉಂಟು, ಸ್ವಾಮಿ! ಲಾಭ ಪಡೆಯುವುದು ಮಾರುವವನ ಧರ್ಮ; ನಷ್ಟ ಹೊಂದುವುದು ಕೊಳ್ಳುವವನ ಕರ್ಮ! ಇಷ್ಟಕ್ಕೇನೆ ವರ್ತಕರೆಲ್ಲರನ್ನೂ ನರಕಕ್ಕೆ ಸೆಳೆದರೆ, ಮಹಾಭಾರತದ ಕಾಲದಲ್ಲಿ ಕುಂತೀದೇವಿಯಲ್ಲಿ ಆ ಯಮನಿಗೆ ಧರ್ಮರಾಯನಂಥ ಮಗ ಹೇಗೆ ಹುಟ್ಟಿದ?" ಅಂದೆ ಹೆಡ್‌ಗುಮಾಸ್ತೆಯವರು ನಕ್ಕುಬಿಟ್ಟರು "ಮಹಾಭಾರತದಲ್ಲಿ ಯಮನ ಪಾಡು ಕಡೆಕಡೆಗೆ ನಾಯಿ ಪಾಡಾಗುತ್ತೆ, ಅದನ್ನ ಕಾಣೆ ನೀನು!" ಅಂತ ಹೇಳಿ ಪೇಪರ್ ಮಡಿಸಿ ನನ್ನ ಕೈಗೆ ಕೊಟ್ಟರು ಅವತ್ತೆಲ್ಲಾ ನನಗೆ ಒಳಗೆ ಏನೋ ಒಂದು ತರಹದ ತಳಮಳ ಪೆಟ್ಟಿಗೆಯೊಳಗೆ ಕಾಸಿಡುವುದಕ್ಕೆ ನಾಚಿಕೆ. ಮಧ್ಯಾಹ್ನ ಗುಂಡಪ್ಪನವರ ತಾಯಿ ಬಂದು ಪುರಾಣದ ತಟ್ಟೆಗೆ ಒಂದಾಣೆ ಸಾಲ ಕೇಳಿದಾಗ, "ಹಿಂದಕ್ಕೆ ಕೊಡಬೇಡಿ, ತಾಯಿ! ಬರೆದುಕೊಳ್ಳುವ ಕಷ್ಟ ತಪ್ಪುತ್ತೆ" ಅಂತ ಹೇಳಿ, ಕೊಂಚ ಸಮಾಧಾನ ಸಂಪಾದಿಸಿದೆ

ಸಣ್ಣಪುಟ್ಟ ಊರುಗಳಲ್ಲೆಲ್ಲ ಇಂದಾಗೆ ಗುಮಾಸ್ತೆ ಮನೆ ಮುಂದಿನ ಅಂಗಡಿಗಳೂ ಕೂಡ ಚಿಗುರಿ ಮಣ್ಣೆಣ್ಣೆ ಬುಡ್ಡಿ ಇಂಗಿಸಿ ಗ್ಯಾಸ್‌ಲೈಟ್ ಹೊತ್ತಿಸಿರುವಾಗ ನನ್ನಂಗಡಿ ಮುಂದಿನ ಪಂಡಿತರ ಮಗ ಹೆಡ್‌ಗುಮಾಸ್ತೆ ಆದಾಗ ನಾನು ಹಿಗ್ಗಿ ಹೀರೇಕಾಯಿ ಆಗಿಹೋದೆ ಇಂಥ ಜಾಗದಲ್ಲಿ ಕಾಸು ಕೂಡಿಸಬೇಕಾದರೆ, ಎರಡೇ ದಾರಿ ಮೊದಲನೆಯದು, ಗುಮಾಸ್ತೆಯರ ಮನೆಯಲ್ಲಿ ಮೂರು ಹೊತ್ತೂ ತಿಥಿ ಸಮಾರಾಧನೆ ಅಳಿಯಂದಿರಿಗೆ ಔತಣ ಬಾಣಂತನ ಆಗುತ್ತಲೇ ಇರಬೇಕು. ಆದರೆ, ಗುಂಡಪ್ಪನವರ ಮನೆಯೊಳಕ್ಕೆ ಇದುವರೆಗೂ ಯಾವ ಅಳಿಯನೂ ಇಣಿಕಿನೋಡಿಲ್ಲ ಮಕ್ಕಳುಮರಿ ಕೂಡ ಹೆಸರು ಹೇಳುವುದಕ್ಕೆ ಒಂದಿದೆ, ಅಷ್ಟೆ. ನಾನು ಎಷ್ಟೋಸಲ ಹೇಳಿದೆ ಅವರಿಗೆ; ಮನೆಯಲ್ಲಿ ಯಾವುದು ಇಲ್ಲದಿದ್ದರೂ ತೊಟ್ಟಿಲೊಂದು ಇರಬೇಕು,

ಅಂತ ಅದಕ್ಕವರು, 'ಕೆಂಚಣ್ಣಾ! ಮಗ ಬಂದಕೂಡಲೇ ಗಂಡ, ಭಂಡ; ಹೆಂಡತಿ ಗಂಡಾಲೀ! ಗೊತ್ತೆ?' ಅಂದರು ನಾನು 'ಗೊತ್ತಿಲ್ಲ,' ಅಂದೆ ನನಗೇನು ಗೊತ್ತು, 'ಗಂಡಾಲೀ' ಅಂದರೆ ಯಾವ ಯಕ್ಷಿಣಿಯೋ ಏನೋ?

ಹೆಡ್ ಗುಮಾಸ್ತೆಯ ಮನೆಯವರು ಮಾಡುವ ವ್ಯಾಪಾರ ಅಂದರೆ ಬಿಲ್ಲೆ ಬಿಲ್ಲೆಯದೇ! ಅಷ್ಟರಿಂದಲೇ ಅವರು ನೂರರ ತನಕ ಬಾಕಿ ಏರಿಸಿರುವಾಗ ಸಂತರ್ಪಣೆ ಆಗದೆ ಇರುವುದೇ ಮೇಲೆನಿಸುತ್ತದೆ. ಎರಡನೆಯ ದಾರಿ ಅಂದರೆ, ಹೆಡ್‌ಗುಮಾಸ್ತೆಯವರನ್ನ ಮನೆಯಲ್ಲಿ ಕಾಣುವುದೇ ಬುದ್ಧಿವಂತಿಕೆ ಅಂತ ಇಲ್ಲಿಗೆ ಒಂದು, ತಟ್ಟೆಯಲ್ಲಿಟ್ಟು ತೋರಿಸುವುದಕ್ಕಾಗಿ ಕೊಂಡುಕೊಳ್ಳುವ ಕಲ್ಲುಸಕ್ಕರೆ ಬಾದಾಮಿ ದ್ರಾಕ್ಷಿ ವೀಳ್ಯದೆಲೆ ಅಡಿಕೆ ಬಾಳೆಹಣ್ಣಿನಚೀಪು! ಅವರು ಈ ಪದಾರ್ಥಗಳಿಗೆ ಆಗ ನಾವು ಹೇಳಿದ ಬೆಲೆ ಕೊಡ್ತುತ್ತಾರೆ "ಕರ್ಪೂರ ಊದುಬತ್ತಿ ಕೂಡ ಇರಬೇಕ್ರಿ! ಎಲ್ಲರೂ ಹಾಗೆಯೇ ಮಾಡು ತ್ತಾರೆ!" ಅಂದರೆ, ಬಾಯಿ ಮುಚ್ಚಿಕೊಂಡು ಅವಕ್ಕೂ ಕಾಸು ಬಿಚ್ಚುತ್ತಾರೆ ತಣ್ಣೀರು ಕುಡಿಯುವಾಗಲೂ ಅಗಿದುನೋಡುವ ಈ ಪುಣ್ಯಾತ್ಮರ ಬಾಗಿ ಲಲ್ಲಿ ಆ ಬಾಬತ್‌ನಲ್ಲೂ ಸೊನ್ನೆಯೇ .

ಒಂದುದಿವಸ ನಾನಂದೇಬಿಟ್ಟೆ, ಧೈರ್ಯವಾಗಿ! "ಯಾಕೆ, ಸ್ವಾಮಿ? ಮಾಮೂಲ್ ಪ್ರಕಾರ ಮಹಾಲಕ್ಷ್ಮಿಯೇ ಬಂದು ಮನೆ ಬಾಗಿಲು ಬಡಿ ಯುವಾಗ ಮನಸ್ಸಿಲ್ಲ ಅಂತ ಯಾಕೆ ಸಲಾಕಿ ಹಾಕುತ್ತೀರಿ? ಹರಿಶ್ಚಂದ್ರನ ಕಥೆ ಓದಿಲ್ಲವೆ ನೀವು? ಕೈಲಾಸದಿಂದ ಆ ಶಿವ ಇಳಿದುಬಂದು ಬೀಸಿದ ಕತ್ತಿ ಹಿಡಿದುಕೊಳ್ಳುವುದರೊಳಗೆ ನಾವೇ ಅಲ್ಲಿಗೆ ಅವನನ್ನ ಹುಡು ಕಿಕೊಂಡು ಹೋಗಿರುತ್ತೇವೆ ಇದು ಕಲಿಕಾಲ, ಮನುಷ್ಯಾಯುಸ್ಸು ಸಾವಿರ ವರ್ಷ ಇದ್ದ ಕಾಲದಲ್ಲಿ ಸತ್ಯಪರೀಕ್ಷೆಗೆ ಸಮಯ ಇತ್ತು ಈಗಿನ ಕಾಲದಲ್ಲಿ ನಕ್ಷತ್ರಕ ಬಂದಾಗ ನಕ್ಷತ್ರ ಎಣಿಸಿದರಾಗುತ್ತದೆಯೇ? ಇದು ದ್ಯಾಪಾರ ದ್ಯಗವಲ್ಲ, ವ್ಯಾಪಾರದ್ಯುಗ! ಕೈಮೇಲೆ ಕಾಸು, ಅಂತ ಚಂಡಕೌಶಿಕ ಕಂಡ ಕಂಡವರನ್ನೆಲ್ಲ ಪೀಡಿಸುವ ಕಾಲ ಅದೂ ಅಲ್ಲದೆ, ಅವರು, ಪಾಪ, ಸಂತೋಷವಾಗಿ ಕೊಡುವುದನ್ನ ನಾವು ತೆಗೆದಿಟ್ಟರೆ ತಪ್ಪೇನು? ಯಾರ ನ್ನಾದರೂ ಹೊಡೆದು ಬಡಿದು ತರುತ್ತಾರೆಯೇ? ನನ್ನ ಅಂಗಡಿಯಲ್ಲಿ ಕೊಂಡುಕೊಳ್ಳುತ್ತಾರೆ; ನಿಮ್ಮ ಮಗು ಕೈಗೆ ಕೊಡುತ್ತಾರೆ....ಇನ್ನೊಂದು ಯೋಚನೆ ಮಾಡಬೇಕು ನೀವು. ಇದೆಲ್ಲ ಕರ್ಮ! ಪ್ರಾರಬ್ಧಕರ್ಮ!

ಹಿಂದೆ ಕೊಟ್ಟದ್ದೀರಿ, ಈಗ ಹಿಂದಕ್ಕೆ ಬರುತಾ ಇದೆ. ಬೇಡ ಅಂತ ದೂಡಿದರೆ ಅವರ ಕರ್ಮ ಸವೆಯುವುದು ಹೇಗೆ? ಅವರು ಈ ಸಂಸಾರಚಕ್ರದಿಂದ ಪಾರಾಗುವುದು ಯಾವಾಗ? . ತಟ್ಟೆಯಲ್ಲಿರುವುದನ್ನ ಕುಕ್ಕೆಗೆ ಸುರಿದುಕೊಂಡರೆ ನಿಮಗೇನು ಬಾಧಕ? ನಿಮ್ಮ ಲೆಕ್ಕಕ್ಕೆ ಜಮಾ ಬರುವುದಿಲ್ಲ, ಅವರ ಲೆಕ್ಕದಲ್ಲಿ ವಜಾ ಆಗುತ್ತೆ, ಅಷ್ಟೆ. ಅದೂ ಅಲ್ಲದೆ, ನೀವು ಪಂಡಿತರ ಮಕ್ಕಳು, ಆ ಮುದುಕಿಗೋಸ್ಕರ ಬಹಳ ಶ್ರಮಪಟ್ಟು ಆಯುಷ್ಕರ್ಮ ಜರುಗುವಾಗ ತುಂಬಾ ಎಚ್ಚರಿಕೆಯಿಂದ (ನಾನು ನೋಡುತ್ತಿರುತ್ತೇನಲ್ಲ, ಪ್ರತಿಸಲವೂ) ಚಂಡಿಕೆಯನ್ನುಳಿಸಿಕೊಂಡಿರುವವರು, ಬ್ರಾಹ್ಮಣರು, "ಸಾಲದು" ಅಂತ ಅನ್ನಬಾರದೆ ವಿನಹ 'ಸಾಕು' ಅಂತ ಹೇಳುವುದಕ್ಕೆ ನಿಮಗೆ ಅಧಿಕಾರ ಕೊಟ್ಟಿಲ್ಲ ನಿಮಗೆ ದೇವರು ಹೇಳಿರುವುದು ಎರಡೇ ಮಂತ್ರ "ಹಾಕು" "ಬೇಕು" ನೀವು ಬೇಡ ಅಂದರೆ ದಾನವೇ ಬತ್ತಿಹೋಗಿ ದಾಂಧಲೆ ಆಗುವುದಿಲ್ಲವೆ? ಅವರು ಲವಲವಿಸುವುದಾದರೂ ಏಕೆ? ಪ್ರಿಯವಾದ ಒಂದು ಮಾತು, ಒಂದು ನಿಮಿಷದ ಪ್ರಸನ್ನವದನ

ನನ್ನ ಉಪನ್ಯಾಸ ಕೊಂಚ ವಿಸ್ತಾರವಾಯಿತು ಅಂತ ತೋರಿತು ಏಕೆಂದರೆ,ಗುಂಡಪ್ಪನವರು ಮಧ್ಯೆ ಎದ್ದು ಹೊರಟೇ ಹೋದರು. ಏನೂ ಮಾತನಾಡಲಿಲ್ಲ ನನ್ನ ಮಾತಿಗೆ ಅಡ್ಡ ಬರಲೂ ಇಲ್ಲ "ರವಿ ಕಾಣದ್ದು ಕವಿ ಕೇಳಿತು" ಅಂತ ಗಾದೆ ಇದೆ, ಇರಲಿ. "ಹಾಲಿಗೆ ಹುಳಿ ಹಿಂಡದೆ ಬೆಣ್ಣೆ ಹೇಗಾಗುತ್ತೆ?" ಅಂತ ನಾನೂ ಸುಮ್ಮನಾದೆ. ಅವರ ಹಿಂದೆ ಹೋಗಿ ಅಂಗಲಾಚಲಿಲ್ಲ

ಗುಂಡಪ್ಪನವರೂ ಕೂಡ ನನ್ನ ಮೇಲೆ ಅವಿಶ್ವಾಸ ತೋರಿಸಿದರು. ಎರಡು ಮೂರು ದಿನ ಅಂಗಡಿ ಕಡೆ ಸುಳಿಯಲೇ ಇಲ್ಲ. ಮನೆಯಿಂದ ಮೆಟ್ಟಲಿಳಿದು ಕಚೇರಿ ರಸ್ತೆ ಮೆಟ್ಟುವಾಗ ನನ್ನನ್ನು ನೋಡಲೇ ಇಲ್ಲ. ಆದರೂ, ಮತ್ತೊಂದು ಪ್ರಯೋಗ ನಡೆಸಿದೆ. ನನ್ನ ಮಾತುಗಳು ಅವರ ಮನಸ್ಸಿನಲ್ಲಿ ನಾಟಿತೋ ಇಲ್ಲವೋ ಅಂತ ನೋಡಲು ಮೊನ್ನೆ ನಾನು ಒಬ್ಬ ನೋಟಕನ ಕೈಯಲ್ಲಿ ತಟ್ಟೆಕೊಟ್ಟೆ, ಒಂದು ಹೂಮಾಲೆ, ಎರಡು ನಿಂಬೆ ಹಣ್ಣು, ಅಷ್ಟೆ. ಹೆಡ್ ಗುಮಾಸ್ತೆಯವರು ಕೇಳಿದರೆ, "ಹೆಚ್ಚೇನೂ ಇಲ್ಲ, ಸ್ವಾಮಿ! ತಾವು ದೇವರ ಸಮಾನ, ಮಕ್ಕಳ ಹಾಗೆ, ತಮಗೆ ಬರೀ ಕೈ ತೋರಿಸಬಾರದು."

ಅಂತ ಹೇಳು, ಅಂತ, ಆತನಿಗೆ ಹೇಳಿದ್ದೆ.. ನನಗೆ ನನ್ನ ವ್ಯಾಪಾರದ ಮೇಲೆ ದೃಷ್ಟಿ! ಅವನಿಗೆ ಹೆಡ್‌ಗುಮಾಸ್ತೆ ದೃಷ್ಟಿ ಮೇಲೆ ದೃಷ್ಟಿ!

ನನ್ನ ಪಿತೂರಿ ಫಲಿಸಿತು ಹಣ್ಣು ಹೂವು ಹಿಂದಕ್ಕೆ ಬರಲಿಲ್ಲ. ಮೊದಲು ಅವರು ಹಾರ ತೋರಿಸಿದಾಗ ಕತ್ತು ನೀಡಲೇ ಇಲ್ಲವಂತೆ 'ದೇವರಿಗೇನಪ್ಪ? ತಾನು ಗೀಚಿದ್ದೇ ಗೆರೆ, ಹೇಳಿದ್ದೇ ಕಾನೂನು ಹಾಗೆಯೇ ಮಕ್ಕಳು ಪರಮಾತ್ಮ ಸ್ವರೂಪರು ಅಂಕೆಯಿಲ್ಲ, ಅಂಕುಶವಿಲ್ಲ!' ಅಂದರಂತೆ- ಆದರೆ ಆತ "ದೇವರು ಹೇಳಿರುವುದಲ್ಲಿ ಪತ್ರ ಅಂದರೆ, 'ನೋಟ್ಸು' ನನ್ನಲ್ಲಿಲ್ಲ, ತೋಯು, ತಂದಿಲ್ಲ, ಮಧ್ಯದ್ದೆರಡು ಮಾತ್ರ ಇವೆ ಒಪ್ಪಿಸಿಕೊಳ್ಳಬೇಕು" ಅಂತ ಹಠ ಹಿಡಿದು, ಕೈಯಲ್ಲಿದ್ದದ್ದು ತೋರಿಸಿ ಲಕ್ಷಣ ಅನ್ನಿಸಿಕ್ಕೊಂಡು ಹೊರಗೆ ಬಂದ

ಇನ್ನು ಪರವಾಗಿಲ್ಲ, ಚಕ್ರವ್ಯೂಹ ಒಡೆಯಿತು, ಅಂತ ನಾನು ಭಲರೆ, ಚೆಟ್ಟಿ ಅಂತ ಭುಜ ತಟ್ಟಿಕೊಂಡೆ ಗುಂಡಪ್ಪನವರನ್ನು ನೋಡುವ ಅಭಿಲಾಷೆಯಿಂದ ಯಾರು ಅವರ ಮನೆ ಮುಂದೆ ಸುಳಿದರೂ ನಾನು ಅವರನ್ನು ಇತ್ತ ಕಡೆ ಕರೆದು ಬುದ್ಧಿವಾದ ಹೇಳಿ, ಹತ್ತು ಹನ್ನೆರಡಾಣೆ ಪದಾರ್ಥ ತಟ್ಟೆಯಲ್ಲಿಟ್ಟು ಕಳುಹಿಸುವೆ ಆದರೆ, ನಾನು ಬಹು ಬೇಗ ಮಣ್ಣುಮುಕ್ಕಿದೆ ಆ ಸಂಗೀತದ ಶ್ರೀಕಂಠಯ್ಯ ಓಡಿಬಂದು, "ಯಾರೋ ಅದು? ಕೆಂಚಣ್ಣ! ಗುಂಡಪ್ಪನಿಗೆ ನಿಂಬೆ ಹಣ್ಣು ಕೊಟ್ಟಿದ್ದು, ಈಗ?" ಅಂತ ವಿಚಾರಿಸಿದ ಮನೆಯೊಳಗೆ ಹೆಣ್ಣು ಮಕ್ಕಳು ನಿಂಬೆ ಹಣ್ಣಿನ ಚಿತ್ರಾನ್ನ ಮಾಡೋಣ ಅಂತ ಹೇಳುತ್ತಿದ್ದದ್ದು, ಆತ ಆಚೆ ಮನೆಯಿಂದ ಕಿವಿ ನೀಡಿ ಕೇಳಿರಬೇಕು "ಇದು ಬೇರೆ ಬಂತಲ್ಲಪ್ಪ, ಇಂಗು ತಿಂದ ಕಪಿ!" ಅಂತ ನಾನು ಕೊರಗಿದೆ. ಗುಂಡಪ್ಪನವರ ಸಂಸ ರದಲ್ಲಿ ಸ್ವಲ್ಪ ಒಡಕು ಶಬ್ದವಾದರೂ ಈತನ ಮನೆಗೆ ತಿಳಿದು ಹೋಗುವುದು.. ಅದಕ್ಕೆ ಇರಬೇಕು ಈಚೀಚಿಗೆ ಬುದ್ಧಿವಂತರೆಲ್ಲ ಬಿಡಿಬಿಡಿಯಾಗಿ ಬಡಾವಣೆಗಳಲ್ಲಿ ಬಂಗಲೆಗಳು ಕಟ್ಟಿಕೊಳ್ಳುವುದು..

ಸಂಜೆಯಾಗುತ್ತಲೂ ಆ ಕಾಶೀಪತಿರಾಯರು ಬೇರೆ ವಕ್ರಿಸಿದರು. "ಕೆಂಚಣ್ಣ! ನಿನ್ನ ಅಳಿಯನ ತಮ್ಮನಿಗೆ ನನ್ನ ಆಪೀಸಿನಲ್ಲಿ ಒಂದು ಚಾಕರಿ ಕೊಡಿಸುತ್ತೇನೆ . ನಮ್ಮ ಹೆಡ್ ಗುಮಾಸ್ತೆ ಮನೆಗೆ ಯಾರು ಯಾರು ಹೋಗಿ ಹೇಗೆ ಹೇಗೆ ಅವರ ಕೈ ಬೆಚ್ಚಗೆ ಮಾಡುತ್ತಾರೆ, ಒಂದು ಪಟ್ಟಿ ಕೊಡು, ಕೆಂಚಣ್ಣ!" ಅಂದರು, ಗುಳ್ಳೆ ನರಿಯ ಹಾಗೆ ನಾಲಿಗೆ ಚಪ್ಪರಿಸುತ್ತ

ಆಗ ನನಗೆ ತಿಳಿಯಿತು, ಗುಂಡಪ್ಪನವರು ಬಿಗಿಯಾಗಿ ಮುಷ್ಟಿ ಹಿಡಿದಿರುವುದು ಯಾತಕ್ಕೆ, ಅಂತ ಸಡಿಲ ಬಿಟ್ಟರೆ ಸರ್ವನಾಶ ಸೊನ್ನೆ ಮೇಲೇನೇ ಸುವರ್ಣ ಕಲಶ ಕೂರಿಸುವ ಈ ಭಂಡಾಳರು ಅಂಕಿ ಅಂಶ ಸಿಕ್ಕರೆ ಸಿಗಿದೇ ಬಿಡುತ್ತಾರೆ! ಪಾಪ! ಈ ಕಾಳಿಂಗ ಸರ್ಪಗಳ ನಡುವೆ ಅವರು ಒಂದು ಕುರುಡು ಕಪ್ಪೆ! ಎಲ್ಲೋ ಜ್ಞಾನದಲ್ಲಿ ಕಾಶೀಪತಿರಾಯರೆದರಿಗೇನೆ, "ಅಯ್ಯೋ" ಅಂದೆ

'ನನ್ನನ್ನಕ್ಕೆ ತುಪ್ಪ ಹಾಕುವುದಕ್ಕೆ ಹೋಗಿ, ಅಗರನ್ನದಲ್ಲಿ ತೊಪ್ಪೆ ಬೀಳಿಸಿದೆನಲ್ಲಾ,' ಅಂತ ನನಗೆ ನಾಚಿಕೆ ಆಯಿತು, "ಏನ್ರೀ, ಕಾಶೀಪತಿ ರಾಯರೇ? ಪಂಡಿತರ ಮಕ್ಕಳನ್ನೇನು ನೀವು ಕಾಣಿರೇ? ಒಟ್ಟಿಗೆ ಬೆಳೆದವರು, ಬಾಳಿದವರು! ಹಾಲು ಕುಡಿದ ಮಕ್ಕಳೇ ಬದುಕುವುದು, ವಿಷ ಕುಡಿದವು ಬದುಕುವುದಿಲ್ಲ, ಅಂತ ಅವರಿಗೆ ಗೊತ್ತಿರುವುದಿಲ್ಲವೆ? ಹಾವಿನ ಹಾಗಿರುವುದೆಲ್ಲ ಹಗ್ಗ ಅಂತ ಅವರು ನಿಮ್ಮನ್ನೇ ನೆಚ್ಚಿಕೊಂಡಿರುವಾಗ ಅವರ ಕತ್ತಿಗೆ ನೇಣುಹಾಕಿ ಬಿಗಿ ಅಂತ ನನಗೇ ಹೇಳುತ್ತೀರಲ್ಲಾ! ಹೋಗಿರಿ, ಹೋಗಿರಿ! ನನ್ನ ಅಳಿಯನ ತಮ್ಮನಿಗೆ ಚಾಕರಿ ಕೊಡುವುದು ಆ ಮೇಲಿರುವ ದೇವರು! ನೀವೂ ಇಲ್ಲ, ನಿಮ್ಮ ಹಾಳುಗುಡಿ ಚಪ್ಪಡಿ ಕೆಳಗಿರುವ ದೇವರೂ ಅಲ್ಲ," ಅಂದೆ ಅವರಿಗೆ ಎದೆ ಅಲ್ಲಾಡಬೇಕಾದರೆ, ಆ ದೇವಸ್ಥಾನ ಬಿದ್ದ ಸುದ್ದಿ ಎತ್ತಬೇಕು ಅಂತ ಈರ ಹೇಳಿದ್ದ,

ಮೊನ್ನೆ ನಾನು ಗುಂಡಪ್ಪನವರಿಗೂ ತಿಳಿಸಿಬಿಟ್ಟೆ! "ಈ ಗೂಢ ಚಿಂತೆಯಿಂದ ಮನಸ್ಸನ್ನು ಅಸ್ವಸ್ಥ ಮಾಡಿಕೊಳ್ಳಬೇಡಿ. ಶತ್ರುಗಳನ್ನ ಧೈರ್ಯವಾಗಿ ಎದುರಿಸಿ, ಕಾಶೀಪತಿರಾಯರ ಕುಹಕಗಳನ್ನ ದೇವರ ಸಾಕ್ಷಿಯಾಗಿ ಸಾಹೇಬರ ಹತ್ತಿರ ಹೇಳಿಬಿಡಿ, ಒಳಗೊಳಗೇನೆ ಕೊರಗಿ ಕೊರಗಿ ಕಡ್ಡಿಯಾಗಬೇಡಿ" ಅಂದೆ,

ಆದರೆ, ಅವರು ಆ ಪಂಡಿತರ ಮಕ್ಕಳಲ್ಲವೆ? ಅವರೂ ಹೀಗೆಯೇ! ಧೈರ್ಯವಾಗಿ ಒಬ್ಬರಿಗೊಂದು ನೆಚ್ಚಿಗೆ ಕೊಡುತ್ತಿರಲಿಲ್ಲ, 'ಏನೋ ಅಪ್ಪ, ದೇವರಿದಾನೆ, ಇದನ್ನ ಕುಡಿಸಿ ಬಿಡು ಕೊಂಚ, ಆಯುಸ್ಸು ಗಟ್ಟಿಯಾಗಿದ್ದರೆ ಬದುಕುತ್ತಾನೆ' "ಗುಣವಾದರೆ ಬಂದು ಹೇಳು, ಇಲ್ಲದೆ ಇದ್ದರೆ ಬರಬೇಕಾದ್ದಿಲ್ಲ" 'ಶಾಂತಿ ನಿಲ್ಲಬಹುದು, ಜ್ವರ ಕಡಿಮೆ ಆದೀತೋ ಏನೋ'.... ಹೀಗೆಯೇ ರೋಗಿಯ ದೇಹದ ವಿಷಯದಲ್ಲಿ ಸಂದೇಹವನ್ನೇ ನುಡಿಯುವರು.

ಆವರಿಗೂ ನಾನು ಒಂದು ಸಲ ಹೇಳಿದ್ದೆ, ಖಡಾಖಂಡಿತವಾಗಿ ಅಡೆತಡೆ ಯಿಲ್ಲದೆ ಹೇಳಿ ಬಿಡಿ, ಅಂತ. ಅವರೂ ಮೀನ ಮೇಷ ಬಹಳ ಎಣಿಸುವರು. "ನೋಡು, ಕೆಂಚಣ್ಣ! ನಾನು ಗಟ್ಟಿಮಾಡಿದ ಶ್ಲೋಕಗಳನ್ನ ಚರಕ ಶುಶ್ರುತಾದಿಗಳೇ ಬರೆದರೋ ಏನೋ? ನನ್ನ ಜ್ಞಾಪಕದಲ್ಲಿ ಅವು ಖಚಿತವಾಗಿ ನಿಂತಿವೆ ಅಂತ ಹೇಗೆ ಹೇಳುವುದು? ಲವಣ ಎಂಬ ಕಡೆ ಲವನ ಅಂತ ನೆನಪಿದ್ದರೆ ಸರ್ವನಾಶ. ಅಥವಾ ನೆನಪಿದ್ದರೂ, ಸಂಸ್ಕೃತದ ತರುಮೂಲ ಗಳಿಗೂ ನಮ್ಮ ಪ್ರಕೃತದ ಗಿಡ ಗೆಂಟೆಗಳಿಗೂ ಹೊಂದಿಕೆಯಾದರೆ ತಾನೆ? ಅವುಗಳನ್ನ ತಂದು ನಾವು ಔಷಧಿ ಮಾಡುವಾಗ ಅಳತೆ ತೂಕ ತಯಾ ರಿಕೆಯ ವಿಧಾನ ಇವುಗಳಲ್ಲಿ ಎಷ್ಟು ಎಡವುತ್ತೇವೋ? ಇಷ್ಟೆಲ್ಲ ಮಾಡಿದ ರೂನೂ ಖಾಯಿಲೆ ಇಂಥದ್ದು ಅಂತ ಪತ್ತೆ ಹಚ್ಚುವುದರಲ್ಲಿ ಏನೇನು ಅನಾ ಹುತವೋ? ಆದನ್ನ ಕುಡಿಸುವುದರಲ್ಲಿ ಯಾವ ಯಾವ ಅವ್ಯವಸ್ಥೆಯೋ? ಪಥ್ಯಗಳಲ್ಲಿ ಎಷ್ಟು ತಲಕೆಳಗೋ" ಅನ್ನುವರು ಮತ್ತೊಬ್ಬರಲ್ಲಿ ತಪ್ಪು ಹುಡುಕುವುದಕ್ಕೆ ಬದಲು ತನ್ನನ್ನೇ ತಿದ್ದಿಕೊಳ್ಳುವುದೇ ಒಳ್ಳೇ ಉಪಾಯ ಅಂತ ಅನ್ನುವರು ಪಂಡಿತರು

ನಮ್ಮ ಗುಂಡಪ್ಪನವರಲ್ಲೂ ಅದೇ ಸಹನೆ, ಅದೇ ತಾಳ್ಮೆ "ತುಂಬಿದ ಕೊಡ ಆಳುಕುವುದಿಲ್ಲ" ಅಂತ ಗಾದೆ ಇದೆಯಲ್ಲ ಹಾಗೇನೆ, ಅವರೂ ಕೂಡ ಇಂಥದ್ದಕ್ಕೆಲ್ಲ ಗಾಬರಿಗೊಳ್ಳುವುದೇ ಇಲ್ಲ ತಂದೆಯ ಹಾಗೆ, ಅವರೂ ಬಾಯಿಗೆ ಸರಕ್ಕನೆ ಬೀಗಹಾಕಿಬಿಡುತ್ತಾರೆ

"ನಿಮಗೆ ಯಾರೂ ಸ್ನೇಹಿತರೇ ಇಲ್ಲವೆ ಈ ಊರಲ್ಲಿ? ಯಾರೋ ಒಬ್ಬರು ಬರುತ್ತಾರಲ್ಲ, ರಜಾದಿನಗಳಲ್ಲಿ, ಸೈಕಲ್ ಮೇಲೆ, ಅವರೂ ನೀವೂ ಯೋಚನೆ ಮಾಡಿ ಏನಾದರೂ ಒಂದು ತಂತ್ರ ಹೂಡಿರಿ ಸಾಕ್ಷಾತ್ ಕಾಶೀ ಪತಿ ತಲೆಮೇಲೆ ಚಪ್ಪಡಿ ಎಳೆದ ದೇವರು ಈ ನರಮನುಷ್ಯನನ್ನೂ ಬಲಿ ಹಾಕುತ್ತಾರೆ ನೀವು ಬಲೆಬೀಸಿ, ಧೈರ್ಯವಾಗಿ" ಅಂದೆ

ಆಗ ಅವರು, "ಕೆಂಚಣ್ಣಾ! ಆಂಜನೇಯನಲ್ಲದೆ ನನಗೆ ಬೇರೆ ಯಾರೂ ದಿಕ್ಕಿಲ್ಲ ದೆಸೆ ಇಲ್ಲ" ಅಂದರು "ಅವರನ್ನೇ ಕೇಳಿ, ಸ್ವಾಮಿ! ಅವರು ಹೆಸರು ಆಂಜನೇಯ ಅಂತಲೇ? ಗೊತ್ತಾಗಲಿಲ್ಲ, ಸ್ವಾಮಿ, ನನಗೆ ಅವರು ನಿಮ್ಮ ಆಫೀಸಿನಲ್ಲಿಲ್ಲ ತಾನೆ?" ಅಂದೆ ಅದಕ್ಕೆ ಗುಂಡಪ್ಪನವರು "ಆಂಜ ನೇಯ ಅಂದರೆ- ಬೈಸಿಕಲ್ ಮೇಲೆ ಬರುವವರು ಅಲ್ಲ ದೇವರು! ಸೀತಾ ಸಂತಾಪಹಾರಕರು!" ಅಂದರು. ನಾನು ಬೆಚ್ಚಿಬಿದ್ದೆ....

"ನೋಡು, ಕೆಂಚಣ್ಣ! ಮಳೆ ಬಿದ್ದ ಪ್ರದೇಶದಲ್ಲಿ ಹಸು ನಡೆದು ಕೊಂಡುಹೋದರೆ ಏನಾಗುತ್ತೆ, ಹೇಳು....ಅಲ್ಲಲ್ಲಿ ಗೊರಸಿನ ಗುರುತಿನ ಹಳ್ಳ ಬೀಳುವುದಿಲ್ಲವೆ? ಆ ಹಳ್ಳದಲ್ಲಿ ನೀರು ನಿಂತುಕೊಂಡರೆ ಅದನ್ನು ನೀನು ಸಮುದ್ರ ಅಂತೀಯೇನು?....ಅಷ್ಟು ಚಿಕ್ಕದು ಮಾಡಿಬಿಟ್ಟರು ಆಂಜನೇಯ ದೇವರು ಇಡೀ ಮಹಾ ಸಮುದ್ರವನ್ನ! ಅಷ್ಟು ಸುಲಭದಲ್ಲಿ ದಾಟಬಿಟ್ಟರು! ಹಾಗೆನೇ ಹತ್ತುತಲೆ ಹೊತ್ತ ರಾವಣ, ಮತ್ತು ತಲೆ ಹೊತ್ತ ಕುಂಭಕರ್ಣ, ಎಲ್ಲರನ್ನೂವೇ, ತಗಣೆಗಳನ್ನ ಹಿಸುಕಿದ ಹಾಗೆ ಹಿಸುಕಿಬಿಟ್ಟರು. ಅಂಥಾದ್ದ ರಲ್ಲಿ, ಆತನ ಅನುಗ್ರಹವೊಂದಿದ್ದರೆ, ಈ ಪೋಕರಿಗಳ ಸಂಗಡ ಚಾಕರಿ ಮಾಡಬೇಕಾದ ಪ್ರಮೇಯವೇ ತಪ್ಪುವುದು!" ಅಂದರು. ತಲೆಮೇಲೆ ಕೈಯಿಟ್ಟು ಕೊಂಚ ಹೊತ್ತು ಕೂತಿದ್ದು, ಎದ್ದುಹೋದರು ನನಗೆ ಅರ್ಥ ವಾಗಲಿಲ್ಲ ಪೋಕರಿಗಳನ್ನ ಶಿಕ್ಷಿಸುತ್ತಾರೋ? ಚಾಕರೀನೇ ತ್ಯಜಿಸು ತ್ತಾರೋ? ಗೊತ್ತಾಗಲಿಲ್ಲ.

ಅಂತು ಇಷ್ಟು ಮಾತ್ರ ಹೇಳಬಲ್ಲೆ! . ಎಂಕೋಜಿ ಹತ್ತಿರ ಅವರು ಈ ಸಮಾಚಾರ ಯಾವುದನ್ನೂ ಹೇಳಿಲ್ಲ, ತನ್ನ ಅಂತರಂಗವನ್ನ ಹೀಗೆ ಬಿಚ್ಚಿಹೇಳಿಲ್ಲ ಮನಸ್ಸಿನಲ್ಲಿ ಏನಾದರೂ ದುಗುಡ ಹೆಚ್ಚಾದರೆ, ಅದನ್ನ ತೋಡಿ ಕೊಳ್ಳುವುದು ಅವರು ನನ್ನೆದುರಿಗೇನೆ! ಈಚೆಗೆ ಆ ಸೈಕಲಿನವರೊಬ್ಬರು ಸಿಕ್ಕಿದಾರೆ, ಸ್ನೇಹಿತರು ಅವರು ಯಾವೂರೋ ಏನೋ! ನೀವು ಎಂಕೋಜಿ ಹತ್ತಿರ ಹೋಗಿದ್ದರೆ, ಈ ಹಾಳೆಗಳೆಲ್ಲ ಬಿಳಿಯಾಗಿಯೇ ಉಳಿಯುತ್ತಿತ್ತು

## ಎದುರಂಗಡಿ ಕೆಂಚಯ್ಯನ ಪ್ರಸಾರ ಮುಗಿಯಿತು

---

ಪಾಲುಂಡು ಮೇಲುಂಬರೆ?

—ಶ್ರೀ ಪ್ರಭುದೇವರು

ಹನುಮನ ನೆನೆದರೆ ಹಾರಿಹೋಗದೆ ಭೀತಿ?

—ಶ್ರೀ ಪುರಂದರದಾಸರು

ತಪ್ಪುದಾರಿಯಲ್ಲಿನೀಪೋಗದೆ । ಅರು । ಒಪ್ಪದಕರ್ಮವನೆಸಗದೆ
ತಪ್ಪುಕಥೆಗಳನ್ನು ಕೇಳದೆ । ಬಲು । ಸಪ್ಪೆವಾಕ್ಯಂಗಳನಾಡದೆ.

—ಶ್ರೀ ವೈಕುಂಠದಾಸರು

## ೯ : ಶ್ರೋಂಡಿ

ಹೌದು. ನಾನೇ ಸಬ್ ರೆಜಿಸ್ಟ್ರಾರ್ ನಾರಾಯಣರಾಯ.... ಬಿ ಡಿ. ನಾರಾಯಣರ ವ್ಯ....ಹ . ನನ್ನ ಹೆಸರಿನ ಹಿಂಭಾಗ ಹಾಗಿರೋಣದರಿಂದ ನಾನು ಸಿಗರೇಟು ಉಪಯೋಗಿಸುವ ಹಾಗೆಯೇ ಇಲ್ಲ ಅತೀ ಉತ್ತಮದ ಬತ್ತಿಯನ್ನು ಬಾಯಿಗಿಟ್ಟರೂ ಕೂಡ, 'ಬೀಡಿ' ಅಂತ ಹಾದಿಬೀದಿಯಲ್ಲೆಲ್ಲ ಹಾಸ್ಯಮಾಡಿ ಹೊಗೆಯಿಳಿಸಿ ಬಿಡುತ್ತಾರೆ, ಹಾಳು ಜನ!—ಬೀಡಿ ಎಂಬುದು ಬೀಡಾ ಎಂಬುದರ ಸ್ತ್ರೀಲಿಂಗ, ಆ ಶಬ್ದವನ್ನು ತಾಂಬೂಲಕ್ಕೆ ಉಪಯೋಗಿಸಬೇಕೇ ಹೊರತು ತಂಬಾಕಿನ ಸುರುಳಿಗಲ್ಲ ಅಂತ ಒಂದು ಚಳುವಳಿ ಹೂಡಬೇಕು ಅಂತ ಇದೀನಿ

ನಾನು ಈ ಊರಿಗೆ ತೀರ ಹಸುಳೆ, ಈಗ ತಾನೆ ಕಣ್ಣುಬಿಡುತ್ತಿರುವ ಹೊಚ್ಚ ಹೊಸ ಮರಿ! ಇಲ್ಲಿಗೆ ವರ್ಗವಾದಾಗ ನನ್ನ ಮಾವನವರು ಹೇಳಿದರು· "ಸ್ಥಳ ಜಲ, ಎರಡೂ ಚೆನ್ನ ಆದರೂ, 'ಋಣದಾತಾಚ ವೈದ್ಯಶ್ಚ ಶ್ರೋತ್ರಿಯಸ್ಸಜಲಾನದೀ' ಈ ನಾಲ್ಕೂ ಇರಬೇಕಂತೆ, ಯಾವ ಊರಿಗೆ ಹೋದರೂ ನಿನಗೇನು? ಋಣದಾತ, ನಾನಿದೇನೆ! ವೈದ್ಯ, ಗಂಡಪ್ಪನ ತಂದೆ ಇದಾರೆ, ಶ್ರೋತ್ರಿಯ ಗಂಡಪ್ಪನಿಗಿಂತ ಉತ್ತಮ ಯಾರೂ ಇಲ್ಲ, ನದಿಗೇನು? ಪಾತಾಳ ಗಂಗೆಯೇ ಸಿಕ್ಕುತ್ತಾಳೆ ಹಗ್ಗದ ತುದಿಯಲ್ಲಿ ಕೊಡ ಕಟ್ಟಿ ಇಳೀ ಬಿಟ್ಟರೆ!"

ಗುಂಡಪ್ಪನವರನ್ನು ನಾನು ಮೊನ್ನೆ ಮೊನ್ನೆ ನೋಡಿದೆ, ಅಷ್ಟೆ ಅದೂ ಕೂಡ, ಈ ಊರಲ್ಲಿ, ಪ್ರಥಮತಃ ನಾನು ಓದಿದ್ದೆಲ್ಲ ಮೈಸೂರಲ್ಲಿ, ಅನಾಥಾಲಯದ ಮಹಡಿ ಮೇಲಿನ ಬಲಗಡೆಯ ಕಡೆಯ ರೂಂನಲ್ಲಿ ಬಿ. ಎ ಅಂತ ಅನ್ನಿಸಿಕೊಳ್ಳುವುದರೊಳಗೆ ಬಹಳ ಸುಸ್ತಾಗಿ ಹೋಯಿತು ಅಲ್ಲಿಗೇ ನಿಲ್ಲಿಸಿಬಿಟ್ಟೆ ಮುಂದಕ್ಕೆ? ಮದುವೆ! ಮಲ್ಲೇಶ್ವರದಲ್ಲೇ ಮಾವನ ಮನೆ ಅಲ್ಲಿ ಹುಡುಗರು ಆಲಿಬಾಬಾ ಗೇಲಿಬಾಬಾ ಅಂತ ನಾಟಕ ಆಡುವರು ನಾನೂ ಸೇರುವೆ. ನಲವತ್ತು ಕಳ್ಳರನ್ನೂ ಒಂದೇ ಪಾತ್ರಮಾಡಿ ನನ್ನ ತಲೆಗೆ ಕಟ್ಟುವರು. ಅವಳೇ 'ಮಾರ್ಗಿಯಾನಾ,' ಕಳ್ಳರನ್ನ ಗಡಿಗೆಯೊಳಗೆ ಕೂರಿಸಿ ತಲೆ ಮೇಲೆ ಕಾದೆಣ್ಣೆ ಸುರಿಯುವವಳು! ಪುಣ್ಯಕೋಟಿ ನಾಟಕದಲ್ಲಿ

ನಾನು ಹುಲಿ; 'ಅಲ್ಲಾವುದ್ದೀನನ ಜಾದೂ ದೀಪ'ದಲ್ಲಿ ನಾನೇ ಭೂತ.... ಹೀಗೆ, ನಾನು ಮಾವನ ಮನೆಯಲ್ಲಿ ತೋಳನ ಹಾಗೆ ಬೆಳೆದೆ.

ಯಾರು ನಿಮಗೆ ಇದನ್ನೆಲ್ಲ ಕಲಿಸಿದ್ದು ಅಂತ ಹುಡುಗರನ್ನು ಕೇಳಿದರೆ, ಅವರು "ಕಿಡಿಬಂಡೆ ಗಂಡಪ್ಪ" ಅಂದರು. ಅವನನ್ನು ಬಹುವಾಗಿ ಹೊಗಳಿದರು. ಸೌದೆ ಒಡೆಯುವುದರಲ್ಲಿ ಅವನದು ಎತ್ತಿದ ಕೈ ಅಂತೆ! ಅವನ 'ಬೀಸುವ ಕೊಡಲಿ' ಯಿಂದ ತಪ್ಪಿಸಿಕೊಂಡ ಕೊರಡೇ ಇಲ್ಲವಂತೆ! ಪಾರ್ಕಿಗೆ ಹುಡುಗರನ್ನೆಲ್ಲ ಕರೆದುಕೊಂಡು ಹೋಗಿ, ಸಾಲಾಗಿ ನಿಲ್ಲಿಸಿ, ಒಬ್ಬೊಬ್ಬರಿಗೆ ಒಂದೊಂದು ಮರದ ಹೆಸರು ಕೊಟ್ಟು, "ಹುಣಿಸೇ? ನೀನು ಯಾವಾಗ ಹೂ ಬಿಡುವೆ?" "ಮಾವೇ! ನೀನು ಯಾವಾಗ ಕಾಯಿ ಕೊಡುವೆ?" ಅಂತ ಕೇಳಿ ಸರಿಯಾದ ಉತ್ತರ ಹೇಳಿಸಿ, ಅವರಿಗೆ 'ಮರವಾತ್ಮನ' ಪರಿಚಯ ಮಾಡಿಕೊಡುವನಂತೆ... ಯಾರಾದರೂ ರಸ್ತೆ ಮೇಲೆ ದೂರದಿಂದ ಎದುರಿಗೆ ಬಂದರೆ, ಅವರ ನಡಿಗೆಯ ರೀತಿ, ಅವರು 'ಅಂಗೀ'ಕರಿಸಿರುವ ರೀವಿ, ಅವರ ರುಮಾಲಿನ ಜೋಕು ಅಥವಾ ನಾಜೋಕು ಇವುಗಳಿಂದ ಅವರು ವಿಮಾ ಏಜಂಟರೇ, ಪತ್ರಿಕಾ ಬಾತ್ಮೀದಾರರೇ, ಸ್ಕೂಲ್ ಮೇಷ್ಟರೇ, ಸ್ಕ್ರೂ ಡ್ರೈವರೇ, ಟೈಪ್‌ರೈಟರೇ, ಬರೀ ರೈಟರೇ, ಎಂಬುದನ್ನು ಊಹಿಸಿ ಹೇಳಬೇಕಂತೆ. ಯಾರು ಸರಿಯಾಗಿ ಹೇಳಿದರೋ ಅವರು ಉಳಿದವರನ್ನೆಲ್ಲ ಹುಲ್ಲಿನ ಮೇಲೆ ಉರುಳಿಸಬಹುದಂತೆ!

ಈ ವಿಚಾರಗಳನ್ನು ಕೇಳಿದ ಮೇಲೆ, ಗಂಡಪ್ಪನವರು ಎಲ್ಲಿದಾರೆ, ಅಂತ ನಾನು ನನ್ನ ಮಾವನವರನ್ನು ಪ್ರಶ್ನಿಸಿದೆ. "ಅವನಿಗೆ ಕಿಡಿಬಂಡೆಯಲ್ಲೇ ಕೆಲಸವಾಗಿದೆಯಂತೆ, ಯಾವುದೋ ಗುಮಾಸ್ತೆ ಚಾಕರಿ... ನಾಲ್ಕೈದು ವರ್ಷದ ಹಿಂದೆ ಅಂತ ತೋರುತ್ತೆ, ಜ್ಞಾಪಕವಿಲ್ಲ; ವಿಧುರಾಶ್ವತ್ಥದಲ್ಲಿ ಮದುವೆ ಅಂತ ಅವನ ತಂದೆ ಲಗ್ನಪತ್ರಿಕೆ ಕಳುಹಿಸಿದ್ದರು. ಅಮೀಲ್ದಾರ್ ಮಗಳು. ಅವರ ಶಿಪಾರ್ಸಿನ ಮೇಲೆ ಅಂತ ಕಾಣುತ್ತೆ, ಈಗಿನ ಕೆಲಸ ದೊರಕಿದ್ದು," ಅಂದರು. ಕ್ಲಿಷ್ಟರಾಯರೂ ಅಮೀಲ್ದಾರರಾಗಿದ್ದರೆ ಚೆನ್ನಾಗಿರುತ್ತಿತ್ತಲ್ಲಾ ಅಂತ ನಾನೂ ಮನಸ್ಸಿನಲ್ಲಿ ಮಂಡಿಗೆ ತಿಂದೆ. ಕಡೆಗೆ ಅವರು ಎದುರು ಮನೆಯಲ್ಲಿದ್ದ ಸೋಮಯ್ಯನವರನ್ನನುಸರಿಸಿ, ಅವರ ಸಂಗಡ ಎಂಟು ಹತ್ತು ಮೈಲಿ ದಿನವೂ ಸಂಕಟಪಟ್ಟು ವಾಕಿಂಗ್ ಹೋಗಿ, ಕಹಿ ಮೂತಿ ತೋರಿಸದೆ

ಅವರ ಮನೆಯಲ್ಲಿ ಆಗಾಗ ಕಾಫಿ ಹೀರಿ, ನನಗೆ ಒಂದು ಸಬ್ ರೆಜಿಸ್ಟ್ರಾರ್ ಕೆಲಸ ದೊರಕಿಸಿಕೊಟ್ಟರು. ನನಗೆ ಅಂತ ಏಕೆ ಹೇಳಲಿ? ಅವರ ಮಗಳಿಗೆ! ಮೂರು ತಿಂಗಳು ನನ್ನನ್ನ ಮಾಯಾಸಮುದ್ರದಲ್ಲಿ ಹಾಕಿದ್ದರು. ಅಲ್ಲಿ ನನಗೆ ನಂಟರು ಬಹಳ ಆದ್ದರಿಂದ ಹಾಗೂ ಹೀಗೂ ತಲೆ ತಪ್ಪಿಸಿ ತಿರು ಗಿದೆ ಆ ವೇಳೆ ಈ ಊರಿಗೆ ರವಾನಿಸಿದರು. "ಸಾರ್ವಜನಿಕ ಹಿತದೃಷ್ಟಿ ಯಿಂದ" ಅಂತ ಸರ್ಕಾರಿ ಹುಕುಮಿನಲ್ಲೇ ನಮೂದಾಗಿತ್ತು .

"ಹೋಗುತ್ತಲೂ ಅವನನ್ನು ನೋಡು ನಿನ್ನ ಹೆಸರು ಕೇಳಿದರೆ ಸಾಕು, ಕೈಯಲ್ಲಾದ ಸಹಾಯ ಮಾಡುತ್ತಾನೆ ಪರಸ್ಥಳ, ಹೊಸಬರನ್ನು ಕಂಡರೆ ಹಸುಗಳೂ ತಿವಿಯುತ್ತವೆ! ಹುಷಾರಾಗಿರು ಹೋಟಲೂಟ! ಸತ್ವ ಕಡಿಮೆ ನಾಲ್ಕು ತುತ್ತು ಹೆಚ್ಚಾಗಿಯೇ ತಿಂಬಿಕೊ!" ಅಂತ ಮಾವನವರು ಎಚ್ಚರಿಸಿದರು. "ಕಡಿಬಂಡೆ ಜನರೊಂದಿಗೆ ಏಗುವುದೇ ಕಷ್ಟ! ಅಲ್ಲಿ ಅಕ್ಷರ ಕಲಿತವರೆಲ್ಲ ಮೂಗರ್ಜಿ ಬರೆಯುವವರೇ! ಓದಿದವರೆಲ್ಲ ವಾದಿ ಗಳು. ಅಥವಾ ಪ್ರತಿವಾದಿಗಳು" ಅಂದರು ಸೋಮಯ್ಯನವರು ನನಗೆ ನಂಬಿಕೆ ಬರಲಿಲ್ಲ, ಊರಿಗೆಲ್ಲ ಟಾರ್ ಬಳಿಯುವುದೆಂದರೆ ತೀರ ಅನ್ಯಾಯ ಅಂತ ನನಗೆ ಗೊತ್ತಿತ್ತು

ಬಸ್ ಸ್ಟ್ಯಾಂಡಿಗೆ ಬಂದಿದ್ದ ಆಫೀಸ್ ಗುಮಾಸ್ತೆಯ ಹತ್ತಿರ ಸಾಮಾನು ಗಳನ್ನೊಪ್ಪಿಸಿ, ಹೊರಡಲಿರುವ ಸಬ್ ರೆಜಿಸ್ಟ್ರಾರ್ ಮನೆಗೆ ಹೋದೆ. ಅದೇ ಮನೆಯನ್ನು ನಾನೂ ಬಾಡಿಗೆಗೆ ಗೊತ್ತುಮಾಡಿದೆ ಆ ವೇಳೆ, ಸೈಕಲ್ ಹತ್ತಿ ನನ್ನಿಷ್ಟಕ್ಕೆ ನಾನೇ ಕೋಟೆ ಹಾದು ಪೇಟೆ ಕಳೆದು ಅಗ್ರಹಾರದ ಬೀದಿಗಳಿಗೆ ಹೋಗಿ ಪಂಡಿತರ ವೈದ್ಯಶಾಲೆ ಹುಡುಕಿದೆ. ಅವರ ಮನೆ ಎದುರುಗಡೆ ಎಂಕೋಜಿ ಅಂತ ಯಾರೋ ಒಬ್ಬಾತ ಸಿಕ್ಕಿದ. ಪಂಡಿತರು ಆಗಲೇ ಗುಂಡಪ್ಪನವರನ್ನ ತಬ್ಬಲಿ ಮಾಡಿ ಬಿಟ್ಟಿದ್ದರೆಂದು ಆವನಿಂದ ತಿಳಿದೆ. ಮನೆಯಲ್ಲಿ ಗಂಡಸರು ಯಾರೂ ಇರಲಿಲ್ಲವೆಂದು ಆತ ಪತ್ತೆ ಹಚ್ಚಿ ತಿಳಿಸಿದ. ಪಾಪ! ಎಂಕೋಜಿಗೆ 'ಪಂಡಿತರು' ಅಂದರೆ ತುಂಬಾ ಗೌರವ, ವಿಶ್ವಾಸ. ತುಂಬಾ ಕಣ್ಣೀರು ಬಿಟ್ಟ, ಎಂಕೋಜಿ ನನ್ನನ್ನೂ ಕೂರಿಸಿಕೊಂಡು "ಪಂಡಿ ತರ ಅಪರಕರ್ಮಗಳನ್ನ ಅವಸರದಲ್ಲಿ ಮಾಡಿಬಿಟ್ಟರು; ಅವರ ಪ್ರೇತಕ್ಕೆ ಪ್ರೀತಿ ಆಗಲಿಲ್ಲ; ಎಳ್ಳಿಗೆ ತಕ್ಕ ಹಾಗೆ ನೀರು ಬೀಳಲಿಲ್ಲ! ಅದಕ್ಕೋಸ್ಕರವೇ

ಆಗಾಗ ಅವರ ಮನೆ ಹಿತ್ತಲ ಬಾವಿಗೆ ಈಗಲೂ ಅವರು ಗುಳುಂ ಅಂತ ಧುಮುಕುತ್ತಿರುವುದು" ಅಂದ ಚಮತ್ಕಾರವಾಗಿತ್ತು ಕಥೆ "ಯಾರು ಹೇಳಿದರು, ಎಂಕೋಜಿ!" ಅಂದೆ ಯಾರೋ ಸಂಗೀತದ ವೇಷ್ಟರಂದರಂತೆ! ಅದಕ್ಕೆ ನಾನು ನಕ್ಕುಬಿಟ್ಟೆ, "ಓ! ಕೆಲವರ ಸಂಗೀತ ಕೇಳಿದಾಗ ಸತ್ತ ಹೆಣಕ್ಕೂ ಕೂಡ ಬಾವಿಗೆ ಬಿದ್ದು ಪ್ರಾಣ ಬಿಡೋಣ ಅಂತ ಅನ್ನಿಸಬಹುದು" ಅಂದೆ, ಅವನಿಗೆ ಅರ್ಥವಾಗಲಿಲ್ಲ...... .ಅರ್ಥವೂ ಇಲ್ಲ, ಅಂತ ಕಾಣುತ್ತೆ ನಾನು ಹೇಳಿದ್ದಕ್ಕೆ

ಮನೆಗೆ ಬರುತ್ತಾ ನನ್ನ ಮನಸ್ಸು ಚಂಚಲಿಸಿತು. ಗುಂಡಪ್ಪನವರು ಮನೆಯಲ್ಲಿ ಇರದೆ ಇದ್ದದ್ದೇ ಒಳ್ಳೆಯದಾಯಿತು, ಅಂತ ಅಂದುಕೊಂಡೆ. "ಅಲ್ಲಾ! ನಾನು ಹೋಗಿ ಆತನೆದುರು ಆರಡಿ ಉದ್ದ ನಿಂತು, ನಾನು ಕ್ಲಿಷ್ಟರಾಯರಳಿಯ, ಅಂದರೆ, ಆತನಿಗೆ ಕಷ್ಟದ ನೆನಪಾಗುವುದಿಲ್ಲವೆ? ಕಂಡವರ ಮನೆ ಕದನ್ನಕ್ಕಾಗಿ ಕಾಲುಮುಡಿಸಿಕೊಂಡು ಕೂತ ನೆನಪಾಗಿ, ಅವರಿಗೆ ನನ್ನ ಮೇಲೆಯೇ ಒಂದು ರೀತಿಯ ಅಸಹ್ಯ ಉಂಟಾಗುವುದಿಲ್ಲವೆ? ತೆಪ್ಪಗಿದ್ದವನ ಮೈಮೇಲೆ ತಿಪ್ಪೆ ಎಸೆದರು, ಎಂಬ ಹಾಗೆ ಆಗುವುದಿಲ್ಲವೆ, ನನ್ನ ಚರ್ಯೆ? ಕ್ಲಿಷ್ಟರಾಯರೋ ಲೆಕ್ಕಾಚಾರ ಪ್ರವೀಣರು, ಅಗಳೆಣಿಸಿ ಕವಳ ಉಣಿಸುವ ಪ್ರಾಣಿ. ಅವರ ವ್ಯಕ್ತಿತ್ವ ಗುಂಡಪ್ಪನವರ ಮನಸ್ಸಿನಲ್ಲಿ ಎಂತಹ ಭೀಕರ ಚಿತ್ರವಾಗಿ ಪ್ರತಿಬಿಂಬಿತವಾಗಿದೆಯೋ?"

ಹೀಗೆ ನನ್ನ ವಿಚಾರತರಂಗದಲ್ಲೇ ವಿಹಾರಮಾಡುತ್ತಾ ಸುಖಾಸೀನನಾಗಿ ನಾನು ತುಳಿದು ಮುಂಬರುತ್ತಿದ್ದಾಗ, 'ವಕಾಲತ್ ಅಂಗಡಿ'ಗಳ ಸಾಲಿನ ತುದಿಯಲ್ಲಿ 'ನಿರ್ಜೀವರತ್ನ'ದ ಜಾಹಿರಾತನ್ನು ಅಂಟಿಸಿರುವ ಮಹಡಿ ಕೆಳಗಿಂದ ಯಾರೋ "ಸಬ್‌ರೆಜಿಸ್ಟ್ರಾರ್!" ಅಂತ ಕೂಗಿದರು.

ಭೂಮಿಗಿಳಿದೆ! ಸುತ್ತಲೂ ನೋಡಿದೆ. ಹತ್ತಾರು ರುಮಾಲುಗಳು ತಲೆಸಹಿತ ಬಗ್ಗಿದುವು; ಬಿಡಿಬಿಡಿ ಕೈಗಳೆಲ್ಲ ಜೋಡಿಯಾದುವು, "ಸಬ್ ರೆಜಿಸ್ಟ್ರಾರ್‌ರೇ!" ಅಂತ ಆತ ಕೂಗಿದಾಗ ನನ್ನ ಹುದ್ದೆಯ ಸುದ್ದಿ ಅವರ ಕಿವಿ ಮುಟ್ಟಿತು; ಅವರು ಚಕಿತರಾದರು; ಕೂಡಲೇ ಅಸ್ತಮನದ ಭಾಸ್ಕರ ನನ್ನು ಮನಸಾ ತಿರಸ್ಕರಿಸಿ ಉದಯಭಾನುವಾದ ನನಗೆ ನಮಸ್ಕರಿಸಿದರು. ಲಾಂದ್ರದ ಕಂಬದ ಕೆಳಗಿಂದ ಅದೇ ಕೂಗು ಮತ್ತೆ ಕೇಳಿಸಿತು. ಮಾವನವರ

ಮನೆ ಹುಡುಗರ ವಿವರಣೆ ನೆನಪಾಯಿತು, ಆತ ಗಂಡಪ್ಪ ಅಂತ ಗುರುತು ಹಿಡಿದೆ ..

"ನೀವು ಕ್ಲಿಷ್ಟರಾಯ. "
"ನೀವು ಗಂಡಪ್ "
"ಹೌದು! ಹೌದು! ನಿಮ್ಮ ಊಹೆ ಸರಿ"
"ಹೌದು ನಾನೇ ಅಳಿಯ". .

ಹುಡುಗರು ನನ್ನ ಮನಸ್ಸಿನಲ್ಲಿ ಚಿತ್ರಿಸಿದ್ದ ಗುಂಡಪ್ಪನವರಿಗೂ ನನ್ನೆದುರಿಗಿನ ವ್ಯಕ್ತಿಗೂ ಅಲ್ಪ ಸ್ವಲ್ಪ ವ್ಯತ್ಯಾಸಗಳಿದ್ದುವಾದರೂ, ಒಟ್ಟಿನಲ್ಲಿ ಅವರು ತಮ್ಮ ವಿವರಣೆಯನ್ನ ಜಾಣತನದಿಂದ ಮಾಡಿದ್ದರು ಆತನ ನಗೆಯಿಂದ ಕೊಂಚ ಕಳ ಇಳಿದಿತ್ತು, ತಿಳಿಮೋರೆಯಲ್ಲಿ ತುಸು ಹುಳಿ ಬೆರೆದಿತ್ತು, ಮೂಗು ಹೆಚ್ಚು ಮುರಿದಿತ್ತು, ಕಣ್ಣು ಮಾಸಿತ್ತು, ಮೈಗೆ ಭಾರವೇರಿತ್ತು,. ಆದರೂ, ಆತ ತಾನು ಹಿಂದಿನ ವ್ಯಕ್ತಿ ಅಹುದೆಂದು ನನಗೆ ತೋರಿಸಲು ನನ್ನ ಸಂಗಡ ಸರಸರನೆ ನಡೆದ, ಹಾಸ್ಯವಾಗಿ ಮಾತನಾಡಲು ಪ್ರಯತ್ನಿಸಿದ!

ಅಲ್ಲಿಂದ ಮುಂದಕ್ಕೆ ಇಬ್ಬರೂ ಕರೆಏರಿ ತನಕ ನಡೆದುಕೊಂಡೇ ಹೋದವು ಎಷ್ಟೋ ವರ್ಷಗಳಿಂದ ಅಗಲಿ ಒಂದಕ್ಕೊಂದು ಹಾತೊರೆಯುತ್ತಿದ್ದ ಉಪ್ಪು-ಸೆಲ್ಲಿಗಳಂತೆ ನಾವು ಆ ದಿನ ಮಿಳಿತರಾದೆವು ನಮ್ಮ ನಮ್ಮ ಕಷ್ಟಸುಖಗಳನ್ನು ನಾವು ತೋಡಿಕೊಂಡೆವು "ಕ್ಲಿಷ್ಟರಾಯರು ನನಗೂ ತುಂಬಾ ಕಷ್ಟಕೊಟ್ಟಿದಾರೆ ನಾನೂ ಗುಂಡಪ್ಪನಷ್ಟೇ ಅನ್ನೋದಕಗಳಿಗಾಗಿ ನರಳಿದೇನೆ 'ಶುಖಾಯ ಶೀತಾಯ' ಈಗ ಚಾಕರಿಗೆ ಸೇರಿರುವೆವಾದರೂ ನಾವಿಬ್ಬರೂ ಒಂದೇ ರೀತಿಯ ಆದರ್ಶಗಳನ್ನು ಒಮ್ಮೆ ಮನದಲ್ಲಿ ನಿಲ್ಲಿಸಿದವರು" ಎಂದು ಆಗ ನನಗೆ ತಿಳಿಯಿತು. ಗುಂಡಪ್ಪ (ಅಂತರಂಗದ ಹರಟೆಗಳಲ್ಲಿ ಬಹು ವಚನವನ್ನು ತ್ಯಜಿಸಬೇಕೆಂದು, ಅಂದೇ ನಾವು ತೀರ್ಮಾನಿಸಿದೆವು) ನನಗೆ ವಿಳಂಬಾಸಂದರ ಪವಿತ್ರ ವರ್ತನೆಗಳನ್ನು ವಿವರಿಸಿದ ನಾನು ಕಂಡ ಕೆಲವರು ಕಪಟ ಸನ್ಯಾಸಿಗಳನ್ನೂ ನಾನೂ ವಿವರಿಸಿದೆ. ಆದರೆ, ನನ್ನ ದೂಷಣೆ ಗಂಡಪ್ಪನಿಗೆ ರುಚಿಸಲಿಲ್ಲ.... "ಆ ಪಾತಾತ್ಮಜ ಯಾವ ರೂಪದಲ್ಲಿ ಬರುತ್ತಾನೋ ಹೇಳುವುವಕ್ಕಾಗುವುದಿಲ್ಲ. ಇದೆಲ್ಲ ಒಂದು

ರೀತಿಯ ಪರೀಕ್ಷೆ!" ಅಂತ ಅವನು ಹೇಳಿದ. . ಬಹಳ ಹೊತ್ತಾದ ಮೇಲೆ ನಾವು ಅಲ್ಲಿಂದ ಎದ್ದು, ನಮ್ಮ ಮನೆಗಳ ಕಡೆ ಹೊರಟೆವು, ರಜಾದಿನಗಳಲ್ಲಿ ಇಬ್ಬರೂ ಸೇರಿ ಯಾವುದಾದರೂ ಗ್ರಂಥಗಳನ್ನು ವ್ಯಾಸಂಗಮಾಡುವುದು ಎಂದು ನಿರ್ಧರಿಸಿದುವು.

ಆ ರಾತ್ರಿಯೆಲ್ಲ ನನಗೆ ಅದೇ ಯೋಚನೆ! ಆಂಜನೇಯನನ್ನು ಗುಂಡಪ್ಪ 'ವಾತಾತ್ಮಜ' ಅಂತ ಏಕೆ ಹೇಳಿದ? ವಾನರಯೂಥಮುಖ್ಯನಾದ ಆ ಸ್ವಾಮಿಗೆ ಸಾಮಾನ್ಯವಾಗಿ ಹನುಮಂತ ಮಾರುತಿ ಆಂಜನೇಯ ಎಂಬ ಹೆಸರುಗಳನ್ನೇ ಬಳಸುತ್ತಿರುವ ಈ ಪ್ರದೇಶದಲ್ಲಿ ತೀರ ಹೊಸದಾದ ನಾಮವನ್ನು ಗುಂಡಪ್ಪ ಉಪಯೋಗಿಸಿದೆನಲ್ಲಾ, ಎಂದು ನಾನು ಆಶ್ಚರ್ಯಪಟ್ಟೆ ಇಂತಹ ಗಡುಸಾದ ಗಂಟುಗಳನ್ನು ಬಿಡಿಸಬೇಕಾದರೆ ಬುದ್ಧಿಗೆ ಪೂರ್ಣವಿರಾಮ ಕೊಟ್ಟು, ಕಳೇಬರವನ್ನು ಆರಾಮವಾಗಿ ಒಂದೆಡೆ ಮಲಗಿಸಬೇಕು ನಾನೂ ಹಾಗೆಯೇ ಮಾಡಿದೆ. ಆಗ, ತನಗೇ ತಾನಾಗಿ ಮಿದುಳಿನೊಳಗೆ ಒಂದು ಕಿಡಿ ಹಾರಿತು. "ಗುಂಡಪ್ಪ ತಂದೆಯ ವಾತಾವರಣದಲ್ಲೇ ಬೆಳೆದಿದಾನೆ . ಸಾಮಾನ್ಯವಾಗಿ ಎಲ್ಲ ಮಕ್ಕಳಿಗೂ ಮುಗುತನದಲ್ಲಿ ತಂದೆಯನ್ನು ತೀರಿಸಿ ತಾಯಿಯ ಪ್ರೀತಿಯನ್ನು ತಮ್ಮ ಕಡೆಗೆ ತಿರುಗಿಸಿಕೊಳ್ಳುವ ಕುತೂಹಲ ವಿರುತ್ತದೆ, ಎಂದು ನನಗೆ ಕಾಲೇಜಲ್ಲಿ ಕಲಿಸಿದ್ದರು ಆದರೆ, ಗುಂಡಪ್ಪ ಆ ನಿಯಮಕ್ಕೆ ವಿರೋಧವಾಗಿ, ತಾಯಿಗೆ ಬದಲಾಗಿ ತಂದೆಯನ್ನೇ ಪ್ರೀತಿಸುವ ಹಸುಳೆಯಾಗಿದ್ದಿರಬೇಕು, ತಂದೆಯ ಮೇಲಿನ ಪ್ರೇಮವೇ ಅವನ ಒಳ ಮನಸ್ಸಿನಲ್ಲಿ ಬೇರೂರಿದ್ದರಿಂದ ಅಂಜನಾದೇವಿಯ ಪುತ್ರ ಎಂಬುದಕ್ಕಿಂತ ವಾತಪುತ್ರ ಎಂದು ಹೇಳುವುದೇ ಅವನಿಗೆ ಸಮಂಜಸವೆನಿಸಿರಬೇಕು.... ಎಂದು ನನಗೆ ತೋರಿತು. ಮಾತೃಭೂಮಿ ಎಂಬುದಕ್ಕೆ ಬದಲಾಗಿ ಅವನು ಪಿತೃಭೂಮಿ ಅಂತಲೇ ಹಿಗ್ಗಬಹುದು, ಎಂದು ಊಹಿಸಿದೆ ........ ಆಗ, ಮತ್ತೊಂದು ಕಿಡಿ ಹಾರಿತು. ಗುಂಡಪ್ಪ ಪಂಡಿತ ಪುತ್ರ, ಅಂದರೆ ಅವನ ತಂದೆ ವಾತ, ಪಿತ್ತ, ಕಫಗಳ ಪ್ರಕೋಪ ಪ್ರಶಮನಗಳಲ್ಲೇ ಸದಾ ನಿರತರು. ವಾತವೇ ಅವರ ಜೀವನಾಧಾರ! ಆದ್ದರಿಂದ, ವಾತಾತ್ಮಜ ಎಂದು ಅವನು ಹೇಳಿದ್ದರಲ್ಲಿ ಆಶ್ಚರ್ಯಪಡಬೇಕಾಗಿಲ್ಲ, ಅಂತ ನಿರ್ಧರಿಸಿದೆ... ನಿದ್ದೆ ಹೋದೆ.

ಸಾವಿರ ಪೆಟ್ಟು ಬಿದ್ದು ಒಂದು ವಿಗ್ರಹ, ಅಂತಾರೆ. ಹಾಗೆಯೇ, ಅನೇಕ ರಿಂದ ಅನೇಕ ರೀತಿಯಲ್ಲಿ ಮನ ಜಿಂದು ಆತ ಹದವಾದನೆಂದು ನನಗೆ

ಕ್ರಮೇಣ ತಿಳಿಯ ಬಂತು. ಅವನನ್ನು ಪೀಡಿಸಿದವರಲ್ಲಿ ನನ್ನ ಮಾವನವರು ಕೇವಲ ಒಬ್ಬರು ಎಂದು ನನಗೆ ವೇದ್ಯವಾಯಿತು. ವ್ರೈಯೆಲ್ಲ ಹುಣ್ಣಾದವ ನನ್ನು ಮುಟ್ಟಹೋದರೆ ಅಂಜುವ ಹಾಗೆ, ಅವನನ್ನು ಯಾರು ಏನಂದರೂ ಮುಖಭಂಗ ಮಾಡುವುದಕ್ಕೆ ಅಂತ ಅವನು ನಿಶ್ಚಯಿಸಿ ಬಿಡುತ್ತಿದ್ದ. ಕಿಡಿಬಂಡೆಯ ಜನಗಳ ಮೇಲೂ ತನ್ನ ನಂಟರಿಷ್ಟರು, ನೆರೆಹೊರೆಯವರು, ಸಹೋದ್ಯೋಗಿಗಳು ಮುಂತಾದವರ ಮೇಲೂ ಅವನು ಒಂದು ರೀತಿಯ ಕಿಲುಬನ್ನು ಕಾರುತ್ತಿದ್ದ . ನಾನೂ ಕೂಡ ತಬ್ಬಲಿಯಾಗಿ ಅನಾಥಾಲಯ ಸೇರಿ ಅನ್ನಕ್ಕಾಗಿ ಅಲೆದಾಡಿ ಅವರಿವರ ಹತ್ತಿರ ಹಲ್ಲುಕಿರಿದು ಅವಮಾನಗಳನ್ನು ನುಂಗಿರುವೆನಾದರೂ, ಗುಂಡಪ್ಪನಷ್ಟು ಕಿಲುಬು ನನ್ನಲ್ಲಿ ಉಳಿದಿರಲಿಲ್ಲ ನನಗೆ ಹಾಗಾದದ್ದು ಬಹುಶಃ ಕ್ಲಿಷ್ಟರಾಯರ ಧನಸಹಾಯದಿಂದ ಇರಬಹುದು ಇದನ್ನರಿತ ಮೇಲೆ, ಗುಂಡಪ್ಪನ ಜೀವನದಲ್ಲಿ ಮತ್ತೆ ಬಿಸಿಲು ಬೆಳದಿಂಗಳುಗಳನ್ನು ತುಂಬಲು ನಾನು ತವಕಪಟ್ಟೆ ಅವನಿಗೆ ಜೀವನದ ಮೇಲಿನ ಆಸೆ ಕುದುರಿ, ಅವನ ಬದುಕು ನಾನಾ ಮುಖವಾಗಿ ಪಲ್ಲವಿಸಬೇಕಾದರೆ, ಯಾವ ನಾಡಿ ಹಿಡಿಯಬೇಕೆಂದು ಪತ್ತೆ ಹಚ್ಚಲು ಪ್ರಯತ್ನಿಸಿದೆ, ಬಹು ದಿವಸದವರೆಗೆ ನನಗೆ ಅದು ಸಿಗಲೇ ಇಲ್ಲ

ಸಂಗೀತ ಸಾಹಿತ್ಯಗಳಲ್ಲಿ ಗುಂಡಪ್ಪನಿಗೆ ಅಭಿರುಚಿ ಇರುವುದಾಗಿ ನನಗೆ ತೋರಲಿಲ್ಲ. ಸಂಗೀತವೆಂದರೆ ಒಂದು ರೀತಿಯ ಹಿಂಸಾಸಾಧನವೆಂಬುದೇ ಅವನ ಅಭಿಪ್ರಾಯವಾಗಿತ್ತು. ಹಾಡಿನಲ್ಲಿ ಅಡಕವಾಗಿರುವ ಅರ್ಥವನ್ನು ಮನಸ್ಸಿಗೆ ನಾಟಿಸುವುದಕ್ಕೆ ಗಾನದ ಸಹಾಯವನ್ನು ಕೋರುವುದು ತೀರ ತಪ್ಪು; ಸುತ್ತಲೂ ಸಕ್ಕರೆಯನ್ನು ಲೇಪಿಸಿ ಗುಳಿಗೆಯನ್ನು ಮಾಡಿ ಮಕ್ಕಳಿಗೆ ಕೊಟ್ಟರೆ ಸಕ್ಕರೆಯನ್ನು ತಿಂದು ಅವರು ಗುಳಿಗೆಯನ್ನುಗುಳುವಂತೆ, ಸಂಗೀತವನ್ನು ಗ್ರಹಿಸಿ ಸಾಹಿತ್ಯವನ್ನು ಮರೆಯುವರು; ಇದು ಮಹಾ ಪಾತಕವೆಂದು ಅವನು ವಾದಿಸಿದ ಅರ್ಥವಿಲ್ಲದ ಬರೀ ಆಲಾಪದಿಂದ ಇಹವೂ ನಷ್ಟ! ಪರವೂ ನಷ್ಟ! ಎಂದು ಅವನು ದೂರಿದ.. .ಆಗ ನಾನು " ಗುಂಡಪ್ಪ! ಇವೆಲ್ಲ ನಿಮ್ಮ ಪಕ್ಕದ ಮನೆಯಲ್ಲಿ ಒಬ್ಬ ಸಂಗೀತದ ಮೇಷ್ಟರಿರುವುದರ ಪ್ರಭಾವ" ಅಂದೆ. ಅವನು ಏನೂ ಹೇಳಲಿಲ್ಲ; ಒಂದು ರೀತಿಯ ನಗೆ ಮಾತ್ರ ಅವನ ಮುಖದಲ್ಲಿ ಹೊಗೆಯಾಡಿತು.

ಕಥೆ ಕಾದಂಬರಿಗಳ ಕಡೆ ಗುಂಡಪ್ಪ ಕಣ್ಣೆತ್ತಿ ಕೂಡ ನೋಡಲಿಲ್ಲ.... ಕಾಳಿದಾಸ ಕಾರಂತ ಕೈಲಾಸಂ ಕಸ್ತೂರಿ ಕರಿಬಸಪ್ಪ ಕುಪ್ಪಳ್ಳಿ ಮುಂತಾದ ಕಾಗುಣಿತದ ಬರಹಗಾರರೆಲ್ಲರನ್ನೂ ಅವನು ಅಲ್ಲಗಳೆದ; 'ಒಲ್ಲೆ' ಅಂದ. ನನ್ನ ಕಥೆಯೇ ಒಂದು ಗೋಳ್ಗವನವಾಗಿರುವಾಗ ಅನಾಹುತ, ಹಾಳೂರು, ಹಾವಿನ ಹಾಸಿಗೆ, ಕಷ್ಟದ ಜೀವ, ಮುಂತಾದ ಪುಸ್ತಕಗಳು ನನಗೇಕೆ? ಅಂದ ಆದರೆ, ನಾನು ಅಷ್ಟಕ್ಕೇ ಬಿಡಲಿಲ್ಲ, ನಮ್ಮ ನಮ್ಮ ಕೂಪಗಳಿಂದ ನಮ್ಮನ್ನೆತ್ತಿ ನಮಗೆ ಹೊಸ ಮಂಡೂಕಗಳನ್ನು ಪರಿಚಯ ಮಾಡಿಕೊಟ್ಟು ಇಡೀ ಶಾಲೂರಜೀವನದ ಹಿನ್ನೆಲೆಯಲ್ಲಿ ನಮ್ಮ ಕಷ್ಟಸುಖಗಳನ್ನು ನಿಲ್ಲಿಸಿ ನೋಡಲು ಕಥೆ ಕಾದಂಬರಿಗಳು ನೆರವಾಗುತ್ತವೆ, ಅಂದೆ ಮೈಸೂರು ಕಾಲೇಜಲ್ಲಿ ನಾನು ಬರೆದೊಪ್ಪಿಸಿದ ಹತ್ತಾರು ಪ್ರಬಂಧಗಳನ್ನು ಗಂಡಪ್ಪನಿಗೆ ಶ್ರವಣಮಾಡಿಸಿದೆ. ಕಾಲಸುತ್ತಲ ಎಡರುತೊಡರುಗಳನ್ನೇ ಗಮನಿಸುತ್ತಿರುವ ನಮ್ಮ ದೃಷ್ಟಿಯನ್ನು ಕವಿಗಳೂ ಕಲೆಗಾರರೂ ನಭೋಮಂಡಳದಲ್ಲಿ ತೊಳಗುವ ನಕ್ಷತ್ರಗಳ ಕಡೆಗೆ ಸೆಳೆಯುತ್ತಾರೆ, ಅಂದೆ ಗಂಡಪ್ಪ ಹೆಬ್ಬೆಟ್ಟಿನಿಂದ ನೆಲ ಕೆರೆಯುತ್ತ ನಿಂತಿದ್ದ ಒಂದು ಸಲ ಆಕಳಿಸಿದ ಆಗ ಅದನ್ನೇ ಮತ್ತೊಂದು ರೀತಿಯಲ್ಲಿ, "ಇಲ್ಲಿ ಕೇಳು! ಗಂಡಪ್ಪ! ಒಂದು ಪುಸ್ತಕವನ್ನು ಕೈಯಲ್ಲಿ ಹಿಡಿದು ಕೂತರೆ, ಮತ್ತೊಬ್ಬ ಸ್ನೇಹಿತ ಸಿಕ್ಕಿದ ಹಾಗೆ! ಬೇರೊಂದು ಊರಿಗೆ ಹೋದಹಾಗೆ! ಇನ್ನೊಬ್ಬರ ಮನೆಗೆ ನುಗ್ಗಿದ ಹಾಗೆ!" ಅಂದೆ ಗುಂಡಪ್ಪ ತೂಕಡಿಸಿದ. "ನೋಡು, ಗುಂಡಪ್ಪ! ಎಲ್ಲರ ಮನೆ ದೋಸೆಯೂ ಕಾವಲಿಮೇಲೆ ಬೇಯಲೇಬೇಕು, ಅಂತ ಗೊತ್ತಾಗುತ್ತದೆ," ಅಂದೆ. ಗುಂಡಪ್ಪ ಕಣ್ಣುತೆರೆದ .... "ಕೇಳು ಮಹಾರಾಯ! ನನ್ನ ಸ್ನೇಹಿತರು ನನಗೆ ಮಾಡಿರುವುದೇ ಸಾಕು! ಅವರಿವರ ಮನೆ ಕಾವಲಿ ಕಾವು ನನಗೇಕೆ? ನಮ್ಮ ಮನೆ ಕಾವಲಿ ಮೇಲೆ ನಾನು ಬೇಯುತ್ತೇನೆ, ಸಾಕು! ಹುಯ್ಯೋ, ಹುಯ್ಯೋ, ಮಹರಾಯ ಅಂತಾರಲ್ಲ, ಹಾಗೆಯೇ ಯಾವ ವಾಯುಪುತ್ರ ಒಲೆ ಮುಂದೆ ಕೂತು ಈ ದೋಸೆ ಹುಯ್ದಿದಾನೋ ಆತನೇ ಸೀದುಹೋಗುವ ಮೊದಲು ಮಗುಚಿಹಾಕುತ್ತಾನೆ! . . . ನಾನು ಯಾಕೆ ಪುಸ್ತಕದ ಹಾಳೆ ಮಗುಚಿಹಾಕಬೇಕು? ಅಂದ.

ಒಂದು ದಿನ ನಾನೂ ಗಂಡಪ್ಪನೂ ಕಿಡಿಬಂಡೆಯಿಂದ ಪೂರ್ವಕ್ಕೆ ಎಂಟು ಹತ್ತು ಮೈಲಿವರೆಗೆ ನಡೆದುಹೋದೆವು...... ಅವಸರ ಬಿದ್ದಾಗ ನಾನು

ಸ್ಯೆಕಲ್ ಮೇಲೆ ತಿರುಗುತ್ತಿದೇನೆಯೇ ಹೊರತು, ಕಾಲು ಬೀಸಿಕೊಂಡು ಮುಂದು ವರಿಯುವುದೇ ನನಗೆ ಪ್ರೀತಿ ಬಲಗಾಲು ಎಡಗಾಲು ಇವರಿಬ್ಬರೇ ನನ್ನ ವೈದ್ಯರು. ಮೈಸೂರಿನಲ್ಲಿದ್ದಾಗಲೂ ಅಷ್ಟೆ; ಯಾವನ ಮನೆಗೆ ಒಂದ ಮೇಲೂ ಅಷ್ಟೆ. ಮೈಗೆ, ಮನಸ್ಸಿಗೆ, ಆರೋಗ್ಯ ಕೆಟ್ಟರೆ, ನಡೆದೇಬಿಡುವೆ, ನನ್ನ ವೈದ್ಯರ ಕೂಡ. ಆದರೆ ಕ್ಲಿಷ್ಟರಾಯರ ಸಂಗಡ ನಾನು ಎಂದೂ ಸಹಗಮನ ಮಾಡಿಲ್ಲ. ಆಲ್‌ಡಸ್ ಹಕ್ಸ್ಲಿ, ಟಾಗೂರ್, ಬೆರ್‌ಟ್ರೆಂಡ್ ರಸೆಲ್, ಜೋಡ್ ಮುಂತಾದವರ ಗ್ರಂಥವೊಂದನ್ನು ಶುಕ್ರವಾರ ಶನಿವಾರ ಓದಿಮುಗಿಸಿ, ಭಾನುವಾರ ಬೆಳಗ್ಗೆ ಎದ್ದು ಸಂಜನಗೂಡು ತನಕ ನಡೆದು, ಸಂಜೆ ರೈಲಿನಲ್ಲಿ ಮೈಸೂರಿಗೆ ಹಿಂತಿರುಗುವುದೇ ನನ್ನ ಪದ್ಧತಿ; ಉದ್ದಕ್ಕೂ ಟಾರ್‌ರಸ್ತೆ; ಕಾಲುಗಳೆರಡೂ ತಾವಾಗಿಯೇ ನಾ ಮುಂದು ತಾ ಮುಂದು ಎಂದು ಪೈಪೋಟಿ ಮಾಡುತ್ತಾ, ನೀಸೋತೆ, ನಾ ಗೆದ್ದೆ, ಅಂತ ನಡೆಯು ತ್ತವೆ ಒಂದು ಕಾಲು ತುಸು ನಿಂತ ಕೂಡಲೇ ಮತ್ತೊಂದು ಮುಂದಕ್ಕೆ ಕುಪ್ಪಳಿಸಿ ಅದನ್ನು ಮೀರಿಸಿ ನಿಂತುಕೊಳ್ಳುವ ಹೊತ್ತಿಗೆ ಹಿಂದೆ ಬಿದ್ದದ್ದು ಹಾರಿಗೊಂಡು ಅದರ ಮುಂದಕ್ಕೆ ಹಾರುತ್ತದೆ ತಮ್ಮ ಮೇಲಾಟದಲ್ಲಿ ಅವು ಹೊತ್ತ ಹೊರೆಯನ್ನೇ ಮರೆತು ಬಿಡುತ್ತವೆ ನಮ್ಮ ಪಾಡಿಗೆ ನಾವು ಸುಖವಾಗಿ ಏಳು ಬೀಳುಗಳ ಭಯವಿಲ್ಲದೆ ಅವರ ಮೇಲೆ ಭಾರಹಾಕಿ ನಮ್ಮ ಯೋಚನೆಗಳಲ್ಲೇ ಕಾಲ ತಳ್ಳಬಹುದು ಆದರೆ, ಹೀಗೆ ಹೊರಡುವಾಗ ನಮ್ಮ ಸಂಗಡ ಮತ್ತೊಬ್ಬರಿರಬಾರದು ನಮ್ಮ ಪಾದಗಳನ್ನು ನಾವು ಅವರ ಪಾದಗಳಷ್ಟೇ ಬೆಳೆಸಲು ಸಾಧ್ಯವೆ? ನಾವು ಮನಬಂದಂತೆ ಭಾವಿ ಭಾರತ ವನ್ನೋ ಪ್ರಪಂಚವನ್ನೋ ಪುನರ್‌ರಚಿಸುತ್ತಾ ಮುಂದುಮುಂದಕ್ಕೆ ನಡೆದು ಹೋಗುತ್ತಿದ್ದರೆ ಆತ ನಮ್ಮನ್ನು ಹಿಂದಕ್ಕೆ ಕರೆದು, ಕೆಸರಿನ ಕಾಸಾರದಲ್ಲಿ ಹೊರಳುತ್ತಿರುವ ಎಮ್ಮೆಗಳ ಹಿಂಡನ್ನು ತೋರಿಸಿ, ನಮ್ಮ ಗಾಳಿಪಟದ ದಾರ ವನ್ನು ಕತ್ತರಿಸಿಬಿಡುತ್ತಾನೆ ನೊಗಕ್ಕಾದರೆ, ಜಂಟಿ! ನಡಿಗೆಗಾದರೆ ಒಂಟಿ!

ಆದರೂ ನಾನು ಕಿಡಿಬಂಡೆಗೆ ಬಂದ ಮೇಲೆ ಗುಂಡಪ್ಪನ ಸಹಿತವಾಗಿಯೇ ನಡಿಗೆಯ ನೋಂಪನ್ನು ನೆರವೇರಿಸುತಿದೇನೆ ಏಕೆ ಅಂದರೆ, ಅವನಿಗೆ ಈ ಊರಲ್ಲಿ ನಾನೇ ಊರುಗೋಲು!.. .... ಆಗಲೇ ಹೇಳಿದ ಹಾಗೆ, ನಾನೂ ಗುಂಡಪ್ಪನೂ ಒಂದು ದಿನ ಕಿಡಿಬಂಡೆಯಿಂದ ಪೂರ್ವಕ್ಕೆ 'ಎಂಥಾಮಣಿ'ಗೆ

ಹೋಗುವ ರಸ್ತೆಯ ಮೂಲಕ ಉದ್ದಕ್ಕೂ ನಡೆದುವು. ಆದರೆ, ಅದು ಕೇವಲ ಕಣ್ಣೆ ರಸ್ತೆಯಲ್ಲ. ರಸ್ತೆ ಪಕ್ಕದಲ್ಲಿಯ ಚರಂಡಿ ಅಗೆದು ಪ್ರತಿ ವರ್ಷವೂ ಆ ಮಣ್ಣನ್ನು ತೆಗೆದು ರಸ್ತೆ ಮೇಲೆ ಹರಡುತ್ತಾರೆ ಗಾಳಿ ಮಳೆಗಳಿಂದ ಮಣ್ಣು ಮತ್ತೆ ಚರಂಡಿ ಪಾಲಾಗುತ್ತೆ. ಮುಂದಿನ ವರ್ಷ ಮತ್ತೆ ಯಥಾ ಪ್ರಕಾರ ಚರಂಡಿ ತೋಡಿ ಅದನ್ನು ರಸ್ತೆ ಮೇಲಕ್ಕೆಸೆಯುತ್ತಾರೆ ಇದೇ ರಿಪೇರಿಯ ಪ್ರಕ್ರಿಯೆಯಾದ್ದರಿಂದ, ಎತ್ತಿನ ಗಾಡಿಗಳು, ಕುರಿ ಹಿಂಡುಗಳು, ಎಮ್ಮೆಗಳ ತಂಡಗಳು, ಹೆಂಡದ ಲಾರಿಗಳು ಮುಂತಾದವು ಧೂಳೆಬ್ಬಿಸುತ್ತಾ ಸಾಲುಸಾಲಾಗಿ ಎದುರಿಗೆ ಬಂದಾಗ, ನಾವಿಬ್ಬರೂ ಹಳ್ಳಿ ಕಡೆ ಹೋಗುತ್ತಿದ್ದ ಒಂದು ಸಣ್ಣ ದಾರಿಯನ್ನು ಹಿಡಿದವು ಹಳ್ಳ ದಿಣ್ಣೆಗಳನ್ನು ಹಾದು, ಮಾವಿನ ತೋಪುಗಳನ್ನು ಒಳಸಿ, ಬೇವಿನ ತೋಪುಗಳನ್ನು ಹೊಕ್ಕು, ನಾಲ್ಕಾರು ಹಳ್ಳಿ ಕಳೆದು, ಅಲ್ಲಿಯ ನಾಯಿಗಳನ್ನು ಎಬ್ಬಿಸಿ ಬೊಗಳಿಸಿ, ಹಸುರು ಜಮಖಾನೆ ಹರಿದು ಹಂಚಾದಂತೆ ಇದ್ದ ಒಂದ ಮೈದಾನದ ಮೂಲಕ ಕಾಲುದಾರಿ ಹಿಡಿದು ನಡೆದವು ದಾರಿಯುದ್ದಕ್ಕೂ ಆ ದಿನ, ಏಕೋ, ಏನೋ, ನಾವು ಮದುವೆ, ಸತಿಸತಿ, ತಾಯಿತಂದೆ ಮಕ್ಕಳ ಮೇಲಿನ ಮೋಹ, ಋಣಾನುಬಂಧ, ಗೃಹಸ್ಥ ಜೀವನ ಈ ವಿಷಯಗಳನ್ನೇ ಪ್ರತಿಪಾದಿಸುತ್ತಿದ್ದವು ಗಂಡಪ್ಪ ಬಹು ಜಾಣತನದಿಂದ ವಿಷಯವನ್ನು ತನ್ನ ವಾತಾತ್ಮಜನವರೆಗೂ ಮುಟ್ಟಿಸಿದ!

ಆಂಜನೇಯನಂತಹ ಬ್ರಹ್ಮಚಾರಿ ಸಂಸಾರ ಜೀವಿಯಾದ ರಾಮನ ಪದತಲದಲ್ಲಿ ಕೈಜೋಡಿಸಿ ಕೂತಿದ್ದು ನ್ಯಾಯವೆ? ಎಂಬ ಸಮಸ್ಯೆಯನ್ನು ನಾವು. ಯೋಚನೆ ಮಾಡಿದರೆ ನನಗೇ ಈಗ ನಗು ಬರುತ್ತದೆ ಆ ದಿನ ಬಿಡಿಸಲು ಹವಣಿಸಿದವು ಸಂಸಾರ ಜೀವನವೇ ಅತ್ಯುತ್ತಮ ಎಂಬ ಭಾವನೆ ರಾಮನಲ್ಲಿ ಬೇರೂರಿದ್ದರೆ ತನ್ನ ಅತ್ಯಂತ ಭಕ್ತನಾದ ಹನುಮಂತನಿಗೆ ಆತ ಮದುವೆ ಮಾಡಿಕೊ ಅಂತ ಒಂದು ಮಾತು ಹೇಳುತ್ತಿರಲಿಲ್ಲವೆ? ಏಕೆ ಹೇಳಲಿಲ್ಲ? ತನಗಾದ ಕಷ್ಟ ತನ್ನ ಭಕ್ತನಿಗಾಗಬಾರದೆಂತಲೇ? ಕಪಿ ಸಂತತಿ ಬೆಳೆಯಕೂಡದು, ಅಂತಲೇ?. . "ವಿಳಂಬಾನಂದ ಸ್ವಾಮಿ ಅವರನ್ನ ಈ ಪ್ರಶ್ನೆ ಕೇಳಲು ಮರೆತೆ ಆಗ ನನಗೆ ನನ್ನ ಭಾವನ ತಮ್ಮನ ಪರಿಚಯ ಇರಲಿಲ್ಲ" ಅಂತ ಗುಂಡಪ್ಪ ಕೊರಗಿದ... ಅಷ್ಟು ಹೊತ್ತಿಗೆ,

ನಮಗೆ ಒಂದು ಮಾರಮ್ಮನ ಗುಡಿ ಸಿಕ್ಕಿತು ಅದರ ಮುಂದೆ ಒಂದು ಮಾಸ್ತಿ ಕಲ್ಲು ಬೇರೆ ಇತ್ತು; ಒಬ್ಬ ಪತಿಯು ಇಬ್ಬರು ಸತಿಯರು ಅವನೊಡನೆ ಕಿಚ್ಚು ಹಾರಿದ ಅಚ್ಚರಿಯ ಸುದ್ದಿ! ಗುಂಡಪ್ಪನ ಕಾಲುಗಳು ಸೋತು ಹೋಗಿದ್ದವಾದ್ದರಿಂದ ಅವನು ಆ ಕಲ್ಲಿಗೆ ಒರಗಿಕೊಂಡು ತನ್ನ ವಾದವನ್ನ ಮುಂದುವರಿಸಿದ ‘ಅಭಿನವ ಮಾರುತಿ ಎಂಬವರು ಮಹಾನುಭಾವರು! ಆವರು ಅವಿವಾಹಿತರು ಅವರ ಪರಿಚಯು ನನಗೆ ಮೊದಲೇ ಲಭಿಸಿದ್ದರೆ ನಾನು ಮದುವೆ ಮಾಡಿಕೊಳ್ಳುತ್ತಿರಲಿಲ್ಲ’ ಎಂದು ಮುಂತಾಗಿ ಗುಂಡಪ್ಪ ತುಂಬಾ ಹಲುಬಿದ

ನಾನು ಅಲ್ಲೇ ನಿಂತು ಸುತ್ತಲೂ ನೋಡಿದೆ ಆಗ ತಾನೆ ಯಾರೋ ಯಾವುದೋ ಉತ್ಸವಕ್ಕಾಗಿಯೋ ಏನೋ ಆಕಾಶವನ್ನೆಲ್ಲ ಗುಡಿಸಿ ಮೋಡದ ಚೂರುಗಳನ್ನೆಲ್ಲ ಆಚೆಗೆ ಎಸೆದಿದ್ದರು ತೊಳದು ತಿಳಿಯಾದ ನೀಲಿ ಬಣ್ಣವನ್ನು ಬಳಿದಿದ್ದರು ಮೂಡಲಲ್ಲಿ ಮನಮೋಹಕವಾದ ಒಂದು ಇಂದ್ರ ಧನುಸ್ಸನ್ನು ಯಾರೋ ರಚಿಸಿ ನಿಲ್ಲಿಸಿದ್ದರು! ಈ ಸಮಾಚಾರವನ್ನು ಕೇಳಿಯೋ ಏನೋ, ಎಲ್ಲಿಗೋ ಇಳಿದಿಳಿದು ಹೋಗುತ್ತಿದ್ದ ಸೂರ್ಯದೇವನು ದಿಗಂತದಲ್ಲೇ ಮಲತು ಬಿದ್ದಿದ್ದ ಒಂದು ಕೋಡುಗಲ್ಲಿನ ಮೇಲ ಹಿಂತಿರುಗಿ ನಿಂತು ಅದನ್ನೇ ದಿಟ್ಟಿಸಿ ನೋಡುತ್ತಿದ್ದ ನಮ್ಮ ಸುತ್ತಲೂ ಇದ್ದ ತೋಪುಗಳಿಂದ ಸಾವಿರಾರು ಹಕ್ಕಿಗಳು ಆ ಸೊಬಗಿನ ಸುಗ್ಗಿಯನ್ನು ತಮತಮಗೆ ಚಿಲಿಪಿಲಿ ಸುತ್ತಿದ್ದುವು ದೂರದ ಹಳ್ಳಿಯೊಂದರಿಂದ ಬಂದ ಮಕ್ಕಳ ಕೂಗಾಟವೂ ಅದೇ ವಾರ್ತೆಯನ್ನೇ ಸಾರಿತು. ಮಾರಿಗುಡಿಯ ಹಿಂಭಾಗದಲ್ಲಿ, ಗುಡ್ಡದ ಕೆಳಗೆ, ಹೆಸರಿಲ್ಲದ ತೊರೆಯೊಂದು ಕಲ್ಲುಬಂಡೆಗಳಿಗೆಲ್ಲ ಕಿಚುಕುಳಿ ಇಡುತ್ತಾ ಅವುಗಳ ದೃಷ್ಟಿಯನ್ನು ಬಿಲ್ಲಿನ ಕಡೆಗೆ ತಿರುಗಿಸಿತು ಆ ಸೊಬಗಿನ ಸುಗ್ಗಿಯಲ್ಲಿ ನಾನು ಮೈಮರೆತು ನಿಂತ. “ಬಾ ಇಲ್ಲಿ! ನೋಡು, ನೋಡು! ಕಾಮನ ಬಿಲ್ಲು!” ಅಂತ ಗುಂಡಪ್ಪನನ್ನು ಕರೆದೆ ನನ್ನ ಮಾತು ಅವನ ಕಿವಿಗೆ ಬೀಳಲೇ ಇಲ್ಲ. ತನ್ನ ವಿಚಾರ ಕೂಪದಲ್ಲೇ ಆತ ಕುಳಿತು ಕೊರಗುತ್ತಿದ್ದ. “ಮಹಾಸತಿಯಂತೆ, ಮಹಾಸತಿ! ಈತನನ್ನ ಸ್ತ್ರೀ ಘಾತಕ ಅಂತ ಅನ್ನಬೇಕು,” ಅಂದ.

ಪ್ರಕೃತಿ ದೇವಿಯ ಆರಾಧನೆಗೆ ಆಹ್ವಾನವಿತ್ತರೆ ಅಲಸನಾಗಿರುವಷ್ಟು ಗುಂಡಪ್ಪನ ಒಳಮನಸ್ಸು ಕುದಿಯುತ್ತಿತ್ತು ಎಂದು ತಿಳಿದಾಗ ನನಗೆ ದಿಕ್ಕೇ ಕಾಣದೆ ಹೋಯಿತು. ಆತ ವಿದ್ಯಾವಂತ, ಪದವೀಧರ, ಅನುಭವಸ್ಥ, ಹೆಡ್ ಗುಮಾಸ್ತೆ, ಸಾವಿರಾರು ರೂಪಾಯಿ ಖರ್ಚು ವೆಚ್ಚಾದಿಗಳ ಲೆಕ್ಕಪತ್ರಗಳ ಹೊಣೆ ಹೊತ್ತವನು! ಆದರೂ, ಆತ ಹೀಗೆ ಕಿಡಿಬಂಡೆ ವಿಶ್ವೇಶ್ವರ ದೇವಸ್ಥಾನದ ಹಾಗೆ ಕುಸಿದು ಕೂತನಲ್ಲಾ! ದೇವರ ಗುಡಿಯಾದರೆ, ಕೂತರೆ ಕೂತಿರಲಿ, ಅನ್ನಬಹುದು. ಆದರೆ, ಸಂಸಾರಜೀವಿ ಮನುಷ್ಯ, ಅರೆಬದುಕಿನಲ್ಲೇ ಅಯ್ಯೋ ಅಂದರೆ, ಕೇಳಿದವರು ಸುಮ್ಮನಿರಲು ಸಾಧ್ಯವೇ? ಆದರೂ, ಅವನ ಎದೆಯನ್ನು ಬೆದಕಿ ನೋಯಿಸಲು ನನಗೆ ಮನಬರಲಿಲ್ಲ.

ಮಾರಿಗುಡಿಯಿಂದ ಮನೆಗೆ ಹಿಂತಿರುಗಿದಾಗ ರಾತ್ರಿ ಸುಮಾರು ಹತ್ತೂವರೆ ಗಂಟೆ ಆಗಿತ್ತು. ದಾರಿಯುದ್ದಕ್ಕೂ ನಾವು ಮಾತನಾಡಲೇ ಇಲ್ಲ ಗುಂಡಪ್ಪನ ಮನಸ್ಸಿನಲ್ಲಿ ಯಾವುದೋ ತುಂಬಿ ತುಳುಕದೆ ಇದೆ ಎಂದು ನನಗೆ ಗೊತ್ತಾಗಿದೆ ಎಂದು, ಅವನಿಗೆ ಗೊತ್ತಾಗಿತ್ತೆಂದು, ಆ ಮೌನವೇ ನನಗೆ ಹೇಳಿತು. ಅಲ್ಲದೆ, ನಮ್ಮ ಕಾಲಸಪ್ಪುಳಗಳಿಂದಲೇ ನಮನಮಗೆ ಪರಸ್ಪರ ವಿಚಾರವಿನಿಮಯವಾಗುತ್ತಿತ್ತು ಮೊದಮೊದಲು ಗುಂಡಪ್ಪ ಬಿರುಬಿರನ ನಡೆದವನು ನಿಧಾನವಾಗಿ ಸಾಮಾನ್ಯ ನಡಿಗೆಗಿಳಿದ. ಆಗ ಅವನ ಮನಸ್ತರಂಗಗಳು ಸ್ಥಿಮಿತವಾಗ ಹತ್ತಿದುವು ಎಂದು ನಾನು ತಿಳಿದೆ. ಮೊದಮೊದಲು ರಸ್ತೆಯ ಪಕ್ಕದಲ್ಲಿದ್ದ ಗಿಡಗಂಟೆಗಳನ್ನೆಲ್ಲ ತನ್ನ ಕೈಕೋಲಿನಿಂದ ಗುಂಡಪ್ಪ ಬಡಿದು ಮುರಿಯುತ್ತಿದ್ದ. ಅವನ ಆಕ್ರೋಶದ ಆಳವನ್ನೂ ಅದರ ಏಟಿಗೆ ತಗುಲಬೇಕಾದವರ ಸಂಖ್ಯೆಯನ್ನೂ ಆ ರಭಸದಿಂದ ನಾನು ಊಹಿಸಿದೆ. ಕಡೆಗೆ ಅವನು ಆ ಕೋಲನ್ನೇ ಕತ್ತಲೊಳಕ್ಕೆ ಎಸೆದು ಮೆಲುಮೆಲನೆ ಅಡಿಯಿಡಲು ತೊಡಗಿದ. ನಡುನಡುವೆ ಒಂದೆರಡುಸಲ ಅವನು ಧೂಕರಿಸಿದ ಸದ್ದು ಕೂಡ ನನಗೆ ಕೇಳಿಸದೆ ಇಲ್ಲ ..ನಾನು ಯಾವ ಮಾತನ್ನೂ ಆಡದೆ, ಒಂದು ಕಳ್ಳಕೆಮ್ಮನ್ನೂ ಕೂಡ ಹೊರಗೆಡಹದೆ ಅವನ ಎಡಮಗ್ಗುಲಲ್ಲೇ ಎಂಟುಮೈಲಿಯಷ್ಟು ನಡೆದೆ. ಆ ನನ್ನ ನಡಿಗೆಯ ಅರ್ಥ ಏನೆಂದು ಗುಂಡಪ್ಪನೂ ಮನಗಂಡಿರಬೇಕು. ಏಕೆಂದರೆ ಊರಿನ ಹೊರವಲಯದ ಲಾಂದ್ರದ ಕಂಬಗಳು ಕಣ್ಣಿಗೆ ಬಿದ್ದಾಗ, ಅವನು "ನಾರಾಯಣ

ಗಾವು! ಕ್ಷಮಿಸಬೇಕು! ಗೊತ್ತಿದೆಯಲ್ಲಾ ನಿಮಗೆ ನನ್ನ ಸ್ವಭಾವ" ಅಂತ ಹೇಳಿ ನಿಟ್ಟುಸಿರುಬಿಟ್ಟೆ "ಬಿಡಪ್ಪ! ಏನಿವೆಲ್ಲಾ, ಮಹಾ!" ಅಂತ ನಾನೂ ಹೇಳಿದೆ ಆಗತಾನೆ ಪೇಟೆ ಉದ್ದಕ್ಕೂ ಸಾಹುಕಾರರುಗಳು ಅಂಗಡಿ ಬಾಗಿ ಲುಗಳನ್ನು ಮುಚ್ಚುತ್ತಿದ್ದರು.. ಗುಂಡಪ್ಪನನ್ನು ಬೀಳ್ಕೊಟ್ಟು ನಾನು ಸ್ವಗೃಹಕ್ಕೆ ಬಿಜಯಂಗೈದೆ!

ಅಲ್ಲ, ಅಲ್ಲ! ಸ್ವಗೃಹ, ಅಂತ ಹೇಳಿದ್ದು ತಪ್ಪಾಯಿತು. ಗೃಹಿಣೀ ಗೃಹ ಮುಚ್ಯತೆ, ಅಂತಾರೆ, ಅಲ್ಲವೆ? ಕ್ಲಿಷ್ಟರಾಯರು ಇನ್ನೂ ಮಗಳನ್ನು ಕಳುಹಿಸಿ ಕೊಟ್ಟಿರಲಿಲ್ಲ. ಅವರ ಹತ್ತಿರ ಕಾದಾಡಿ ಆಕೆಯನ್ನು ಕರೆಸಿಕೊಂಡ ಮೇಲೆ ತಾನೆ ನನಗೆ ಒಂದು ಗೃಹ?

ಆ ದಿನ ರಾತ್ರಿಯೆಲ್ಲ ನಾನು ಹಾಸಿಗೆಯ ಮೇಲೆ ಹೊರಳಾಡಿದೆ. ಗಂಡಪ್ಪನಿಗೆ ಗೆಲುವನ್ನುಂಟುಮಾಡಲು ಯಾವುದಾದರೊಂದು ಉಪಾಯ ವಿರಬೇಕೆಂದು ನನಗೆ ನನ್ನ ಅಂತರಾತ್ಮ ಹೇಳುತ್ತಲೇ ಇತ್ತು. ಬದುಕಿರುವ ಪ್ರತಿಯೊಂದು ಪಶುಪಕ್ಷಿಗೂ ಕೂಡ ಯಾವುದೋ ಒಂದು ಹಂಬಲು, ಒಂದು ಕನಸು, ಒಂದು ಆದರ್ಶ, ಒಂದು ನೆಚ್ಚು ಆಸರೆಯನ್ನು ಕೊಡುತ್ತದೆ. ಐದಾರು ಮೈಲಿಗಳ ಎತ್ತರದಲ್ಲಿ ನಿಮಿಷ ಒಂದಕ್ಕೆ ಐದಾರು ಮೈಲಿಗಳ ವೇಗದಲ್ಲಿ ಅಂತರಿಕ್ಷವನ್ನು ಭೇದಿಸುತ್ತ ಮುಂಬರುವ ವೈಮಾನಿಕನೂ ಕೂಡ ನೆಲದ ಮೇಲೆ ಹುದುಗಿರುವ ತನ್ನ ಮನೆಯ ಒಂದು ಕೋಣೆಯಲ್ಲಿ ಹೆಬ್ಬೆಟ್ಟು ಚೀಪುವ ತೊಟ್ಟಿಲ ಮಗುವನ್ನೇ ನೆನೆದು ನುಗ್ಗುತ್ತಾನೆ. ಹಾಗೆಯೇ, ಗುಂಡಪ್ಪನಿಗೂ ಬಾಳಿನ ಬೆಳಕಾಗಿ, ಬದುಕಿನ ಉಸಿರಾಗಿ, ಎದೆಯ ಕಮಲಾ ಕರವಾಗಿ, ಯಾವುದೋ ಒಂದು ಆಸೆ ಇರಬೇಕು! ಎಂದು ನನಗೆ ಅನ್ನಿ ಸಿತು. ಅದು ಸಂಗೀತವಲ್ಲ, ಸಾಹಿತ್ಯವಲ್ಲ, ಪ್ರಕೃತಿಯ ಸೌಂದರ್ಯದ ಉಪಾ ಸನೆ ಅಲ್ಲ, ತತ್ವಚಿಂತನೆ ಅಲ್ಲ, ಎಂಬುದು ಮಾತ್ರ ನನಗೆ ವೇದ್ಯವಾಗಿತ್ತು. ಗುಂಡಪ್ಪನ ಗುಟ್ಟು ಏನು ಅಂತ ನನ್ನ ತಲೆಯೊಳಗೆ ಹೊಕ್ಕ ಕೀಟ ಅಲ್ಲಿ ಕೊರೆ ಯುತ್ತಲೇ ಇತ್ತು. ಅಂತಹ ಒಂದು ಗುಟ್ಟಿಲ್ಲದೆ, ಯಾರಿಂದಲೂ ಬದುಕಲು ಸಾಧ್ಯವಿಲ್ಲವೆಂಬುದು ಮಾತ್ರ ನಿಜ!

ಬೆಳಗಿನ ಜಾವ, ಸುಮಾರು ಕೋಳಿ ಕೂಗುವ ಹೊತ್ತು. ಆದರೆ ಗಡಿಯಾರದ ಮುಳ್ಳನ್ನು ಮುಂದಕ್ಕೆ ತಳ್ಳದ ಹಳೇ ಸಂಪ್ರದಾಯದ ಕೋಳಿ

ಗಳು ಕೂಗುವ ಹೊತ್ತು ಒಳಗೊಂದು ಕಿರಣ ಹೊಳೆಯಿತು ಕೂಡಲೇ ಎದ್ದು, ಹೊರಬಾಗಿಲಿಗೆ ಬೀಗ ತಗುಲಿಸಿ, ಗುಂಡಪ್ಪನ ಮನೆಕಡೆಗೆ ಬೈಸಿಕಲ್ಲಿನ ಮುಖ ತಿರುಗಿಸಿ ತುಳಿದೆ ಅವನ ಮನೆ ಮುಂದಿಳಿದು "ಓ ಮಿಸ್ಟರ್" ಅಂತ ಬೆಲ್ಲಲ್ಲಾಡಿಸಿದೆ ಒಳಗಿನಿಂದ ಆತನ ತಾಯಿ, 'ಪುರಂಧರವಿಟ್ಠಲಾ' ಅಂತ ಬಾಗಿಲು ತೆರೆದರು 'ಬನ್ನಿ' ಅಂದರು

ನಾನು ಅದುವರೆಗೂ ಆ ಮನೆಯೊಳಕ್ಕೆ ಪ್ರವೇಶ ಮಾಡಿರಲಿಲ್ಲ ಗುಂಡಪ್ಪ ಸಾಧನೆ ಮಾಡುತ್ತಿದ್ದ ಗರಡಿಮನೆ ಅದು, ಅವನು ಕರುಳಿನಲ್ಲಿ ಅಕ್ಷರ ತಿದ್ದುತ್ತಿದ್ದ ಕೂಲಿಮಠ ಅದು, ಅಂತ ನಾನು ಅದರ ಮುಂದೆ ಭಯ ಭರಿತನಾಗಿ ಅನೇಕವೇಳೆ ಕೈಮುಗಿದಿದ್ದೇನೆ 'ಬಾಯಿ ಮಾತಿಗೆ ಬೀದಿ ಸಾಲದೆ' ಅಂತ ಗುಂಡಪ್ಪನೂ ಕೂಡ ನನ್ನನ್ನ ಅದುವರೆಗೂ ಹೊಸಲಾಚೆ ನಿಲ್ಲಿಸಿ ತಾನು ಹೊರಬರುತ್ತಿದ್ದ ಒಂದೆರಡು ಸಲ ನಾನು ಒಬ್ಬನೇ ಅವನ ಬಾಗಿಲ ಹೊರಗೆ ನಿಂತಿದ್ದಾಗ, ಎದುರಂಗಡಿಯವನು, "ಹೋಗಿ ಸ್ವಾಮಿ! ಹೋಗಿ ಕಾಣಿ! ಹೆದರಬೇಡಿ ಕೈಯಲ್ಲಿ ಎರಡು ನಿಂಬೆಹಣ್ಣು, ಮಕ್ಕಳಿಗಿಷ್ಟು ಕಲ್ಲು ಸಕ್ಕರೆ ತಗೆದುಕೊಂಡು ಹೋಗಿ'' ಅಂತ ನನಗೆ ಹೇಳಿದ್ದ ಆಗ ನಾನು ಕೋಪದಿಂದ ಅವನ ಮೇಲೆ ಕಿಡಿಕಾರಿದಾಗ ಅವನು, "ಗೊತ್ತಾಗಲಿಲ್ಲ, ಸ್ವಾಮಿ! ನನ್ನೊಡೆಯ! ನೀವು ಅವರ ಸ್ನೇಹಿತರಾದರೆ, ಆಗಾಗ ನಿಮ್ಮ ಮನೆಗೆ ಕರೆದ ಕೊಂಡು ಹೋಗಿ ಸ್ವಾಮಿ! ಅವರಿಗೆ 'ಇಸ್ಪೀಟು ಕಲಿಸಿ ಸ್ವಾಮಿ! ತಮಾಷೆ ಅಲ್ಲ' ಅಂತ ಹೇಳಿದ್ದ ನಾನು, ಏನೋ ಇದು! ತಲೆಹರಟೆ ತೆಗಿದೆಯಾ? . ಓಡಿಸಿಬಿಡುತ್ತೇನೆ ನೋಡು ಇಲ್ಲಿಂದ, ಸಬ್ ಇನ್ಸ್ಪೆಕ್ಟರಿಗೆ ಹೇಳಿ ಅಂದೆ ಇಸ್ಪೀಟಿನ ಮೇಲೆ ಅಭಿಲಾಷೆ ಹುಟ್ಟಿಸಿಯಾದರೂ ಗುಂಡಪ್ಪನನ್ನು ಗೆಲುವಾಗಿರಿಸಬೇಕು ಅಂತ ಆತನೂ ಪಿತೂರಿ ಹೂಡಿದ್ದರಲ್ಲಿ, ನನಗೆ ಆಶ್ಚರ್ಯವಾಯಿತು

ಒಳಗೆ ಹೋದೆ ಗುಂಡಪ್ಪ ಸ್ನಾನಮುಗಿಸಿ ಆಂಜನೇಯನ ಒಂದು ಚಿತ್ರದ ಮುಂದೆ ನಮಸ್ಕಾರ ಮಾಡುತ್ತಿದ್ದ. ನಾನು ಕಂಡ ಕಿರಣ ಅವನ ಅಂತಃಕರಣವನ್ನು ನಿಜವಾಗಿಯೂ ಬೆಳಗಿಸಿತ್ತು ಎಂದು ನನಗೆ ನಿಶ್ಚಯವಾಯಿತು. "ಇವತ್ತು ನಮ್ಮೂರಿನವರು ಯಾರೋ ಬಂದಿದಾರೆ; ವಾಕಿಂಗ್ ಹೋಗುವುದಕ್ಕಾಗುವುದಿಲ್ಲ ಅಂತ ತಿಳಿಸೋಣ ಅಂತ ಬಂದೆ'' ಎಂದು ಹೇಳಿ ನಾನು ಪರಾರಿಯಾದೆ.

"ವಾತಾತ್ಮಜಾ" ಎಂಬ ಉದ್ಗಾರದ ಗೂಢಾರ್ಥ ನನಗೆ ತಿಳಿಯಿತು. ಗುಂಡಪ್ಪ ಆಂಜನೇಯನ ಆರಾಧಕ. ಭಾವನ ತಮ್ಮ, ಮಾರುತಿ ಪ್ರಶ್ನೆ, ಅಭಿನವ ಮಾರುತಿ ಮುಂತಾದ, ಅವನ ಮಾತುಗಳೂ ಸ್ಪಷ್ಟವಾದುವು. ಅಂದಿನಿಂದ ನಾನೂ ಕೂಡ ಗುಂಡಪ್ಪನೆದುರು ಆಂಜನೇಯನ ಭಕ್ತಿ ಸಾಹಸಗಳನ್ನೆ ಒಳ ಹೊಕ್ಕು ವರ್ಣಿಸಿ ಅವನ ಬಾಯಿ ಬಿಡಿಸಿ ಹೃದಯವನ್ನು ವಿಡಿಸಿದೆ. ಅವನ ಜೀವನರಹಸ್ಯ ನನಗೆ ದೊರೆತ ಮೇಲೆ ಅದರ ಮೂಲಕವೇ ಅವನಲ್ಲಿ ರಸ ಉಕ್ಕುವಹಾಗೆ ಮಾಡಲು ಪ್ರಯತ್ನಿಸಿದೆ. ಹುಯಿಲಗೋಳರ "ಉದಯುವಾಗಲಿ ಚೆಲುವ ಕನ್ನಡನಾಡು" ಎಂಬ ಪದ್ಯವನ್ನು ಅವನೆದುರು ಹಾಡಿ, "ನೋಡು, ಗುಂಡಪ್ಪ! ಹನುಮನ ದಿಸಿದ ನಾಡ!—ಕನ್ನಡನಾಡು" ಎಂದೆ. ಸರಿ ಅವನಿಗೆ ಕನ್ನಡನಾಡ, ಜನ, ನುಡಿ, ಇವುಗಳಲ್ಲಿ ಹೊಸ ಪ್ರೀತಿ ಉಂಟಾಯಿತು. ಹಂಪೆಯ ಹತ್ತಿರವೇ ಆಂಜನಾದೇವಿಯಿದ್ದ ಬೆಟ್ಟವಿದೆ, ಅಂದೆ. ಅವನು ವಿಜಯನಗರ ಸಾಮ್ರಾಜ್ಯದ ಚರಿತ್ರೆಯಲ್ಲಿ ನವೀನ ಉತ್ಸಾಹವನ್ನು ವ್ಯಕ್ತಪಡಿಸಿದ. ಆಂಜನೇಯ ಹುಟ್ಟಿದ ಕೂಡಲೇ ಸೂರ್ಯದೇವನನ್ನೇ ಆಟದ ಕೈಗೊಂಬೆಯಾಗಿ ಕೊಡು ಎಂದು ಕಾಡಿಸಿದ, ಎಂದೆ. ಸೂರ್ಯಮಂಡಲದ ವಿಷಯವಾದ ಆಕಾಶಪುರಾಣವೆಲ್ಲವನ್ನೂ ಗುಂಡಪ್ಪ ಅನಾಯಾಸವಾಗಿ ಓದಿ ತಿಳಿದುಕೊಂಡ. ಹೀಗೆ, ಆಂಜನೇಯನಿಗೆ ಸಂಬಂಧಿಸಿದ್ದು, ಎಂದು ನಾನು ಯಾವುದನ್ನು ಹೇಳಿದರೂ, ಮಧುವನವಾಗಿರಲಿ ಅಶೋಕವನವಾಗಿರಲಿ, ಅದು ಗುಂಡಪ್ಪನ ಕುತೂಹಲವನ್ನು ಕೆರಳಿಸಿತು. ಅನೇಕ ಪುಸ್ತಕಗಳನ್ನು ಅವನು ಈಚೆಗೆ ವ್ಯಾಸಂಗಮಾಡಿದಾನೆ. "ಸಮುದ್ರದಾಚೆಯಿಂದ" ಎಂಬುದನ್ನು ಓದಿದಾನೆ! "ಬೆಟ್ಟದ ಜೀವ"ಕ್ಕೂ ಹನುಮನು ಬೆಳೆದ ಬೆಟ್ಟಗುಡ್ಡಗಳಿಗೂ ಸಂಬಂಧ ಕಲ್ಪಿಸಿಕೊಂಡು ಅದನ್ನೂ ಮೊನ್ನೆ ಓದಿ ಮುಗಿಸಿದ. ಪಚ್ಚೆ ಉಂಗುರದಲ್ಲೂ ರಾಮಾಂಗುಲೀಯದ ಅಂಗುಲೀಯತ್ವವಿರುವುದರಿಂದ "ಓದಿ ನೋಡಿಬಿಡುತ್ತೇನೆ" ಅಂದ.

ಗುಂಡಪ್ಪನ ವಾತಾತ್ಮಜ ಭಕ್ತಿ ಅವನ ಮೆದುಳನ್ನು ಕೊಂಚ ಕದಡಿಸಿದೆ ಅಂತ ನನಗೆ ಮೊನ್ನೆ ಗಾಬರಿಯುಂಟಾಯಿತು. ಏನೇನೋ ಮಾತನಾಡುತ್ತಾ ನಾವು ಬೇಂದ್ರೆಯವರ 'ನಿರಾಭರಣ ಸುಂದರಿ'ಯ ವಿಮರ್ಶೆಗೆ ಬಂದು ತಲುಪಿದ್ದೆವು. ಹನುಮಂತ ಸೀತಾದೇವಿಯನ್ನು ಮೊದಲು ಕಂಡಾಗ

ಆಕೆ ನಿರಾಭರಣ ಸುಂದರಿಯಾಗಿದ್ದುದರಿಂದ ಗುಂಡಪ್ಪ ಆ ಪುಸ್ತಕವನ್ನು ಓದಲು ಒಪ್ಪಿದ್ದ!....ಮೂರು ನಾಲ್ಕು ಮೂರು ಉದ್ದ ಮಾತು ಬೆಳೆಯುತ್ತಲೂ ಗುಂಡಪ್ಪ ಅಲ್ಲೇ ಧಟಕ್ಕನೆ ನಿಂದು, “ನಾರಾಯಣರಾವ್! ನಿವಾತ ನಿಷ್ಕಂಪ ಇವಪ್ರದೀಪಂ, ಅಂತ ಕೇಳಿಲ್ಲವೆ? ದೀಪವೇ ಜೀವಾತ್ಮ, ವಾತವೇ ಪರಮಾತ್ಮ! ವಾತ ಬಡಿಯದೆ ಇದ್ದರೆ ತಾನೆ, ದೀಪ ಒಂದೇ ಸಮನೆ ಉರಿಯುವುದು? ಆದ್ದರಿಂದ, ವಾತಾರಾಧನೆಯೇ ಶ್ರೇಷ್ಠ” ಅಂದ.

ನಿನ್ನೆ ನಾನು ಊರಲ್ಲಿರಲಿಲ್ಲ... ಜಗತ್ತನ್ನೆಲ್ಲ ವಾತಕ್ಕೀಳಿಸುವ ಪ್ರಯತ್ನದಲ್ಲಿ ಗುಂಡಪ್ಪನ ಗತಿ ಏನಾಗುತ್ತೋ ಅನ್ನುವುದೇ ನನಗೆ ಈಗ ಭಯ.. .. ಅಭಿನವಮಾರುತಿ ಅಂತ ಯಾರೋ ಇದಾರಂತಲ್ಲಾ, ಗುಂಡಪ್ಪನ ಗುರುಗಳು, ಅವರಿಗೇ ಬರೆದು ನೋಡಬೇಕು. ನಿಧಿ ತೆಗಿಯೋಣ ಅಂತ ಅಗೆದಾಗ ಭೂತ ಹೊರಟಿತು ಎಂಬ ಹಾಗೆ, ಆಂಜನೇಯನ ಮೇಲಿನ ಪ್ರೇಮವನ್ನೇ ಉಪಯೋಗಿಸಿ, ಗಂಡಪ್ಪನಿಗೆ ಸಾಹಿತ್ಯ ಸೌಂದರ್ಯ ಇವುಗಳಲ್ಲಿ ಉತ್ಸಾಹ ಬರುವ ಹಾಗೆ ಮಾಡಿದಾಗ ಹುಚ್ಚೇ ತಲೆ ಎತ್ತಿದೆ ಆಗಲಿ! ಇದಕ್ಕೂ ಏನಾದರೂ ಒಂದು ಪರಿಹಾರ ಮಾಡುತ್ತೇನೆ ಏಕೆಂದರೆ, ಆಸಾಮಿ, ಯೋಗ್ಯ! ಚಿನ್ನದಂತಹ ಗುಣ!

**ಇತ್ತೀಚಿನ ಗೆಳೆಯನ ಪ್ರಸಾರ ಮುಗಿಯಿತು.**

---

ಕಿಂನಿಮಿತ್ತಂ ಯುನ್ನವರ್ತಯತಿ ಪಾಪಾತ್ ಎಂ
ದಾನ್ ಮಾಣಿಸದೊಡೆ — ಕವಿಜನ್ನ

ಚಾಕರಿಯ ಕಿರುಕುಳದಿ ಪೋಕರಿಗಳೆಲ್ಲರೂ
ಹೊರದೂಡಿ ಹೊಯ್ದುಟ್ಟಿ ಘಾತಿಸಿರಲಿ! — ರುದ್ರಮ್ಮ

ಸಕಲಶಾಸ್ತ್ರ ಶ್ರವಣ ವೇದ
ಪ್ರಕರದರ್ಥ ವಿಚಾರ ಪೌರಾ
ಣಿಕ ಕಥಾ ಪ್ರಾಗಲ್ಭ್ಯವಿನಿತರ ಸಾರಸಂಗತಿಯ
ಅಕಟ ನೀರಲಿ ನೆರಹಿ — ನಾರಣಪ್ಪ

# ೧೦ · ಪರಾಣ

ಅಲ್ಲಾ! ನನ್ನನ್ನೆಲ್ಲಿ ಪತ್ತೆ ಹಚ್ಚಿದಿರಿ, ನೀವು? ಪರವಾಗಿಲ್ಲ, ನೀವು ಪೋಲೀಸಿಗೆ ಸೇರಬಹುದಲ್ಲಾ! ನಾನೂ ಪೋಲೀಸಿನಲ್ಲಿದ್ದೆ ಮೂರುವರ್ಷ ವಾಯಿತು ಬಿಟ್ಟು ಸರಿಬೀಳಲಿಲ್ಲ ಪೋಲೀಸಿನವನು ಅಂದರೆ ಇಪ್ಪತ್ತು ಮೂವತ್ತು ವರ್ಷಗಳ ಹಿಂದಿನ ಕಾಲದ ಮರ್ಝುನೇ ಮರ್ಝು! ಆಗ ಊರಿ ಗೆಲ್ಲ ಅವನೇ ದೊಡ್ಡನಾಯಕನಾಗಿದ್ದ! ಅವನು ಹಾಕಿದ್ದೇ ಲಾಕಪ್ಪು! ಕೊಟ್ಟಿದ್ದೇ ಕಟ್ಟಳೆ! ಅವನು ಬೇಡಿ ಅಂದರೆ ಬೇಡಿ ಹಾಕುವುದೇ ಇಲ್ಲ ಹೀಗಿತ್ತು ಈಗೇನ, ನೂರೆಂಟು ತಾಪಗಳು ಪೋಲೀಸಿನವನು ಮರ್ಯಾದಸ್ಥ ನಾಗಿರಬೇಕಂತೆ! ನರನಾರಾಯಣರ ಭೀತಿ ಇರಬೇಕಂತೆ ಅವನಲ್ಲಿ! ಜನ ಸೇವೆಯೋ ಜನಾರ್ದನ ಸೇವೆಯೋ ಮಾಡುವುದರಲ್ಲಿ ಅವನಿಗೆ ಉತ್ಸಾಹವಿರ ಬೇಕಂತೆ! ಕೋಪಿಸಿಕೊಳ್ಳಬೇಡಿ ನೀವು ಅವನು ಕೋಪಿಸಿಕೊಳ್ಳಕೂಡದಂತೆ! ಬರಬರುತ್ತಾ ಕಾಲ ಯಾಕೋ ಕೆಟ್ಟೇಹೋಯಿತ—ಖಾಕಿ ಡ್ರೆಸ್ ಹಾಕಿ ಕೊಂಡಿದ್ದರೂ 'ಬಾಕಿ ಕೊಡು' ಅಂತ ನಾಲಗಾರರು ಬಂದು ಕೇಳುವ ಸ್ಥಿತಿಗೆ ಇಳಿದರೆ, ಅದನ್ನು ಧರಿಸಿದರೇನು ಬಿಟ್ಟರೇನು? ಅದಕ್ಕೇ ನೋಡಿ, ನಾನು ಬಂದು ಬಿಟ್ಟೆ.. ಅಂದರೆ, ನಾನು ಬರುವುದರೊಳಗೆ ಅವರೇ ನನ್ನನ್ನು ಹೋಗಿ ಬಾ ಅಂದರು ರೋಗಿ ಬಯಸಿದ್ದೂ ಅದನ್ನೇ, ಯೋಗಿ ಕೂಡಿಸಿದ್ದೂ ಅದನ್ನೇ! ಅಂದ ಹಾಗಾಯಿತು ಅರಸಿದಬಳ್ಳಿ ಕಾಲಿಗೆ ತೊಡಕಿದ ಹಾಗಾಯಿತು, ಅಷ್ಟೆ

ಕಿಡಿಬಂಡೆ ಗುಂಡಪ್ಪನ ಕುಲಗೋತ್ರ ವಿಚಾರಿಸುತ್ತಾ ನೀವು ಈ ಕರಟ ಗಿರಿಗೆ ಬಂದದ್ದೇ ಪರಮಾಶ್ಚರ್ಯ! ಎಲ್ಲಿಂದೆಲ್ಲಿಗೆ? ನಮ್ಮಣ್ಣ ಅವನ ತಂಗಿ ಯನ್ನು ಮದುವೆಯಾದದ್ದು ಒಂದು ದೊಡ್ಡ ಕಥೆ ಅದು ಅಲ್ಲಿಗೇ ಮುಗಿಯಿತು ಅಂತಿದ್ದೆ ಯಾಕೆಂದರೆ, ಅವನು ಈಗ ಆಕೆಯನ್ನು ತವರುಮನೆಗೆ ಕಳುಹಿಸು ತ್ತಲೇ ಇಲ್ಲ ಇದೆಯಲ್ಲ, ಅಂತಃಕಲಹಗಳು, ನಮ್ಮ ಅಂತಃಪುರಗಳಲ್ಲಿ! ಆತನೂ ಕೂಡ ಈ ಊರಲ್ಲಿಲ್ಲ ನಾನುಮಾತ್ರ ಇಲ್ಲಿ ಈ ಅಭಿನವಮಾರುತಿಯ ಬಾಲಹಿಡಿದು ಕಾಲ ತಳ್ಳುತ್ತಿದೇನೆ, ಅಷ್ಟೆ ನಮ್ಮಣ್ಣನಿಗೇನು ಅನುಕೂಲವೇ! ಮಧ್ಯದ ಹತ್ತಿರ ಯಾವುದೋ ಹಳ್ಳಿಯಲ್ಲಿ ಮನುಷ್ಯನಿಗೆ ಮಲೇರಿಯಾ

ಬರುವುದು ಹೇಗೆ, ಅವನ ರಕ್ತವನ್ನ ಅದು ಹೀರುವುದು ಹೇಗೆ ಅಂತ ಪರೀಕ್ಷೆ ಮಾಡುತ್ತಾ ಇದಾರಂತೆ, ಅಲ್ಲಿ ಕೆಲಸ ಅವನಿಗೆ.

ಅವನಿಗೆ ಆ ಹೆಣ್ಣನ್ನ ಗೊತ್ತುಮಾಡಿದ್ದೇ ಒಂದು ಸೋಜಿಗ!... ... ತಾಳಿ .ಎಲ್ಲಿಂದ ಪ್ರಾರಂಭಮಾಡಬೇಕು ಕಥೆಯನ್ನ ಅಂತ ನಿರ್ಧರಿಸಿಕೊಳ್ಳು ತ್ತೀನೆ ಹುಂ ಬೆಂಗಳೂರುಸಿಟಿ ಸ್ಟೇಷನ್ನಿನಲ್ಲಿ ಒದ್ದಾಡುತ್ತಿದ್ದ ನಮ್ಮಣ್ಣ .. ಗಾಡಿ ಹೊರಡುವ ಸಮಯ—, ಗಾಡಿಗಳು ಬರುವ ಸಮಯ—, ಅವಸರ . ಅವಾಂತರ.. ಅಡಾಉಡಿ.. ಟ್ರಂಕು ಹಾಸಿಗೆಗಳನ್ನ ಒಬ್ಬ ಪೋರ್ಟರ್ ತಲೆಮೇಲೆ ಹೇರಿ ಅವನೋಡಿದ ಗೆರೆಯ ಮೇಲೆಯೇ ಓಡಿವ, ಅವನು ನುಸು ಳಿದ ಕಡೆ ನುಸುಳಿದ ಅವನು, ನುಗ್ಗಿದ ಡಬ್ಬಿಯೊಳಕ್ಕೆ ತಾನೂ ನುಗ್ಗಿ ಅವನು ಸಾಮಾನುಗಳನ್ನಿಟ್ಟ ಸೀರದ ಮೇಲೆ ತಾನೂ ಕೂತ, ಗಾಡಿ ಹೊರಟಿತು ಕೂಲಿ ಕೊಡುವಾಗ ಕೂಲಿಯವನ ಮುಖ ನೋಡಿದ ಆತ ಇನ್ನೊಬ್ಬ! ಟ್ರಂಕು ಹಾಸಿಗೆ ಇನ್ನೊಬ್ಬರದು! "ಇರಲಿ ಚಿಂತೆ ಇಲ್ಲ, ಟ್ರಂಕು ಹಾಸಿಗೆ ಹೊಸದಾಗಿವೆ, ತಕೊ, ಎರಡಾಣೆ ಹೆಚ್ಚುಕೊಡುತ್ತೇನೆ" ಅಂತ ಉದಾರತನ ತೋರಿಸಿದ.

ಆಗ ಗೊತ್ತಾಯಿತು ಅವನಿಗೆ, ತಾನು ಹತ್ತಿದ್ದು ಮದ್ರಾಸ್‌ಗಾಡಿ, ಪುಣೆಗಾಡಿ ಅಲ್ಲ ಅಂತ! ನಮ್ಮಣ್ಣನ ಟ್ರಂಕು ಹಾಸಿಗೆಯನ್ನನುಸರಿಸಿ ಮದ್ರಾಸ್ ಗಾಡಿಯವರು ಯಾರೋ ಪುಣೆಗಾಡಿಯಲ್ಲಿ ಕೂತಿರಬೇಕು! ಅಷ್ಟು ಹೊತ್ತಿಗೆ ಕಂಟೋನ್‌ಮೆಂಟ್ ದಾಟಿತ್ತು ರೈಲು ಟಿಕೀಟು ಪರೀಕ್ಷಕ ಬಂದಾಗ ನಮ್ಮಣ್ಣನ ಮುಖದಲ್ಲೂ ಬಿಳುಪೇರಿತು ಪಕ್ಕದ ಸ್ಟೇಷನಲ್ಲೇ ಪರರ ಸಾಮಾನುಸಹಿತ ಅವನು ನಮ್ಮಣ್ಣನನ್ನ ಇಳಿಸಿದ ಸಂಜೆ ಬರುವ ಮದ್ರಾಸ್ ಕಡೆ ಗಾಡಿಯಲ್ಲೇ "ಪುನರಾಯರ್ಾ ಮಹಾಕಪಿಃ" ಅಂತ ಹೋಗು, ಅಂದ ನಮ್ಮಣ್ಣ ಪೆಚ್ಚುಮೋರೆ ಹಾಕಿಕೊಂಡು ಅಲ್ಲೇ ಕುಳಿತಿದ್ದ ಸರಿ! ಸ್ಟೇಷನ್ ಮಾಸ್ಟರ್ ಸಂಗಡ ಕುಶಲಪ್ರಶ್ನೆ ಯಾವೂರು, ಯಾವ ಜನ, ಎಲ್ಲಿಗೆ, ಎಲ್ಲಿಂದ ಇತ್ಯಾದಿಗಳೆಲ್ಲ ನಿಧಾನವಾಗಿ ನಡೆಯಿತು

ಆತ ಕಿಡಿಬುಂಡೆ ಡಾಕ್ಟರ್‌ರವರ ತಮ್ಮನಂತೆ! ಅವರಿಗೆ ಆ ಡಾಕ್ಟರು ಅವತ್ತೇ ಪತ್ರ ಬರೆದಿದ್ದರಂತೆ "ಈ ಊರಿಗೆ ನಾನು ಬಂದದ್ದರಿಂದ ಒಬ್ಬರು ಆಯುರ್ವೇದ ಪಂಡಿತರಿಗೆ ತುಂಬಾ ಬಡತನ ತಗುಲಿದೆ! ಅನೇಕರು ನನ್ನ

ಹತ್ತಿರ ಬಂದು ದೂರುಹೇಳಿದರು ವಿಶ್ವೇಶ್ವರನ ಗುಡಿಮುಂದೆ ಒಂದು ಬಹಿರಂಗ ಸಭೆ ನಡೆಯಿತು ಖಾಯಿಲೆ ಯಾವುದೂ ಇಲ್ಲದಿದ್ದರೂ ಔಷಧಿ ಸೇವಿಸುವ ಚಪಲದಿಂದ ಆಸ್ಪತ್ರೆಗೆ ಬರುವ ಒಬ್ಬಿಬ್ಬರು ಹಣವಂತರನ್ನ ನಾನು, 'ನಿಮಗೆ ಪಂಡಿತರೇ ಸರಿ' ಅಂತ ಅವರ ಹತ್ತಿರಕ್ಕೆ ಕಳುಹಿಸಿದೆ ಅವರಿಗಿರುವುದು ಒಬ್ಬಳೇ ಒಬ್ಬಳು ಕನ್ಯಾ ಆ ರತ್ನವನ್ನು ಯಾರ ಕೊರಳಿಗಾದರೂ ತೂಗು ಹಾಕಿದರೆ, ಅವರ ಆತ್ಮ ತಣ್ಣಗಾದೀತು ಮೊನ್ನೆ ಆಸ್ಪತ್ರೆ ಹತ್ತಿರ ಬಂದಿದ್ದರು ನಾನು ಒಳಕ್ಕೆ ಕರೆಯಲಿಲ್ಲ, ಅವರು ಇದ್ದಲ್ಲಿಗೇ ಹೋಗಿ ವಿಚಾರಿಸಿದೆ "ಕನ್ಯಾದಾನ ಮಾಡಬೇಕು, ವರ ಹುಡುಕುವ ಕೆಲಸ ನೀವೂ ಕೊಂಚ ವಹಿಸಿಕೊಳ್ಳಬೇಕು" ಅಂದರು ಆಗಲಿ, ಎಂದೆ ಎರಡು ಖರ್ಚೂ ಕನ್ಯಾಪಿತೃ ಹೊರುತ್ತಾರೆ, ವರೋಪಚಾರದ ಮಾತು ಎತ್ತಬಹುದು, ಆದರೆ ವರದಕ್ಷಿಣೆ ಸಾಧ್ಯವಿಲ್ಲ ಆಕಸ್ಮಾತ್ ಯಾರಾದರೂ ಕಣ್ಣಿಗೆ ಬಿದ್ದರೆ ಹಿಡಿದುಕೊಡು" ಇತ್ಯಾದಿ ಬರೆದಿದ್ದರಂತೆ

"ನೀವೀಗ ಅಕಸ್ಮಾತ್ ಸಿಕ್ಕಿದೀರಿ!" ಅಂದರು, ಅವರು ನಮ್ಮಣ್ಣನಿಗೆ ಆ ಕಿಡಿಬಂಡೆ ಡಾಕ್ಟರ ಕನಿಕರ, ಅವರ ಧರ್ಮಪ್ರೇಮ ಇವುಗಳನ್ನು ನೆನೆದಾಗ ಕಣ್ಣಲ್ಲಿ ನೀರು ತುಂಬಿತಂತೆ ಅದೂ ಅಲ್ಲದೆ ರೋಗಿ ಬಯಸಿದ್ದೂ ಅದನ್ನೇ! ನಮ್ಮಣ್ಣನಿಗೆ ಆಗರ್ಭ ಮಲೇರಿಯಾ! ಥಳಿಥಳಿ ಅಂತ ನಡುಗುತ್ತ ಜನಿಸಿದ್ದ ವೈದ್ಯನ ಮಗಳನ್ನೇ ಮದುವೆಯಾಗಬೇಕು ಅಂತ ಅವನು ಇಂಡಿಯಾದ ಎಲ್ಲ ಸಂಸ್ಥಾನಗಳ ಸೀನಿಯರ್ ಸರ್ಜನ್ನರ ಪಟ್ಟಿಯೊಂದನ್ನು ತಯಾರಿಸಿದ್ದ ಅವರಲ್ಲಿ ನಮ್ಮ ಜಾತಿಯವರು ಎಷ್ಟು ಅಂತ ಆಯಾ ಊರಿನ ಸರ್ವಿಸಸ್ ಕಮಿಷನರುಗಳಿಗೆ ಕಾಗದ ಬರೆದಿದ್ದ ಮೆಡಿಕಲ್ ಕಾಲೇಜುಗಳ ಹಳೇ ವಿದ್ಯಾರ್ಥಿಗಳ ಸಂಘಗಳ ಸದಸ್ಯರನ್ನೆಲ್ಲ ವಿಚಾರಿಸಿದ್ದ ಕಡೆಗೆ ಆಯುರ್ವೇದ ಸಮ್ಮೇಳನದ ಸದಸ್ಯರ ಪಟ್ಟಿ ತರಿಸಿದ್ದ ಆದ್ದರಿಂದ "ಅಡ್ಡಬೀಳುವುದಕ್ಕೆ ಹೋದ ದೇವರು ಅಡ್ಡವಾಗಿಯೇ ಬಂದರಲ್ಲಾ!" ಅಂತ ನಮ್ಮಣ್ಣ ಹಿಗ್ಗಿದ ಅಲ್ಲದೆ, ವೈದ್ಯರಮನೆ ಹುಡುಗಿಯರಾದರೆ ಸಾರಿನ ಪುಡಿ ಮುಂತಾದ ಚೂರ್ಣಗಳನ್ನೂ, ಹುಣಿಸೆ ಗೊಜ್ಜು ಮುಂತಾದ ಲೇಹಗಳನ್ನೂ ಕಾಫಿ ಟೀ ಮುಂತಾದ ಕಷಾಯಗಳನ್ನೂ ಚೆನ್ನಾಗಿ ಮಾಡುತ್ತಾರೆಂಬುದು ಅವನ ಮತ, ಮದುವೆಯಾದ ಮೇಲೂ ಕೂಡ!

ಆಷ್ಟರಲ್ಲಿ ಸ್ಟೇಷರ್ಮಾಸ್ಟರಿಗೆ ನಮ್ಮಣ್ಣ ಟ್ರಂಕು ಹಾಸಿಗೆ ಕಥೆ ಹೇಳಿದ್ದ "ತೆಗಿಯಿರಿ, ನೋಡೋಣ! ಲಾಭವೋ ನಷ್ಟವೋ, ಅಂತ". ಅಂದರು ಅವರು ಪಾಯಿಂಟ್ಸ್‌ಮನ್ ಹತ್ತಿರವಿದ್ದ ಕೀಲಿಕೈ ಗೊಂಚಲ ಸಹಾಯ ದಿಂದ ಟ್ರಂಕನ್ನು ತೆಗೆದರೆ,–ಒಳಗಿನ ಬಟ್ಟೆ ಬರೆ ಪುಸ್ತಕ ಡಯರಿ, ಎಲ್ಲವೂ ಕಿಡಿಬಂಡೆ ಡಾಕ್ಟರದೇ! ಅವರು ಅಲ್ಲಿಗೇ ಬರುವವರಾಗಿದ್ದರೊ?" "ನೋಡಿ ದಿರಾ! ಇದೇ ಶುಭಲಕ್ಷಣ," ಅಂದರು ಸ್ಟೇಷರ್ಮಾಸ್ಟರು! ಎಲ್ಲಾ ಬಿಟ್ಟ ನಮ್ಮಣ್ಣನ ಕೈಗೆ ಅವರ ಅಣ್ಣನ ಟ್ರಂಕು ಹಾಸಿಗೆಗಳೇ ಸಿಗಬೇಕೆ? "ಭಗವಂತನ ಲೀಲೆ, ಅಂದರೆ, ಇದು! ಕಲಿಯುಗದಲ್ಲೂ ಭಗವಂತ ನಮ್ಮ ನಡುವೆ ನಿಂತಿದಾನೆ ಎಂಬುದಕ್ಕೆ ಇದೇ ಸಾಕ್ಷಿ" ಎಂದು ಮುಂತಾಗಿ ಮಾತು ಬೆಳೆಸಿ, ಮದ್ರಾಸಿನಿಂದ ಬಂದ ಗಾಡಿಯಲ್ಲೇ ಇಬ್ಬರೂ ನಮ್ಮ ಮನೆಗೆ ಬಂದು, ಜಾತಕ ತಗೆಸಿ, ನಮ್ಮಣ್ಣನ ಬಾಯಲ್ಲಿ ಹೂಂ ಅನ್ನಿಸಿಯೇಬಿಟ್ಟರು! "ಹುಡುಗಿಯನ್ನ ನೋಡಬೇಡನೇನೋ?" ಅಂತ ನನ್ನ ತಾಯಿ ಕೇಳಿದರೆ, "ಹೆಣ್ಣು ನೋಡಿ ಒಪ್ಪಿ ಮದುವೆ ಮಾಡಿಕೊಂಡವರ ಲಕ್ಷಣವನ್ನ ನಾನು ಏನು ಹೇಳಲಿ! ಹುಚ್ಚು ಕುರುದನೂ ಒಪ್ಪಲಾರದ ಹೆಂಗಸಲ್ಲ ಈ ನೋಡಾ ಟದ ಪರೀಕ್ಷೆಯಲ್ಲಿ ಫಸ್ಟ್‌ಕ್ಲಾಸ್ ಹೊಡೆದಿದಾರೆ, ಗೊತ್ತೆ, ಅಮ್ಮ! ವೈದ್ಯರ ಮಗಳಾದರೆ ಸರಿ, ಸದ್ಯಃ! ಅಯ್ಯೋ, ಜ್ವರವಲ್ಲೇ! ಅಂದರೆ, ಗಂಜಿ ಕಾಯಿಸಿ ಕೊಡುವುದಕ್ಕೆ ಒಂದಿದ್ದರೆ ನಾಕು" ಅಂದ

ಕಿಡಿಬಂಡೆಯಲ್ಲೇ ಮದುವೆ ನಡೆಯಿತು ವರಪೂಜೆ ದಿನ ಆ ಡಾಕ್ಟರ್ ಬಂದು, "ಪಂಡಿತರೇ! ನನ್ನ ಜವಾಬ್ದಾರಿ ತೀರಿತು, ನಾನು ಕೈ ತೊಳೆದು ಕೊಳ್ಳುತ್ತೇನೆ" ಅಂತ ಹೇಳಿ ಯಾವುದೋ ಖೂನಿಯಾದ ದೇಹದ ಅಪರ ಶಸ್ತ್ರಕ್ರಿಯೆಗೆ ಕೈ ಹಚ್ಚಿದರು ಧಾರೆ ಎರೆದಾಗ ನಮ್ಮಣ್ಣನಿಗೆ ನಡುಕ ಹತ್ತಿತು ಜೀರಿಗೆ ಹಾಕುವುದಕ್ಕೆ ಬದಲಾಗಿ ಅತ್ತಿಗೆ ಜೀರಿಗೆ ಕಷಾಯ ವನ್ನೇ ಕುಡಿಸಿದಳು ಬೇಗರಿಗೆ ಪಿತ್ತ ಜಾಸ್ತಿ ಆಗಿಹೋಗುತ್ತದೆ ಅಂತ ಹೇಳಿ ಪಂಡಿತರು ನಮಗೆ ಸಕ್ಕರೆ ಕುಂಬಳಕಾಯಿ ಗೋರಿಕಾಯಿ ಬದನೆಕಾಯಿ ಹುಳಿಮಜ್ಜಿಗೆ ಹಾಲುಖೀರು ಯಾವುದನ್ನೂ ಮಾಡಿಸಲೇ ಇಲ್ಲ ಸಪ್ತಪದಿ ಸುತ್ತಿಸಿದಾಗ ನಮ್ಮಣ್ಣನಿಗೆ ತಲೆತಿರುಗಿದ್ದು ಪಿತ್ತದಿಂದಲ್ಲ, ಸುಸ್ತಿನಿಂದ, ಅಂತ ಅವರಿಗೆ ತಿಳಿಯದು (ನಮ್ಮಣ್ಣನ ಹೊಟ್ಟೆಯೊಳಗೆ ಗೆಡ್ಡೆ ಇದೆ.

ಯಾರಿಗೂ ಹೇಳಬೇಡಿ, ನಿಮಗೆ ಮಾತ್ರ ತಿಳಿದಿರಲಿ ಗುಂಡಪ್ಪನ ತಂಗಿ ತಾಳಿ ಗಟ್ಟಿಯಾಗಿರುವ ತನಕ ಅದೂ ಕೂಡ ಅವನ ಹೊಟ್ಟೆಯೊಳಗೆ ಗಟ್ಟಿಯಾಗಿ ಕೂತಿರುತ್ತದೆ, ಅನ್ನಿ !) ಅರುಂಧತಿ ದರ್ಶನ ಮಾಡಿಸುವಾಗ ನಮ್ಮಣ್ಣ ಮೂರ್ಛೆ ಹೋದದ್ದು ಅವನ ಹಸಿವಿನಿಂದ ಅಂತ ನಾವು ಸಾರಿದೆವು ನಿಜವಾಗಿಯೂ ಅವನಿಗೆ ಆಗ ಜ್ವರದ ಹೊಡೆತ ಒಂದು ದಿನ ಛಳಿ ತಡೆಯಲಾರದೇ ನಮ್ಮಣ್ಣ ಎದುರುಮನೆ ರಾಗಿಹುಲ್ಲಿನ ಮೆದೆಯೊಳಗೆ ಕೂತುಬಿಟ್ಟ ಅವನನ್ನ ಪತ್ತೆಹಚ್ಚಿ, ಹನೆಗೆ ಕರೆತರುವುದಕ್ಕೆ ಭಗೀರಥ ಬರಬೇಕಾಯಿತು !

ಎಲ್ಲಕ್ಕಿಂತ ಸ್ವಾರಸ್ಯವಾದ ಸಮಾಚಾರ, ಅಂದರೆ, ಎರಡನೆಯ ದಿನದ ರಾತ್ರಿಯ ಸಂಭವ ಬೀಗರಿಗಾಗಿ ಬಿಡಿಸಿದ್ದ ಮನೆಯಲ್ಲಿ ನಾವೆಲ್ಲ ಮಲಗಿದ್ದೆವು ಪಂಡಿತರ ಮನೆ ಊಟ, ಯಾರಿಗೂ ಅಜೀರ್ಣವಿರಲಿಲ್ಲ ಆದ್ದರಿಂದ ಸರ್ವರೂ ಕನಸಿಲ್ಲದ ಗಾಢನಿದ್ರೆಯಲ್ಲೇ ಲೀನರಾಗಿದ್ದರು ಬೆಳಗ್ಗೆ ಎದ್ದು ನೋಡಿದರೆ, ನನ್ನ ತಂಗಿ ಕತ್ತಿನಲ್ಲಿದ್ದ ಚಿನ್ನದ ಸರವನ್ನ ಯಾರೋ ದುರಾತ್ಮರು ಕತ್ತರಿಸಿ ತೆಗೆದಿದ್ದರು— 'ಪಂಡಿತರ ಮನೆಯವರಿಗೆ ಸುವರ್ಣವನ್ನ ಕರಗಿಸಿ ಕಾಯಿಸಿ ಭಸ್ಮಮಾಡುವ ವಿಧಾನ ಗೊತ್ತು, ಅವರ ಮನೆಯನ್ನ ಶೋಧಿಸಿವರೆ ಆ ಸರದ ಭಸ್ಮವಾದರೂ ಸಿಕ್ಕುತ್ತದೆ,' ಅಂತ ಪಂಡಿತರ ಪಕ್ಕದ ಮನೆಯವರೇ ನಮಗೆ ಸಲಹೆ ಕೊಟ್ಟರು! ಮೂರು ಹೊತ್ತೂ ಶುಭಾಶುಭಗಳಿಗಾಗಿ ನೆರೆಮನೆಯವರೊಂದಿಗೆ ಹೆಣಗಾಡುತ್ತಿದ್ದ ಅವರೇ ಹೀಗೆ ಹೇಳಿದ ಮೇಲೆ ಪರಸ್ಥಳದವರಾದ ನಾವು ಏನು ಮಾಡುವುದ ? ನಾನಿನ್ನೂ ಪೋಲೀಸ್ ಸೇರಿರಲಿಲ್ಲ ಆದ್ದರಿಂದ ಕಿಡಿಬುಡಿ ಪೋಲೀಸರನ್ನೇ ಕರೆಯಿಸಿ, ಬೀಗರ ಬೀರು ತೆರೆಸಿದರೆ, ಬಾಟ್ಲಿ ಮೇಲ 'ಸುವರ್ಣ ಭಸ್ಮ' ಅಂತ ಬರೆದೇ ಇತ್ತು ! ಪಂಡಿತರು ಕುಯ್ಯೋ ಮುರ್ರೋ ಅಂತ ಇನ್ಸ್ಪೆಕ್ಟರ ಕಾಲು ಹಿಡಿದುಕೊಂಡರು "ಅದರಲ್ಲಿ ಸುವರ್ಣದ ಅಂಶವೇ ಇಲ್ಲ, ಸುವರ್ಣ ಭಸ್ಮ ಅಂತ ಹೇಳಿ ಕೊಡುತ್ತೇನೆ, ಅಷ್ಟೆ, ಶುದ್ಧ ಮೋಸ ಅದು" ಅಂತ ಜನಿವಾರದ ಬ್ರಹ್ಮಗಂಟು ಹಿಡಿದು ಪ್ರಮಾಣ ಮಾಡಿದರು

ನಮಗೆ ಒಳ್ಳೇ ಪೇಚಾಟ! ಭಂಗಾರದ ಬೂದಿಯನ್ನ ನಾವು ಯಾರೂ ಎಂದೂ ಕಂಡಿರಲಿಲ್ಲ ಆಯುರ್ವೇದವಲ್ಲಿ ಏನೇನಿದೆಯೋ ನಮಗೇನು ಗೊತ್ತು?

ನಮ್ಮೂರಿಗಿಂತ ಕೊಂಚ ದೊಡ್ಡದು ಕಿಡಿಬಂಡೆ ಅಲ್ಲೂ ಯಾರಿಗೂ ಈ ವಿಷಯ ತಿಳಿಯದು ಭಾರತ ವರ್ಷದ ಸುವರ್ಣ ಯುಗದಲ್ಲಿ ರಾಜಾಧಿ ರಾಜರುಗಳು ಭಂಗಾರದ ಪುಡಿಯನ್ನು ಅನ್ನದಲ್ಲಿ ಕಲಸಿ, ಹಾಗೆಯೇ ನುಂಗುತ್ತಿದ್ದರೆಂದೂ ಅವರಿಂದ ಅವರ ದೇಹಕಾಂತಿ ಹೆಚ್ಚುತ್ತಿತ್ತೆಂದೂ ನಾನು ಓದಿದ್ದೆ ಅಕ್ಕಸಾಲಿಗರಾರೂ ಚಿನ್ನವನ್ನು ಬೂದಿ ಮಾಡಿ ನೋಡಿಲ್ಲವಂತೆ ಚಿನ್ನವನ್ನು ಹೀಗೆ ಬಣ್ಣಗೆಡಿಸಿ ಭಸ್ಮ ಮಾಡಿದರೆ ಔಷಧವಾಗುತ್ತದೆ ಅಂತ ಆ ಇನ್ಸ್ಪೆಕ್ಟರಿಗೆ ಕೂಡ ತಿಳಿಯದಂತೆ ಆ ಪಕ್ಕದಮನೆ ಸಂಗೀತ ವಿದ್ವಾಂಸರು ಹೇಳದಿದ್ದರೆ ನಮಗೆ ಮಾಲು ಪತ್ತೆ ಆಗುತ್ತಲೇ ಇರಲಿಲ್ಲ "ಹೇಗಿದ್ದರೂ ಮಾಲು ಹಾಳಾಯಿತು, ಇನ್ನು ಅವರನ್ನು ಹಿಡಿಸಿ ಏನು ಫಲ?" ಎಂದು ನಾಲ್ಕಾರು ಜನ ಅಂಗಲಾಚಿದ್ದರಿಂದ ನಾವೂ ಸುಮ್ಮನಾದೆವು ಆ ದಿನ ಮಧ್ಯಾಹ್ನವೇ, ಅವರ ಮನೆಯಲ್ಲಿ ಊಟಮಾಡದೆ, ಬಸ್ ಹತ್ತಿ ನಮ್ಮೂರಿಗೆ ಹೊರಟವು ಅವರ ಹುಡುಗಿಯನ್ನು ಭಂಗಾರ ಸಹಿತವಾಗಿ ತವರುಮನೆಗೆ ಕಳುಹಿಸುವುದಿಲ್ಲವೆಂದು, ಅಂದೇ ಬಸ್ ಸ್ಟ್ಯಾಂಡಿನಲ್ಲೇ ನಮ್ಮಣ್ಣ ಶಪಥ ಮಾಡಿದ ಕೇಳಿದವರೆಲ್ಲ ಬೆರಗಾಗಿ ಮೂಗಿನ ಮೇಲೆ ಬೆರಳಿಟ್ಟರು

ಆ ಮೇಲೆ ನಡೆದ ಸಮಾಚಾರಗಳು ನನಗಷ್ಟು ಸ್ಪಷ್ಟವಾಗಿ ತಿಳಿಯದು. ಆಗರ್ಭ ಸ್ಪ್ರೀಮಂತನಾದ ನಮ್ಮಣ್ಣನಿಗೆ ಮಲೇರಿಯಾ ಸಂಶೋಧನಾಲಯದಲ್ಲಿ ಕೆಲಸ ಸಿಕ್ಕಿ ಅವನು ಅತ್ತಲಾಗೆ ಹೊರಟು ಹೋದ, ಅಂತ ಆಗಲೇ ಹೇಳಿದೆನಲ್ಲಾ ನಾನು ಇತ್ತಲಾಗೆ ಪೋಲೀಸಿಗೆ ಸೇರಿದೆ ಇ ಪಿ ಎಸ್ ಅಂತ ನನಗೆ ಸರ್ಕಾರದವರೇ ಸರ್ಟಿಫಿಕೇಟ್ ಕೊಟ್ಟ ಮೇಲೆ ಪೋಲೀಸ್ ಸರ್ವಿಸ್ಸಿಗೆ 'ಎಲಿಜಿಬಲ್' ಅಲ್ಲದೆ ಮತ್ತೇನು? ನನ್ನ ಕಾರ್ಯದಕ್ಷತೆಯ ಧುರಂಧರತೆಯನ್ನು ನೋಡಿ, ಮೇಲಧಿಕಾರಿಗಳು ಕಕ್ಕಾ ಬಿಕ್ಕಿ ಆದರು ಏಕೆಂದರೆ, ನನ್ನ ಅಧಿಕಾರ ವಲಯದಲ್ಲಿ ಯಾವ ಕನ್ನ, ಕಳುವು, ದರೋಡೆ, ಖೂನಿ, ಖೋಟಾನಾಣ್ಯ ತಯಾರಿಕೆ, ಇತ್ಯಾದಿ ನಡೆದರೂ ಅಪರಾಧಿ ಪತ್ತೆಯಾಗಿಲ್ಲ ಅಂತ ಮಾತ್ರ ನಾನು ರಿಪೋರ್ಟು ಕೊಟ್ಟದ್ದಿಲ್ಲ ಯಾವನಾದರೊಬ್ಬನನ್ನು ಎಳೆದು ತಂದು ಕೋರ್ಟಿನ ಪೆಟ್ಟಿಗೆಯೊಳಗೆ ಕೂಡಿ ಹಾಕಿ ಬಿಡುವೆ! "ಇಂದಲ್ಲದಿದ್ದರೆ ನಾಳೆ ಇವನೂ ಕೃತ್ಯವನ್ನು ಮಾಡುವವನೇ, ಸ್ವಾಮಿ!" ಅಂತ ಮ್ಯಾಜಿಸ್ಟ್ರೇಟರಿಗೆ ಹೇಳುವೆ ಅಂತು ಕೆಲಸದ ಕಾವಿನಲ್ಲಿ

ಕೈ ಸುಟ್ಟುಕೊಂಡು ಬಿಟ್ಟೆ. ಪೋಲೀಸ್ ಅಧ್ಯಾಯ ಮುಗಿಯಿತು. . ಹಾಳೆ ಮಗುಚಿದೆ. .

ಪೋಲೀಸಿನಲ್ಲಿದ್ದಾಗ ನನಗೆ ಅನೇಕ ರೀತಿಯ ಅನೇಕ ಚರಿತ್ರದ ಜನರು ಪರಿಚಯವಾದರು! ನನ್ನ ಮಾತು ಕೊಂಚ ಕೇಳಿ ನೀವು! ವೇದಿಕೆಯ ಮೇಲೆ ನಿಂತು ಕರ್ನಾಟಕದ ಮುಂದಾಳುಗಳು ಉಪನ್ಯಾಸ ಮಾಡುವಾಗ, 'ಆಧುನಿಕ ಯುಗ' 'ಹೊಸದೃಷ್ಟಿ' 'ಯಂತ್ರಯುಗ' 'ವ್ಯಾಸಂಗಗೋಷ್ಠಿ' 'ವಿಚಾರ ವಿನಿಮಯ' 'ವೈಜ್ಞಾನಿಕ ಸಂಸ್ಕೃತಿ' 'ನವಜೀವನ' 'ಹೊಸ ಚೇತನ', ಅಂತ ನೂರಾರು ಸಲ ಕೂಗಬಹುದು, ಆದರೆ, ಅವರ ಮಾತು ನಿಜವೋ ಸುಳ್ಳೋ ಅಂತ ನೀವು ನಮ್ಮನ್ನ ಕೇಳಬೇಕು, ಪೋಲೀಸ್ ಇಲಾಖೆಯಲ್ಲಿದ್ದವರನ್ನ! ಅಂತಹ ಹೊಸ ದೃಷ್ಟಿ ಸಾವಿರದಲ್ಲೊಬ್ಬನಿಗೂ ಬಂದಿಲ್ಲ! ಅಥವಾ, ಅವನಿಗೆ ಅದರ ಪರಿಚಯ ದೊರೆತಿದ್ದರೂ, ಅದರ ಮೇಲೆ ಮೋಹ ಜನಿಸಿದ್ದರೂ, ತನ್ನ ಮನೆಯಲ್ಲಿ ತನ್ನ ಮಗುವಿಗೆ, ತನಗೆ, ತನ್ನ ಹೆಂಡತಿಗೆ, ಒಂದು ಖಾಯಿಲೆ, ಒಂದು ಕಷ್ಟ, ಬಂದಾಗ, ಅದು ಮಾಯವಾಗುತ್ತದೆ ಈ ತಾಲ್ಲೋಕಿನಲ್ಲಿ ನಾನು ಕೆಲಸದಲ್ಲಿದ್ದ, ನಾಲ್ಕೈದು ವರ್ಷಗಳಲ್ಲಿ, ಹತ್ತು ರೂಪಾಯಿ ಕರೆನ್ಸಿ ನೋಟನ್ನ ನೂರು ರೂಪಾಯಿ ಕಾಗದವಾಗಿ ಬದಲಾಯಿಸುವ ಪವಾಡಗಾರರು, ಸೊಪ್ಪಿನ ರಸ ಹಿಂಡಿ ಹಿತ್ತಾಳೆಯನ್ನು ಚಿನ್ನ ಮಾಡುವ ರಸಾಯನ ಶಾಸ್ತ್ರಜ್ಞರು, ಒಡವೆಗೆ ಪೂಜೆ ಮಾಡಿ ಅವುಗಳನ್ನು ಅಧಿಕರಿಸುವ ಮಾಟಗಾರರು, ನಿಧಿಯನ್ನು ಅಗೆದುಕೊಡುವ ಭೂಶಾಸ್ತ್ರಿಗಳು, ತಮ್ಮ ವಶದಲ್ಲಿರುವ ಭೂತ ಪ್ರೇತಗಳನ್ನು ನಿಮ್ಮ ಶತ್ರುಗಳ ಮೇಲೆ ಅಟ್ಟಿ ಅವರನ್ನು ಧ್ವಂಸಮಾಡಲು ಸಹಾಯ ಮಾಡುವ ಆಧುನಿಕ ಅಲಾವುದೀನರು,— ನೂರಾರು ಜನರು ಇದಾರೆ ಎಂದು ನನಗೆ ತಿಳಿಯಿತು ಇಂತಹವರಿಗೆಲ್ಲ ಈ ವಿಚಾರ ಯುಗದಲ್ಲಿ, ವೈಜ್ಞಾನಿಕರ ಪ್ರಭಾವ ಬೆಳೆದಿರುವ ಈ ನವಚೇತನದ ಚೈತ್ರ ಮಾಸದಲ್ಲಿ ಕಿವಿಗೊಟ್ಟು, ಹಣತೆತ್ತು, ಮೋಸಹೋಗುವವರು ಯಾರು ಅಂತೀರಿ? ವಿದ್ಯಾವಂತರು! ಅದೇ ಉಪನ್ಯಾಸಗಳನ್ನು ಕೇಳಿ ಕಿವಿದೂಗಿದವರು! ಅದೇ ಉಪನ್ಯಾಸಗಳನ್ನು ಕೊಟ್ಟವರೂ ಹಲವರು! ಎಂ ಎಸ್ ಸಿ ಡಿಗ್ರಿ ಜೊತೆಯಲ್ಲೇ ದೊರೆತ ಚಿನ್ನದ ಪದಕವನ್ನೇ ಒಬ್ಬರು ಅಧ್ಯಾಪಕರು, ಯಾವ ಊರಿಂದಲೋ ನೆನಪಿಲ್ಲ, ಇಂತಹ ಮೋಸಗಾರ

ರೊಬ್ಬರಿಗೆ ಕಳುಹಿಸಿದ್ದರು, ಚಿನ್ನದ ಆಸೆಯಿಂದ ಒಂದು ಮೊಡಲನ್ನ ಎರಡು ಮಾಡು, ಅಂತ!

ಪೋಲೀಸಿನಿಂದ ಈಚೆಗೆ ಬಂದ ಮೇಲೂ ಕೂಡ ನಾನು ಇಂಥವರ ಪರಿಚಯವನ್ನೇ ದಿನದಿನಕ್ಕೂ ಬೆಳೆಸುತ್ತಾ ಬಂದೆ ಆದ್ದರಿಂದಲೇ ನನಗೆ 'ಲವಣಾಯ ಲಶುನಾಯ' ಸಂಪಾದನೆ ಕೂಡ ದೊರೆತದ್ದು ಮೊದಲು ಒಂದಿಷ್ಟು ದಿವಸ ಕವಚ ಮಾರುವವನೊಬ್ಬನ ಹತ್ತಿರವಿದ್ದೆ ಸುಳ್ಳು ವಿಳಾಸಗಳ ಸಹಿತ, ಸರ್ಟಿಫಿಕೇಟ್ ಸಮೇತ, ಅವನಿಗೆ ಜಾಹಿರಾತು ಬರೆಯುವುದೇ ನನ್ನ ಭಾರದ ಚಾಕರಿಯಾಗಿತ್ತು! ಆದರೆ, ತಿಂಗಳ ಕೊನೆಯಲ್ಲಿ ಅವನು ನನಗೆ ಸಂಬಳಕ್ಕೆ ಬದಲಾಗಿ ಒಂದು ಕವಚವನ್ನೇ ಕೊಟ್ಟಾಗ, ನಾನು 'ನಮಸ್ತೆ' ಅಂದೆ ಆ ಮೇಲೆ ನಾನು "ಕ್ಷೀರ ಶಾರ್ದೂಲೇಶ್ವರ ಕಂಪನಿ, ಲಿ" ಇವರಲ್ಲಿ ಕೆಲಸಕ್ಕೆ ಸೇರಿಕೊಂಡೆ ಆ ಕಂಪನಿಯನ್ನ ಸ್ಥಾಪಿಸುವಂತೆ ಸೂಚನೆ ಕೊಟ್ಟವನೇ ನಾನು ಅಂತ ಹೇಳಿದರೂ ತಪ್ಪಾಗಲಾರದು ನಮ್ಮ ದೇಶದ ಯಾವ ವೃತ್ತ ಪತ್ರಿಕೆಯನ್ನ ತೆಗೆದು ನೋಡಿದರೂ, ಭೋಗಲಾಲಸರಾದ ವೃದ್ಧ ಶ್ರೀಮಂತರ ಕಿಸೆಯಿಂದ ಕಾಸುದುರಿಸಲು ನಮ್ಮವರು ಹೂಡಿರುವ ಉಪಾಯಗಳೇ ಕಣ್ಣಿಗೆ ಬೀಳುತ್ತವೆ ರತಿ, ಮನ್ಮಥ, ಮದನ ಧಾತು ಮುಂತಾದ ಹೆಸರುಗಳನ್ನುಪಯೋಗಿಸಿ ವೀರ್ಯವರ್ಧಕ ದ್ರಾವಕಗಳನ್ನ ಮುದುಕರಿಗೆ ಮಾರಿ ನಮ್ಮ ದೇಶದಲ್ಲಿ ನೂರಾರುಜನ ಲಕ್ಷಾಧಿಕಾರಿಗಳಾಗಿರಬೇಕೆಂದು ನನಗೆ ತೋರಿತು ಅದೇ ದಾರಿಯನ್ನ ನೀವೂ ಹಿಡಿಯಿರಿ ಎಂದು ನಾನೇ ಅವರಿಗೆ ಬೋಧಿಸಿದೆ ಕೊಡಗಿನ ವೀರರು ಹಿಂದೆ 'ಹುಲಿಯ ಹಾಲನು ಮೆದ್ದರು' ಎಂದು ಕವಿಶಿಷ್ಯರು ಸಾರಿದ್ದು ನನ್ನ ಕಿವಿಗೂ ಬಿದ್ದಿತ್ತು ಆ ಪದ್ಯ ನನ್ನ ಪಠ್ಯಪುಸ್ತಕದಲ್ಲಿತ್ತು ಆದ್ದರಿಂದ ಹುಲಿಯಹಾಲನ್ನ ಕುಡಿದು ನವತಾರುಣ್ಯವನ್ನು ಪಡೆಯಿರಿ ಎಂಬ ಚಿತ್ತರಂಜಕ ಪ್ರಚಾರದ ಮೇಲೆ ಹೇರಳವಾದ ಲಾಭ ಪಡೆಯಬಹುದೆಂದು ನಾನು ಹೇಳಿದೆ "ಕ್ಷೀರ ಶಾರ್ದೂಲೇಶ್ವರ, ಕಂಪನಿ, ಲಿ" ಸ್ಥಾಪನೆ ಆಯಿತು ಶಿಕಾರಿನಗರದಲ್ಲೇ ಅದರ ಮುಖ್ಯ ಕಾರ್ಯಾಲಯ, ಹುಲಿಯ ಮುಖವೇ ಅದರ ಟ್ರೇಡ್‌ಮಾರ್ಕ್! ದಿನಕ್ಕೆ ಐವತ್ತು ಅರವತ್ತು ಸೇರಿನಷ್ಟು ಹಾಲನ್ನು ನೀಲಿ ಬಾಟ್ಲಿಗಳಲ್ಲಿ ತಂಬಿ ಭರತ ಭೂಮಿಯ ಎಂಟು ಮೂಲೆಗಳಿಗೂ ಭರದಿಂದ ರವಾನಿಸುತ್ತಿದ್ದೆವು ಆಗಲೇ

ನಾನು ಈ ಮನೆಯನ್ನೂ, ಕೆರೆಕೆಳಗಿನ ಆ ಜಮೀನನ್ನೂ ಕೊಂಡು ಕೊಂಡದ್ದು ಕಡೆಗೆ ಯಾರೋ ಪಾಪಿಗಳು ಹುಲಿಯ ಹಾಲಿನಲ್ಲಿ ಹಸುವಿನ ಹಾಲಿನಷ್ಟು ಕೂಡ ಸತ್ವವಿಲ್ಲವೆಂದೂ, ನಾವು ತುಂಬುತ್ತಿದ್ದದ್ದು ಹುಲಿಯ ಹಾಲಲ್ಲವೆಂದೂ, ಹಳಸಿದ ಸಾಕ್ಷಾತ್ ಎಮ್ಮೆ ಹಾಲೆಂದೂ, ಪತ್ರೆ ಹಚ್ಚಿ ಪ್ರತಿ ಪ್ರಚಾರ ನಡೆಸಿ ಕಂಪನಿ ಬಾಗಿಲನ್ನು ಮುಚ್ಚಿಸಿದರು

ಈಚೆಗೆ ಎರಡು ವರ್ಷದಿಂದ ನಾನು ನನ್ನ ಪೋಲೀಸ್ ಪರಿಚಯದ ಸುಬ್ಬಯ್ಯನ ಹತ್ತಿರವೇ ಚಾಕರಿಗೆ ಸೇರಿಕೊಂಡಿದೇನೆ ಸುಬ್ಬಯ್ಯ ಬೂಟಾಟಿಕೆಯಲ್ಲಿ ನುರಿತವನಾದರೂ ಸಭ್ಯ ! ಗೂಂಡನಾದರೂ ಗಣ್ಯ ! ಆಕಾರವನ್ನ ನೀವು ನೋಡಿರಬಹುದು, ಸಂತಪ್ತ ಕರ್ಣಾಟಕ, ಸಂದೇಹ, ಝಂಝೀವರ, ಬಿಸಿ ಬಿಸಿ, ಪ್ರಭಾತ ದೋಣಿ, ಮುಂತಾದ ಪೇಪರುಗಳಲ್ಲೆಲ್ಲ ದಿನವೂ ಬರುತ್ತೆ ಚಿತ್ರ ಅಭಿನವಮಾರುತಿ, ಅಂತ ಕೆಳಗೆ ಹಚ್ಚುಹಾಕಿರುತ್ತಾರೆ ಮಾರುತಿಯ ಅವತಾರ ಅಂತ ವಿವರಿಸಿರುತ್ತಾರೆ ಮಹಾಜನಗಳು ಯಾವುದಾದರೂ ಎಂಟು ಸಮಸ್ಯೆಗಳನ್ನು ವಿವರವಾಗಿ ಅವರಿಗೆ ಬರೆದರೆ, ಲಕ್ಕೋಟೆಯಿಂದ ತೆರೆಯದೆಯೇ (!) ಅವರು ಒಳಗಿನ ಹೂರ್ಣವನ್ನ ಪತ್ತೆ ಹಚ್ಚಿ, ಆ ಸಮಸ್ಯೆಗಳನ್ನು ಬಿಡಿಸಲು ಉಪಾಯಗಳನ್ನು ಹೇಳುತ್ತಾರೆ ಇದನ್ನು ನಂಬಿ ನಮ್ಮ ಸುಬ್ಬಯ್ಯನನ್ನ ಸೊಸೆಯರು ಬಾವಿಗೆ ಬೀಳಲೇ ಅಂತ ಕೇಳುತ್ತಾರೆ, ಅತ್ತೆಯರು ಕಾಶಿಗೆ ಹೊರಡಲೇ ಅಂತ ಕೇಳುತ್ತಾರೆ, ತರುಣರು ಮದುವೆ ಗೊಪ್ಪಲೇ ಅಂತಾರೆ, ಗುಮಾಸ್ತೆಯರು ಅರ್ಜಿ ಹಾಕಲೇ ಅಂತಾರೆ, ವ್ಯಾಪಾರಸ್ಥರು ಬೆಲೆ ಏರಿಸಲೇ ಅಂತಾರೆ ಅವಕ್ಕೆಲ್ಲಾ ಸುಬ್ಬಯ್ಯ ಪೌರಾಣಿಕ ಐತಿಹಾಸಿಕ ಕಥೆಗಳ ಉದಾಹರಣೆಗಳನ್ನು ತುಂಬಿ, ಸುಲಭದಲ್ಲಿ ಅರ್ಥವಾಗದ, ಯಾವ ಅರ್ಥವನ್ನು ಬೇಕಾದರೂ ಕೊಡುವ, ಉತ್ತರಗಳನ್ನು ಹುಚ್ಚು ಕನ್ನಡದಲ್ಲಿ ಬರೆದು ಬೇರೆ ಲಕ್ಕೋಟೆಯಲ್ಲಿಟ್ಟು ಕಳುಹಿಸುವನು ಪ್ರತಿಒಬ್ಬರೂ ಎಂಟು ರೂಪಾಯಿ ರುಸುಮು ಕೊಡಬೇಕು. ಅದರ ಪೈಕಿ ವ್ಯವಸ್ಥಾಪಕನೂ ಸಂಚಾಲಕನೂ ಕಾರ್ಯದರ್ಶಿಯೂ ಆದ ನನಗೆ ಎರಡು ರೂಪಾಯಿ, ಹಬೆಯ ಒಂದು ಉಪಕರಣದಿಂದ ಲಕ್ಕೋಟೆಗಳ ಅಂಟನ್ನುಬಿಡಿಸಿ ಒಳಗಿನ ಕಾಗದವನ್ನು ಹೊರಗೆಳೆದು ಸಹಾಯ ಮಾಡುವ ಶಿಂಗ್ರೈಯ್ಯಂಗಾರ್ಯರಿಗೆ ಎರಡು ರೂಪಾಯಿ, ಗುಮಾಸ್ತೆ ಗೋವಿಂದಯ್ಯನಿಗೊಂದು ರೂಪಾಯಿ, ಎರಡು

ರೂಪಾಯಿ ಸುಬ್ಬಯ್ಯನಿಗೆ, ಜಾಹೀರಾತು ನಿಧಿಗೆ ಒಂದು ರೂಪಾಯಿ, ಹೀಗೆ ಹಂಚುತ್ತಿದೇವೆ. ಎಂಥ ಬರಗಾಲದಲ್ಲೂ ನನಗೆ ಈಗ ದಿನಕ್ಕೆ ಹತ್ತು ರೂಪಾಯಿ ಸಿಗುತ್ತಾ ಇದೆ (ವಿದ್ಯಾವಂತ ತರುಣರು ಇತ್ತ ಕಡೆ ಗಮನ ಕೊಟ್ಟರೆ ಒಳ್ಳೇದು ನನ್ನಂಥ ಇ ಪಿ ಎಸ್ ಹೊಂದಿರುವವನೇ ಜನ ಸೇವೆಯನ್ನು ಈ ರೀತಿ ಲಾಭದಾಯಕವಾಗಿ ನೆರವೇರಿಸುತ್ತಿರುವಾಗ ಪದವೀ ಧರರು ಇನ್ನೂ ಹೆಚ್ಚು ಚಾಕಚಕ್ಯತೆಯಿಂದ ಇಂಥ ವ್ಯಾಪಾರದಲ್ಲಿ ತೊಡಗ ಬಹುದಲ್ಲವೆ?) ಮೊನ್ನೆ ತಾನೆ ನಾನು ಈ ಊರಲ್ಲಿ ಬೇರೊಂದು ಮನೆ ಭೋಗ್ಯಕ್ಕೆ ತೆಗೆದುಕೊಂಡೆ, ಕೆರೆ ಕೆಳಗೆ ಇನ್ನೂ ಎರಡು ಎಕ್ರೆ ಹರಾಜಿಗೆ ಬಂದಿತ್ತು, ಹಿಡಿದಿಟ್ಟಿದೇನೆ ಮದುವೆ ಕಾಲ, ಪರೀಕ್ಷೆ ಕಾಲ, ಚುನಾವಣೆ ಕಾಲ ಮೊದಲಾದ ಭಾಗ್ಯ ಪರೀಕ್ಷೆಯ ಕಾಲಗಳಲ್ಲಿ ನಮಗೆ ಹೆಚ್ಚು ಕವರುಗಳು ಬರುವುವು ಆಗಲೇ ನಮ್ಮ ಸುಗ್ಗಿ !

ಗುಂಡಪ್ಪನವರಿಂದ ಎಂಟು ಸಮಸ್ಯೆಗಳೂ ಎಂಟು ರೂಪಾಯಿಗಳೂ ಬಂದಾಗ, ನನಗೆ ಆಶ್ಚರ್ಯವಾಯಿತ. ದಿನ ಬೆಳಗಾದರೆ, ಅಡ್ವೊಕೇಟರು ಗಳು, ಖಟ್ಲೆಯಲ್ಲಿ ತಾವು ಸೋಲುವ ಸಂಭವವುಂಟೆ? ಎಂದು ಕೇಳುವರು ಕಲೆಕ್ಟರುಗಳು ಗವರ್ನರನ್ನು ತಮ್ಮ ಜಿಲ್ಲೆಗೆ ಕರೆಸೋಣವೇ? ಎಂದು ಕೇಳುವರು, ಮೇಷ್ಟರುಗಳು, ಇಂತಹ ಪ್ರಶ್ನೆಗಳನ್ನು ಈ ವರ್ಷದ ಪರೀಕ್ಷೆಗೆ ಕೊಡಬಹುದೆ? ಎಂದು ಕೇಳುವರು, ವಿದ್ಯಾರ್ಥಿಗಳು ಎಂತಹ ಪ್ರಶ್ನೆಗಳು ಈ ವರ್ಷದ ಪರೀಕ್ಷೆಗೆ ಬರಲಿವೆ? ಎಂದು ಕೇಳುವರು! ಆದ್ದರಿಂದ ನಿಮ್ಮ ಗುಂಡಪ್ಪನವರು, ಕ್ಷಮಿಸಿ, ನಮ್ಮ ಗುಂಡಪ್ಪ ಬರೆದಿದ್ದ ಕಾಗದವನ್ನು ಶಿಂಗ್ರೈಯ್ಯಂಗಾರ್‍ರು ತೆಗೆದು ನನ್ನ ಕೈಗೆ ಕೊಟ್ಟಾಗ, ಏನು ಬಂತಪ್ಪ, ಗ್ರಹಚಾರ, ಅಂತ ಅದನ್ನು ಸುಬ್ಬಯ್ಯನಿಗೆ ಓದಿ ಹೇಳಿದೆ ಅವನು ಕೇಳಿದ್ದ ಎಂಟು ಪ್ರಶ್ನೆಗಳು ಇವು (೧) ನನ್ನ ಮನೆಯನ್ನು ನಾವು ಬಾಡಿಗೆಗೆ ಕೊಡ ಬಹುದೆ? ಕಪಿ ಶ್ರೇಷ್ಠರಾದ ತಾವು ಅಯೋಧ್ಯೆಗೆ ದಯಮಾಡಿಸಿದಾಗ, ತಮ್ಮ ಹಿಂದಿನ ಗಿರಿಗಹ್ವರಗಳನ್ನೇನು ಮಾಡಿದಿರಿ? ಬಾಡಿಗೆಗೆ ಕೊಟ್ಟರಾ? (೨) ತಂದೆಯ ಕಾಲದ ಕೆಲವು ಶೀಸೆಗಳಲ್ಲಿ ಭಸ್ಮಾದಿಗಳಿವೆ ಅದನ್ನೆಲ್ಲ ಅಸ್ಮದಾದಿಗಳು ಮಾರಬಹುದೆ? ದಶರಥನ ಹತ್ತು ರಥಗಳನ್ನೂ ಶ್ರೀರಾಮ ನೇನು ಮಾಡಿದ? (೩) ಹೊಸ ಆಫೀಸರ್ ಬರುವಾಗ ನಾನು ಬಸ್‌ಸ್ಟಾಂಡಿಗೆ

ಹೋಗಬೇಕೆ? ವಾಲಿಯ ಕಥೆ ಮುಗಿದು ಸುಗ್ರೀವ ಪಟ್ಟಕ್ಕೆ ಬಂದಾಗ ಯಾರಾದರೂ ಚಿಲ್ಲರೆ ಚಾಕರಿಯವರು ಬಸ್ ಸ್ಟಾಂಡಿಗೆ ಹೋಗಿದ್ದರೆ? (೪) ನನ್ನ ಅಜ್ಜಿ ಗೂರಲಿಗೆ ಯಾವುದಾದರೂ ಔಷಧಿ ಇದೆಯೇ? ಸಂಜೀವಿನಿ ಪರ್ವತದಲ್ಲಿ ಇನ್ನೂ ತರುಮೂಲಿಕೆಗಳಿವೆಯೇ? ಅಲ್ಲಿಯವು ನಿಮ್ಮಲ್ಲುಂಟೆ? (೫) ನನ್ನ ನೆರೆಮನೆಯವರು ಈಚೆಗೆ 'ಎಲ್ಲಿರುವೆ ತಂದೆ, ಮಾರುತಿ' ಎಂದು ಹತ್ತಾರು ಬಾರಿ ಹಾಡಲು ಪ್ರಾರಂಭಿಸಿದಾರೆ ನಿಮ್ಮ ವಿಳಾಸವನ್ನು ಅವರಿಗೆ ತಿಳಿಸಬೇಕಾದದ್ದು ನಮ್ಮ ಕರ್ತವ್ಯವೆ? (೬) ನನ್ನ ಮೇಲೆ ಚಾಡಿ ಹೇಳುವ ಸಹೋದ್ಯೋಗಿಯ ಹೆಸರನ್ನು ನಿಮಗೆ ಸೂಚಿಸಿದರೆ ನೀವು ಆತನಿಗೆ ತಿಳಿಯದೆಯೇ ಆತನ ದುಃಸ್ವಭಾವವನ್ನು ತಿದ್ದಬಲ್ಲಿರಾ? ಭೀಷಣನನ್ನು ವಿಭೀಷಣನನ್ನಾಗಿ ಮಾರ್ಪಡಿಸಿದ ಮಾರುತಿಗೆ ಇದು ಅಸಾಧ್ಯವೆ? (೭) ನನ್ನ ತಂದೆಯವರು ನಿಜವಾಗಿಯೂ ಚಿನ್ನದ ಸರವನ್ನು ಕದ್ದು ಭಸ್ಮಮಾಡಿದರೆ? ಅಥವಾ, ಅದೊಂದು ಸುಳ್ಳು ಆಪಾದನೆ ಮಾತ್ರವೆ? ಅದು ನಿಜವಾಗಿದ್ದ ಪಕ್ಷದಲ್ಲಿ ನಾನು ಎಷ್ಟು ಚಿನ್ನವನ್ನು ಯಾರಿಗೆ ದಾನ ಮಾಡಿದರೆ ಅವರು ಸದ್ಗತಿಯನ್ನು ಹೊಂದುವರು? (೮) "ಪತ್ರಂ ಪುಷ್ಪಂ ಫಲಂ ತೋಯಂ" ಎಂಬುದು ಎಲ್ಲರಿಗೂ ಅನ್ವಯಿಸುತ್ತದೆಯೆ?

ನಮ್ಮೊಂದಿಗೆ ಪತ್ರವ್ಯವಹಾರ ನಡೆಸುವವರ ಪ್ರಶ್ನೆಗಳನ್ನು ನಾವು ಅತಿ ಗೋಪ್ಯವಾಗಿಟ್ಟುಕೊಂಡಿರುತ್ತೇವೆ ಅವರ ಲಕ್ಕೋಟೆಗಳನ್ನೇ ನಾವು ಒಡೆಯುವುದಿಲ್ಲ, ಅಂದ ಮೇಲೆ, ನಾವು ಗುಂಡಪ್ಪನಿಗೆ ಕಳುಹಿಸಿದ ಉತ್ತರಗಳೇನೆಂಬುದನ್ನು ನಾನು ನಿಮಗೆ ತಿಳಿಸುವ ಹಾಗೆಯೇ ಇಲ್ಲ ಅವನ ಚರ್ಯೆಯಿಂದಲೇ ನೀವು ಅದನ್ನು ತಿಳಿದುಕೊಳ್ಳಬಹುದು ಬಹುಶಃ, ಅವನು ಮಾರುತಿಯ ಪೂಜೆಗೆ ಪ್ರಾರಂಭಿಸಿರಬಹುದು ಶೀಸೆಗಳನ್ನು ಖಾಲಿಮಾಡಿ ಮಾರಿರಬಹುದು, ಬಸ್ ಸ್ಟಾಂಡಿಗೆ ಹೋಗದೆ ಇದ್ದಿರಬಹುದು ಅದನ್ನೆಲ್ಲ ನಾನು ಹೇಳುವುದಿಲ್ಲ.

ಇಷ್ಟು ಮಾತ್ರ ಹೇಳಬಲ್ಲೆ ತನ್ನ ಕಷ್ಟಸುಖಗಳನ್ನು ಸಹಾನುಭೂತಿಯಿಂದ ಕೇಳಿ ಪರಿತಪಿಸುವವರು ಯಾರೂ ಇಲ್ಲದ ಸಾವಿರಾರು ಮಂದಿ ಸದ್ಗೃಹಸ್ಥರಿಗೆ ಸುಬ್ಬಯ್ಯನೇ ಸ್ವಾಮಿ, ಸುಬ್ಬಯ್ಯನೇ ಸರ್ವಸ್ವ! ಅವನ ಹತ್ತಿರ ಅವರು ನಿರ್ವ್ಯಾಜವಾಗಿ ಎಲ್ಲವನ್ನೂ ಮರೆಮಾಚದೆ ಹೇಳಿಬಿಡು

ತ್ತಾರೆ ಅವನು ಹೇಳುವಂತೆ ನಡೆದು ಸಮಾಧಾನ ಪಡೆಯುತ್ತಾರೆ; ಅವನು ಕೇಳುವಷ್ಟು ಹಣವನ್ನು ಶಾಂತಿಹೋಮಗಳಿಗಾಗಿ ತಾಯಿತಿಗಳಿಗಾಗಿ ಕವಚಗಳಿಗಾಗಿ ಪೂಜೆಗಳಿಗಾಗಿ ತೆರುತ್ತಾರೆ ಗುಂಡಪ್ಪನನ್ನೇ ಕೇಳಿ, ವೇದು ಳಿಗೆ ಮಾರುತಿ ಹೊಕ್ಕಮೇಲೆ ಈಗ ಎಷ್ಟೋ ಶಾಂತವಾಗಿದೆ ಮನಸ್ಸು, ಅಂತ ಅವನೇ ಬರೆದಿದಾನೆ ಅಲ್ಲದೆ, ಅವನದೇ ಆದ ಒಂದು ವೇದಾಂತವನ್ನೇ ಗುಂಡಪ್ಪ ಸಾಧಿಸುವುದಕ್ಕೆ ಹೊರಟಿದಾನೆ. ಇಂದಲ್ಲ ನಾಳೆ ಜಗತ್ತು ಆ ತತ್ವವನ್ನೇ ಅನುಸರಿಸಿ ತನ್ನ ಪ್ರಗತಿಯನ್ನು ಸಾಧಿಸಬೇಕು, ಅನ್ನುವಷ್ಟರ ಮಟ್ಟಿಗೆ ಅವನಿಗೆ ಆತ್ಮವಿಶ್ವಾಸವೂ ಆತ್ಮಗೌರವವೂ ಉತ್ಪನ್ನವಾಗಿವೆ. ಅವನ ತಂಗಿಯ ಮದುವೆ ಕಾಲದಲ್ಲಿ ಅವನು ಕೇವಲ ಕಿಶೋರನಾಗಿದ್ದ ಆಗ ಅವನ ತಂದೆ, ತಾಯಿ, ಅಜ್ಜಿ ಎಲ್ಲರೂ ಅವನನ್ನು ಯದ್ವಾತದ್ವಾ ಗದರಿಸು ತ್ತಿದ್ದರು ಆಗ ಬೆನ್ನೆಲುಬೇ ಇಲ್ಲದವನ ಹಾಗೆ ಯಾರ ಬಾಯಿ ಬೊಗ ಳಿದರೂ, ಅವನು ಬಾಗುತ್ತಿದ್ದ ಆಗಿನ್ನೂ ಅವನಿಗೆ ಮದುವೆ ಕೂಡ ಆಗಿರ ಲಿಲ್ಲ, ಅದೇ ಕಾರಣ ಇರಬಹುದು ಅನ್ನುವುದಕ್ಕೆ! ಈಗ ಕೇಳಿ, ಗಂಡಪ್ಪ ನನ್ನ! ಭಾವೀ ಭಾರತಕ್ಕೆ ನಾನೇ ಗುರು, ಅಂತ ಸಾರುತ್ತಾನೆ, ನಿಮ್ಮ ಕಿವಿ ಯಲ್ಲಿ! ಆ ಸವಿಗನಸಿನಲ್ಲಿ ಉಳಿದೆಲ್ಲ ಕಷ್ಟಗಳನ್ನೂ ಮರೆತುಬಿಟ್ಟಿದಾನೆ ಈ ಉಪಕಾರಕ್ಕೆ ಸುಬ್ಬಯ್ಯನ ಆಡ್ರೆಸ್ಸಿಗೆ ತಿಂಗಳಿಗೆ ಎಂಟು ರೂಪಾಯಿ ಕಳುಹಿಸುವುದು, ಹೆಚ್ಚು ಅಂತೀರೇನು?

ಆದರೆ, ಮೊನ್ನೆ ನಮ್ಮ ಸುಬ್ಬಯ್ಯನಿಗೆ ಇನ್ನೊಂದು ಕಾಗದ ಬಂತು ಅದನ್ನೋದಿದಾಗ ನನಗೆ ವಿಪರೀತ ಕಳವಳ ಉಂಟಾಯಿತು ಗಣೇಶನ ವಿಗ್ರಹ ಮಾಡುವುದಕ್ಕೆ ಹೊರಟವನು ಅವನ ತಂದೆಯ ವಿಗ್ರಹವನ್ನೇ ಮಾಡಿದನಲ್ಲಾ, ಎಂದು ನಾನು ವ್ಯಥೆಗೊಂಡೆ. ಮುಂದೆ ಏನು ಮಾಡಬೇ ಕೆಂಬುದೇ ನನಗೆ ತೋಚದಾಯಿತು ಕನ್ನಡಕವನ್ನೇ ಹುಡುಕುವ ಅರೆ ಕುರುಡನಂತೆ ನಾನು ತತ್ತರಿಸಿದೆ. ಆ ಕಾಗದ ಗುಂಡಪ್ಪನ ಸದ್ಯದ ಮನಃ ಸ್ಥಿತಿಯನ್ನು ಕುರಿತದ್ದು "ಮಾರುತಿ ಪೂಜೆಯನ್ನೂ ಮೀರಿದ ಒಂದು ಪೂಜೆಯಿದೆ ಎಂದೂ ಮಗನಿಗಿಂತ ತಂದೆ ಶ್ರೇಷ್ಠನಾದ್ದರಿಂದ ಪಾತನೇ ಅತಿ ಪ್ರಧಾನವೆಂದೂ, ವಾತ ಸರ್ವವ್ಯಾಪಿ ಎಂದೂ, ವಾತೋಪನಿಷತ್ತೆಂಬ ಒಂದು ಗ್ರಂಥವಿರಬೇಕೆಂದೂ, ನೆಲ ಜಲ ಗಾಳಿ ಎಂಬ ಮೂರು ಆವರಣಗಳ ಪೈಕಿ

ಮನುಷ್ಯ ಮೊದಲು ನೆಲದ ಮೇಲೆ ತನ್ನ ಆಧಿಪತ್ಯವನ್ನು ನೆಲೆಗೊಳಿಸಿದ ನೆಂದೂ, ಅನಂತರ ನೀರಿಗಿಳಿದು, ಜಲಪೀಡೆಗೆ ತೊಡಗಿ, ನೀರಿನ ಮೇಲೂ ಒಳಗೂ ಲೀಲಾಜಲವಾಗಿ ಸಂಚರಿಸಲು ಕಲಿತನೆಂದೂ, ಈಚೆಗೆ ಗಾಳಿಯಲ್ಲೂ ಹಾರಾಡಿ ದೂರಾಡಿ ಹೋರಾಡಲು ಕಲಿತನೆಂದೂ, ಆದ್ದರಿಂದ ಮುಂದಿನ 'ವಾತಾವರಣ ಸಾಮ್ರಾಜ್ಯ'ಕ್ಕೆ ವಾತದೇವರನ್ನೇ ಜಗತ್ತಿಲ್ಲವೂ ಇತ್ಯಾದಿ ಇತ್ಯಾದಿಯಾಗಿ ಗುಂಡಪ್ಪ ಹಗಲಿರುಳೂ ತನ್ನ ಅಂತರಂಗ ಸ್ನೇಹಿತರೊಂದಿಗೂ ಎದುರಂಗಡಿ ಕೆಂಚಣ್ಣನೊಂದಿಗೂ ಆಫೀಸ್ ಜವಾನ ಈರನೊಂದಿಗೂ ಪ್ರಚಾರಮಾಡ ತೊಡಗಿದಾನೆ. ಗಾಳಿ ತಲೆಗೆ ಹೊಕ್ಕರೆ ಅದಕ್ಕೆ ಹುಚ್ಚು ಅಂತ ಹೇಳುವುದೇ ವಾಡಿಕೆಯಾಗಿರುವುದರಿಂದ ಗುಂಡಪ್ಪನವರು ಈ ವಾತವಾದವನ್ನು ಊರಿಗೆಲ್ಲ ಹೇಳುವ ಮೊದಲೇ ಗುರಗಳಾದ ನೀವು ಆತನಿಗೆ ಬುದ್ಧಿವಾದ ಹೇಳಿ ಆತನ ಸಂಸಾರವನ್ನು ಉಳಿಸಿ ಕಾಪಾಡಬೇಕಾಗಿ ವಿನಂತಿ" —ಅಂತ ಬರೆದು ಯಾರೋ ಒಬ್ಬರು, ಸಬ್‌ರೆಜಿಸ್ಟ್ರಾರರು, ನಾರಾಯಣರಾಯರಂತೆ (ಚೆನ್ನಾಗಿ ಬರೆಯುತ್ತಾರೆ, ಈಗಿನ ಕಾಲದಲ್ಲಿ ಕನ್ನಡ ಅಕ್ಷರಗಳನ್ನು ಇಷ್ಟು ಅಂದವಾಗಿ ಬರೆಯುವವರನ್ನು ನಾನು ಎಲ್ಲೂ ನೋಡಿಲ್ಲ, ನನ್ನ ಪೋಲೀಸ್ ಅನುಭವದಲ್ಲೂ ಅಷ್ಟೆ, ದೀನಜನಸೇವೆಯ ಅನುಭವದಲ್ಲೂ ಅಷ್ಟೆ!) ಸುಬ್ಬಯ್ಯನಿಗೆ ನಮಸ್ಕಾರ ಹಾಕಿದ್ದರು.

"ಏನೋ ಸ್ವಾಮಿ! ನಾನೊಬ್ಬ ಭೀರು!" ಅಂತ ಒಬ್ಬ ನಮ್ಮನ್ನಾಶ್ರಯಿಸಿ ತಿಂಗಳಿಗೆಂಟುರೂಪಾಯಿ ತಪ್ಪದೆ ಕಳುಹಿಸುತ್ತಾ ಇರುವಾಗ ನಾವು ಅವನನ್ನು ಉನ್ಮತ್ತಮಾಡಿ, ಹೋಗತ್ತ ಅಂತ ಅಂದರೆ ತಪ್ಪು ಅಂತ ನಾನು ಸುಬ್ಬಯ್ಯನಿಗೆ ಹೇಳಿದೆ. ಅವನು, "ಜೋಂಪುಹತ್ತಿದ್ದು ಜಮಯಾನೆ ತಪ್ಪೆ?" ಅಂದ. ನಾನು ನಮ್ಮಣ್ಣನ ಮದುವೆ, ಭಸ್ಮದಕಥೆ, ಅವನ ಶಪಥ, ಮುಂತಾದದ್ದನ್ನೆಲ್ಲ ಲಂಬಿಸಿದೆ. "ನೀನೇ ಏನಾದರೂ ಒಂದು ಉಪಾಯಹೇಳು. ಆರೀತಿ ಬರೆದುಬಿಡೋಣ. ಗುಂಡಪ್ಪನವರನ್ನು ಅವರ ಸ್ನೇಹಿತ ಇಲ್ಲಿಗೆ ಕರೆದುಕೊಂಡು ಬರದೆಇರಲಿ! ಆತನ ಮನೋರೋಗ ಹದಕ್ಕೆ ಬರದೆ ಇದ್ದರೆ ಸಬ್‌ರೆಜಿಸ್ಟ್ರಾರ್‌ರವರೇ ಇಲ್ಲಿಗೆ ಎಂಟು ದಿನಗಳಲ್ಲಿ ಬರುತ್ತಾರಂತೆ, ಪೋಲೀಸ್ ಸಹಿತವಾಗಿ! ನನಗಂತೂ ನೀನು ಪೋಲೀಸಿನಲ್ಲಿದ್ದಾಗ ಮೂರುವರ್ಷ ಬಂದೀಖಾನೆಯಲ್ಲಿದ್ದದ್ದೇ ಸಾಕು ಸಾಕೆನಿಸಿದೆ" ಅಂದ, ಸುಬ್ಬಯ್ಯ.

"ಒಳ್ಳೆ ಪೀಕಲಾಟಕ್ಕೆ ಬಂತಲ್ಲ" ಅಂತ ನಾನು ಅವನ ಮನೆಯಿಂದ ಹೊರಬಿದ್ದು ನಮ್ಮ ಮನೆಗೆ ಬಂದೆ ಸುಬ್ಬಯ್ಯನನ್ನ ಅಭಿನವಮಾರುತಿ ಅಂತಲೇ ನಂಬಿರುವ ಗುಂಡಪ್ಪನನ್ನ ಆ ನಂಬಿಕೆಯಿಂದಲೇ ತಿದ್ದಬೇಕು ಅಂತ ನಾನು ತೀರ್ಮಾನಿಸಿದೆ ವಾತೋಪನಿಷತ್ತು, ವಾತಪೂಜೆ, ವಾತಾವರಣ, ವಾತಮಹಾತ್ಮ್ಯೆ ಮುಂತಾದ ಅತಿರಹಸ್ಯವಿಷಯಗಳನ್ನು ಅಭಿನವ ಮಾರುತಿಗಳ ಅಪ್ಪಣೆ ಇಲ್ಲದೆ ಯಾರಿಗೂ ಹೇಳಬಾರದೆಂದೂ, ಸ್ತ್ರೀಗಳಿಗೆ ಅದರ ಸುಳಿವೇ ಗೊತ್ತಾಗಕೂಡದೆಂದೂ, ಅದರಸುದ್ದಿ ಗಾಳಿಗೆಕೂಡ ಸೋಕಬಾರದೆಂದೂ ಗದರಿಸಿದೆ "ಅಭಿನವಮಾರುತಿ"ಗಳ ಗಾಳಿ ಹಾರಿಹೋದ ಮೇಲೆ, ಅವರೇ ಕನಸಿನಲ್ಲಿ ಬಂದು ಗುಂಡಪ್ಪನ ಕೈಹಿಡಿದು ಎಬ್ಬಿಸಿ ಅವನನ್ನು ಗಾಳಿಗೆ ಹಿಡಿಯುವರೆಂದೂ, ಆಗ ಅವನು ಎಚ್ಚೆತ್ತು ವಾತೋಪನಿಷತ್ತನ್ನು ಸ್ವತಃ ನಿರರ್ಗಳವಾಗಿ ಉಚ್ಚಾರಮಾಡುವನೆಂದೂ ನಾನು ಬರೆದೆ ಅದುವರೆಗೂ, ಕೇವಲ ವಾತಾತ್ಮಜನಾದ ಮಾರುತಿಗೆ ಸಂಬಂಧಪಟ್ಟ ಗ್ರಂಥಗಳನ್ನು ಪಠಿಸುತ್ತಾ ದಿನಕ್ಕೆರಡುಸಲ ಮಾತ್ರ ಮಾರುತಿಯ ಪಠಕ್ಕೆ ನಮಸ್ಕಾರ ಹಾಕಬೇಕೆಂದು ಕಾಗದವನ್ನು ಕೊನೆಗಾಣಿಸಿದೆ ರುಜುಮಾಡುವ ಮೊದಲು ಸುಬ್ಬಯ್ಯ "ಹುಷಾರ್! ಹುಷಾರ್! ಪರಮಹುಷಾರ್" ಅಂತ ಸ್ವಹಸ್ತದಿಂದಲೇ ಬರೆದ ಆ ಮೇಲೆ, "ಇತಿ, ಸಕಾಲದಲ್ಲಿ ನಿನ್ನಿಂದಲೇ ವಾತವೇದಾಂತವನ್ನು ಸಾರಿಸಲಿರುವ ಅಭಿನವಮಾರುತಿ" ಅಂತ ರುಜು ಹಾಕಿದ

ಆ ಕಾಗದ ಹೋದಮೇಲೂ ನಮಗೆ ಹೆದರಿಕೆ ಯಾವಬಸ್ಸಿನ ಫ್ರಂಟ್ ಸೀಟಿನಲ್ಲಿ ಪೊಲೀಸಿನವರು ಕೂತುಬಂದರೂ, ಸುಬ್ಬಯ್ಯ ಸರಕ್ಕನೆ ಒಳಗೆ ಹೋಗುವನು ಆದರೆ, ನಿನ್ನೆ ಗುಂಡಪ್ಪನಿಂದಲೇ ಒಂದು ಪತ್ರಬಂತು "ಮಗನೂ ತಂದೆಯೂ ಒಬ್ಬನೇ ಆದರೂ, ಮಗನೇ ಸಾಕೆನಗೆ" ಅಂತ ಬರೆದಿದ್ದ. ಸಬ್‌ರೆಜಿಸ್ಟ್ರಾರ್‌ರವರೂ ಕೂಡ, "ತಾವು ಒಳ್ಳೆ ಬಾಣವನ್ನೇ ಬಿಟ್ಟಿದೀರಿ ಅಂತ ಕಾಣುತ್ತೆ ಮುಂದಿನ ಶುಶ್ರೂಷೆ ನಾನು ಮಾಡಿಕೊಳ್ಳುತ್ತೇನೆ. ದಯವಿಟ್ಟು ಇನ್ನುಮುಂದೆ ಯಾರನ್ನೂ ಇಷ್ಟುದೂರ ನೂಕಬಾರದು ಅಂತ ಪ್ರಾರ್ಥಿಸುತ್ತೇನೆ" ಅಂತ ಬರೆದಿದ್ದರು ಅವರ ಪತ್ರ ಇವತ್ತು ಬಂತು ...ಸಮಾಧಾನವಾಯಿತು

ಅಂತು, ನೀವು ಗುಂಡಪ್ಪನ ಸೂತ್ರಧಾರನಲ್ಲಿಗೇ ಬಂದಹಾಗಾಯಿತು. ಸುಬ್ಬಯ್ಯ ಇಲ್ಲ ಊರಲ್ಲಿ. ಅವನು ಬೆಂಗಳೂರಲ್ಲಿ ಒಂದು ಮನೆ ಕಟ್ಟಿಸುತ್ತಾ ಇದಾನೆ ಅಲ್ಲಿಗೆ ಹೋಗಿದಾನೆ ಅವನ ಹತ್ತಿರ ನಾನು ನೀವು ಬಂದ ಸಮಾಚಾರ ಪ್ರಸ್ತಾಪಿಸುವುದೇ ಇಲ್ಲ ಲಕ್ಕೋಟೆ ಒಡೆದು ನೋಡುತ್ತೇವೆ ನಾವು, ಸೆನ್ಸರ್‌ಗಳ ಹಾಗೆ, ಅಂತ ಮಾತ್ರ ದಯವಿಟ್ಟು ಪ್ರಚಾರ ಮಾಡಬೇಡಿ ನಮ್ಮಂತಹ ನೂರಾರು ಜನರ ಅನ್ನಕ್ಕೆ ಕಲ್ಲು ಹಾಕಬೇಡಿ

## ಭಾವನ ಸೋದರನ ಪ್ರಸಾರ ಮುಗಿಯಿತು

---

ಇದಾರಿಗೆ

ಮನವ ಕದ್ದಾಡುವಿರಿ ? ನಿಜಶಿ
ಷ್ಯನೊಳು ನಾಟಕದಿಂದ್ರಜಾಲವೆ ನಿಮ್ಮ ಗರುಡಿಯೊಳು ?

—ನಾರಣಪ್ಪ

ಪಡರಿದ ಸಮಸ್ತವಸ್ತು ಆಗಿ ಆಯಾ ವಸ್ತುವಿನಲ್ಲಿ
ಒಡಲವೋಲ ಉಸಿರಾಗಿ ಬೆರೆತು ಎಲ್ಲಾ ವ್ಯಾಪಿಸಿರುವನು

ಭಾಷಾಂತರ—ಶ್ರೀವೈಷ್ಣವಸಾಹಿತ್ಯ

ಆ ಮಾಟವು ಚಿತ್ರದ ರೂಹು ಕಾಣಿರಣ್ಣ ! ಚಿತ್ರದ ರಬ್ಬು ಕಾಣಿರಣ್ಣ !

—ವಚನ

## ೧೧: ಸಹನ

ಅಯ್ಯೋ, ನಾನೇನು ಅಂತ ಹೇಳೋದು, ನಿಮಗೆ? ಎಲ್ಲಿಂದ ಪ್ರಾರಂಭ ಮಾಡೋದು? ಎಲ್ಲಿಗೆ ತಂದು ನಿಲ್ಲಿಸುವುದು? "ಗೃಹಿಣೀ ಗೃಹಮುಚ್ಯತೆ" ಅಂದರೆ, ಮನೆಯಾಕೆ ಮನೆ ಬಾಗಿಲು ಮುಚ್ಚಿ ಯಾವ ತಂಟೆ ತಕರಾರು ಇದ್ದರೂ ಅದನ್ನೆಲ್ಲ ಮನೆಯೊಳಗೇನೆ ಇರಿಸಿಕೊಂಡಿರುತ್ತಾಳೆ, ಅಂತ ಆಚಾರ್ರ‍್ರೇನೋ ಹೇಳುತ್ತಾರೆ ಗಂಡ ಹೊಡೆದನಲ್ಲಾ ಅಂತ ರೇಗಲಿಲ್ಲವಂತೆ ಒಬ್ಬಳು, ಪಕ್ಕದ ಮನೆಯವರು ಅದನ್ನು ನೋಡಿ ನಕ್ಕರಲ್ಲಾ, ಅಂತ ರೇಗಿ ತಂತೆ ಅವಳಿಗೆ! ನ್ಯಾಯ, ಅನ್ನಿ ಆದರೆ, ನಮ್ಮ ಮನೆಯಲ್ಲಿ ಬೇರೆ ಯಾರೂ ಈ ಧರ್ಮವನ್ನ ಪರಿಪಾಲಿಸುವ ಹಾಗೆ ಕಾಣೆ ದೇವಸ್ಥಾನದಲ್ಲಿ ಪುರಾಣ ಕೇಳುವುದಕ್ಕೆ ಹೋದರೆ ನಮ್ಮ ಮನೆ ಕೆಪ್ಪು ಮುದುಕಿ ಒಟಬಟ ಅಂತ ನಮ್ಮತ್ತೆಯನ್ನೂ ನನ್ನನ್ನೂ ಹೀನಾಮಾನ ಬೈಯುತ್ತಾಳೆ ಸ್ನಾನಕ್ಕೆ ಅಂತ ಅಂತರ್ಯಮುನೆಗೆ ಹೋದರೂ ಅಂತರಪಿಶಾಚಿ ಅಂತ ನಮ್ಮನ್ನೇ ಆಶೀರ್ವಾದ ಮಾಡುತ್ತಾಳೆ ಇವರೂ ಅಷ್ಟೆ! ಯಾವುದೋ ಒಂದು ಮೃಗ ಸಿಕ್ಕಿದೆ, ಈಚೆಗೆ, ಇವರಿಗೆ—ಕೊಡಬಾರದ ಹಿಂಸೆಯನ್ನೆಲ್ಲ ಕೊಟ್ಟ ಕ್ಲಿಷ್ಟ ರಾಯರ ಅಳಿಯ ಅಂತೆ ಆವರ ಸಂಗಡ ಹೋಗಬೇಡಿ ಅಂತ ಎಷ್ಟು ಬೊಡ ಕೊಂಡರೂ, ಕಿವಿಯಲ್ಲೇ ಹಾಕಿಕೊಳ್ಳುವುದಿಲ್ಲ ಅದಕ್ಕೆ ಈ ಮನೆ ಮಹಾ ಭಾರತವನ್ನೆಲ್ಲ ಹೇಳಿರುತ್ತಾರೆ ಅಂತಲೇ ನನ್ನ ಊಹೆ ನಾನು ಕೇಳಿದರೆ, ತಲೆ ಅಲ್ಲಾಡಿಸುತ್ತಾರೆ, ಕೋಲೇಬಸವನ ಹಾಗೆ, ಅಷ್ಟೆ! ಇವರ ತಾಯಿ ಏನೂ ಕಡಿಮೆ ಇಲ್ಲ ಎದುರಂಗಡಿ ಕೆಂಚನ ಹತ್ತಿರ ಒಂದಾಣೆ ಸಾಲ ವಸೂಲು ಮಾಡಬೇಕಾದರೆ, ಮನೆಯಲ್ಲಿರುವವರಿಗೆಲ್ಲ ಮಂಗಳಾರತಿ ಮಾಡಿ ಬಿಡುತ್ತಾರಂತೆ, ಕೆಂಚನಹೆಂಡತಿ ಹೇಳಿದಳು ನನಗೆ

ಈ ಮನೆ ನನಗೊಂದು ಸೆರೆಮನೆಯಾಗಿದೆ "ಏನಮ್ಮ? ನೀನೇನು ಬದುಕಿದ್ದೀಯಾ? ಸತ್ತಿದ್ದೀಯಾ?" ಅಂತ ನನ್ನ ಕಡೆ ಲಕ್ಷ್ಯಕೊಟ್ಟು ಕೇಳು ವವರೊಬ್ಬರೂ ಇಲ್ಲ, ಈ ಮನೆಯಲ್ಲಿ ಬಸುರಿ ಬಾಣಂತನದ ಸಮಯದಲ್ಲಿ ಮಾತ್ರ ಎಲ್ಲರೂ ಮೇಲೆಬಿದ್ದು ನಾನು ನಾನು ಅಂತ ಉಪಚಾರ ಮಾಡಿದರು ಆಯಿತು, ಅಲ್ಲಿಗೇ ಮುಗಿಯಿತು. . .ಆದರೆ, ಈಚೆಗೆ ಪಕ್ಕದಮನೆ ಕಾವೇರಮ್ಮ

ಅಲ್ಲಲ್ಲಿ ಕಂಡಾಗ ಕಣ್ಣಲ್ಲಿ ನೀರು ತಂದುಕೊಂಡು ನಾಲ್ಕು ಮಾತಾಡುತ್ತಾಳೆ ಅವಳದೂ ಕಟುಕರ ಸಹವಾಸವೇ ಆಗಿದೆಯಂತೆ "ಇದೆಲ್ಲ ಕಾಲಮಹಿಮೆ, ಕಣೆ! ನಿನಗೂ ಒಂದು ಗಂಡು ಚಿಣ್ಣ ಇದೆಯಲ್ಲಾ ಅದನ್ನ ಸರಿಯಾಗಿ ನೋಡಿಕೊ ಅದಕ್ಕೆ ಚೆನ್ನಾಗಿ ಪೋಷಣೆ ಮಾಡು ಅವನಿಗೊಬ್ಬಳನ್ನ ತಂದರೆ ನೀನೂ ಇದೇ ರೀತಿ ಪೀಡಿಸಬಹುದು ಮುಯ್ಯಿಗೆ ಮುಯ್ಯಿ ತೀರಿಸಿ, ಋಣವಿಮುಕ್ತಳಾಗಬಹುದು" ಅನ್ನುವಳು "ನೋಡೆ! ಅತ್ತೆ ಕಾಟ ಅನ್ನುವುದೂ ಯಾರಿಗೂ ತಪ್ಪಿದ್ದಲ್ಲ ಸೀತಾದೇವಿ, ಪಾಪ, ದಂಡಕವನವಾಸ ಅಶೋಕವನವಾಸ ಅಗ್ನಿಪ್ರವೇಶ ಎಲ್ಲವನ್ನೂ ಮುಗಿಸಿ ಆಕಾಶಮಾರ್ಗವಾಗಿ ಅಯೋಧ್ಯೆಗೆ ಬಂದು ಶ್ರೀರಾಮನ ಪಟ್ಟದರಾಣಿ ಅಂತ ಅನ್ನಿಸಿಕೊಂಡಾಗ, ಅವಳ ಅತ್ತೆಯರು (ಒಬ್ಬರೇ, ಇಬ್ಬರೇ, ಮೂರು ಜನ ಅತ್ತೆಯರು!) ಅವಳ ಮೇಲೆ ಇಲ್ಲದ ಸಲ್ಲದ ಪಿತೂರಿ ಹೂಡಿ ಅಗಸಗಿತ್ತಿ ಸಂಗಡ ಒಳಸಂಚು ಮಾಡಿ, ಅವಳನ್ನ ಮತ್ತೆ ಕಾಡಿಗೆ ಅಟ್ಟಿಸಲಿಲ್ಲವೆ? ಅದಕ್ಕೇ ಅಂತ ಕಾಣುತ್ತೆ ಸೀತಾಮ್ಮನವರು ಅವುಳಿ ಜವುಳಿ ಹೆತ್ತದ್ದು, ಇಬ್ಬರು ಸೊಸೆಯರು ತನಗೂ ಸಿಕ್ಕಲಿ ಮುಂದಕ್ಕೆ, ಅಂತ " ಅಂದಳು ಕಾವೇರಮ್ಮ ನನಗಿದು ಹೊಳೆದೇ ಇರಲಿಲ್ಲ, ಅದುವರೆಗೂ

ನಮ್ಮಪ್ಪ ಪುರಂದರದಾಸರಾಗಿ ಪಂಢರಾಪುರಕ್ಕೆ ಹೊರಟುಹೋದ ಮೇಲೆ, ಅಲ್ಲಿಂದ ಬರೆದ ಕಾಗದಗಳನ್ನೆಲ್ಲ ನನಗೆ ತೋರಿಸದೆ ಹರಿದು ಬೆಂಕಿಗೆ ಹಾಕುತ್ತಿದ್ದರು, ನಮ್ಮತ್ತೆ! ಯಾಕಂದರೆ, ಅವರ ಮಗಳಿಗೆ ಅವರು ಪತ್ರ ಕಳುಹಿಸುವ ಹಾಗಿರಲಿಲ್ಲ "ಇವಳು ಮಾತ್ರ ಕುಟುಂಬದ ವಿಷಯ ಕೇಳಿ ಇಲ್ಲಿ ಕುಣಿಯುತ್ತಿರುವುದೇನು? ಅವಳು ಅಲ್ಲಿ ಅಣ್ಣ ತಮ್ಮ ಅಂತ ಕೊರಗುತ್ತಿರುವುದೇನು?" ಅಂತ ಅತ್ತೆ ಎಗರಾಡುತ್ತಾರೆ! ಯಾರ ತಪ್ಪಿಗೆ ಯಾರಿಗೆ ಕೊಪ್ಪ? ನನಗೇನು? ಇವರು 'ಗಂಗಾ' ಅಂತ ಕಾಗದ ಹರಿದು ಹಾಕಿದರೆ ನಾನು "ಕಾವೇರಿ" ಅಂತ ಬೇರೆ ಕಡೆಯಿಂದ ತರಿಸಿಕೊಳ್ಳುತ್ತೇನೆ ನಮ್ಮ ತಾಯಿ ಬೂದಿಹಾಳಿಂದ ಪಕ್ಕದಮನೆ ಕಾವೇರಮ್ಮನ ವಿಳಾಸಕ್ಕೆ ಬರೆಯುತ್ತಾಳೆ ನಾನು ಅವರ ಮೂಲಕವೇ ಉತ್ತರ ಬರೆಯುತ್ತೇನೆ ಕನ್ನ ಹಾಕು ಅಂತ ಕಳ್ಳನಿಗೆ ಹೇಳಿಕೊಡುವವರು ನಾವೇ ಅಲ್ಲವೆ? ಬಾಗಿಲು ತೆರೆದು ಮಲಗಿದರೆ, ಗೋಡೆಯನ್ನ ಯಾಕೆ ಸುಮ್ಮನೆ ಅವನು ಹಾಳುಮಾಡ

ಬೇಕು? ನಾನೂ ಸಹಿಸುವಷ್ಟು ದಿವಸ ಸಹಿಸಿದೆ ಚಿನ್ನದ ಸವರನನ್ನೇ ಭಸ್ಮಮಾಡಿದವರಿಗೆ ಕಾಗದ ಉರಿಸುವುದು ಅಂದರೆ ಕಷ್ಟವೇ, ಅಂತ ಅಂದು ನೋಡಿದೆ. ಸುಂಕದವರ ಹತ್ತಿರ ಸುಖ ದುಃಖ ಹೇಳಿಕೊಂಡ ಹಾಗೆಯೇ, ಅಂತ ಅಂದು ನೋಡಿದೆ ಇವರೋ, "ತಾಯಿ ಅಂದರೆ ದೇವರು ಅಂತ ಯಾವುದೋ ಉಪನಿಷತ್ತಿನಲ್ಲಿ ಹೇಳಿದೆ," ಅಂದುಬಿಡುತ್ತಾರೆ, ಘೋರ ಕೋಪ ಬಂದರೆ, "ಹೆಂಡತಿ ಬೇರೊಬ್ಬಳು ಸಿಗಬಹುದು, ತಾಯಿ ಬೇರೆ ಸಿಗುವುದಿಲ್ಲ" ಅಂದುಬಿಡುತ್ತಾರೆ, "ಉಸ್ಸಪ್ಪ ಅಂತ ಆಫೀಸಿನಿಂದ ಬಂದರೆ, ನೀನು ಬೇರೆ ಬುಸುಗುಟ್ಟುತ್ತೀಯಾ", "ನಾನು ಸನ್ಯಾಸ ತೆಗೆದುಕೊಂಡುಬಿಡುತ್ತೇನೆ" "ಆಂಜನೇಯ ಆಜನ್ಮ ಬ್ರಹ್ಮಚಾರಿ" ಅಂತ ಪ್ರಾರಂಭಿಸಿಬಿಡುತ್ತಾರೆ ಈ ಹುತ್ತದೊಳಕ್ಕೆ ಸೇರಿಕೊಂಡಮೇಲೆ ನಾನು ಬುಸುಗುಟ್ಟದೆ ಇದ್ದರೆ ಹೇಗೆ?

ಆದರೂ, ಗಂಡಸರು ಹೆಂಗಸರಿಗೆ ಕೊಡುವಷ್ಟಕ್ಕಿಂತ ಹೆಚ್ಚಾಗಿ, ಗಂಡಸರು ಗಂಡಸರಿಗೆ ಕೊಡುವಷ್ಟಕ್ಕಿಂತ ಹೆಚ್ಚಾಗಿ, ಹೆಂಗಸರು ಹೆಂಗಸರಿಗೆ ಪೀಡೆಯನ್ನೀಯುತ್ತಾರೆ ಇದು ನನ್ನ ಅನುಭವ, ಕಾವೇರಮ್ಮನದೂ ಅಷ್ಟೆ ಸ್ವಜಾತಿವೈರ ಹೆಂಗಸರಲ್ಲೇ ಜಾಸ್ತಿ ಅಂತ ಅವಳೂ ಹೇಳುತ್ತಾಳೆ ನಮ್ಮೂರಲ್ಲಿ ಸೊಗಸಾದ ಹೆಣ್ಣುಮಕ್ಕಳ ಶಾಲೆ ಇದೆ ಅವೀಲ್ದಾರರೇ ತಮ್ಮ ಮಗಳನ್ನ ಕಳುಹಿಸದೆ ಇದ್ದರೆ ಹೇಗೆ? ಅವರೇ ಅಲ್ಲವೆ ತಾಲ್ಲೋಕಿಗೆ ತಂದೆ? ಅಂತ ಯಾರು ಯಾರೋ ದೊಡ್ಡದೊಡ್ಡವರೆಲ್ಲ ಸೇರಿ ಹೆಡ್‌ಮೇಡಂ ಸಂಗಡ ನಮ್ಮ ಮನೆ ಬಾಗಲಿಗೆ ಬಂದಿದ್ದರು. ಸರಿ, ನಾನು ಸ್ಕೂಲಿಗೆ ಸೇರಿದೆ ಅಲ್ಲೊಬ್ಬರೇ ಒಬ್ಬರು ಮೇಷ್ಟರು, ಉಳಿದವರೆಲ್ಲ ಹೆಂಗಸರು ಅವರು, ಪಾಪ, ಗಿಣಿಗಳಿಗೆ ಹೇಳಿಕೊಡುವ ಹಾಗೆ ನಮಗೆ ಸಂಗೀತ ಹೇಳಿಕೊಡುವರು ಮೇಡಮ್ಮುಗಳು ಮಾತ್ರ, ಸರ್ಕಸ್ಸಿನಲ್ಲಿ ಹುಲಿಗಳಿಗೆ ಕಲಿಸುತ್ತಾರಲ್ಲಾ, ಕೈಯಲ್ಲಿ ಸದಾ ಚಾವಟಿ ಹಿಡಿದು ಕಣ್ಣುರುಳಿಸಿಕೊಂಡು, ಹಾಗೆ! ಅವರಿಗೆ ಕೋಪ ಸದಾ ಮೂಗುಬೊಟ್ಟಿನ ತುದಿಯಲ್ಲೇ ಕೂತಿರುತ್ತದೆ. ಇವರ ಹತ್ತಿರ ಕೇಳಿದೆ ನಾನು? ಆವರೂನೂ 'ಹೌದು' ಅಂತಾರೆ ಸೀಮೆಯಲ್ಲಿ ಹೆಂಗಸರಿಗೆಲ್ಲ ವೋಟುಕೊಟ್ಟಾಗ, ಹೆಂಗಸರೇ ಗಂಡಸರಿಗಿಂತ ಸಂಖ್ಯೆಯಲ್ಲಿ ಹೆಚ್ಚಾಗಿದ್ದರೂ ಕೂಡ, ಬರೀ ಗಂಡಗಂಡಸರೇ ಪಾರ್ಲಿಮೆಂಟಿಗೆ ಆರಿಸಿ ಬಂದಿದ್ದರಂತೆ, ಎಲ್ಲೋ ಅಲ್ಲೊಂದು ಲಂಗ ಇಲ್ಲೊಂದು ಲಂಗ ಕೂತಿ

ತ್ತಂತೆ, ಐನೂರು ಆರುನೂರು ಮೆಂಬರುಗಳ ನಡುವೆ! ಹೆಂಗಸರಿಗೆ ಹೆಂಗಸರ ಮೇಲೆ ನಂಬಿಕೆ ಇರುವುದಿಲ್ಲವಂತೆ! "ಅವಳ ಸೊಟ್ಟ ಮೋರೆ ನೋಡು, ಇವಳ ಸಿಟ್ಟುಮೋರೆ ನೋಡು, ಅವಳು ಸೀರೆ ಉಟ್ಟಿರುವ ಲಕ್ಷಣ ನೋಡು, ಇದು ಯಾವ ಹಳೇ ಕಾಲದ ಮುತ್ತೈದೆ? ಯಾಕೆ, ಇವಳು ಸಿನಿಮಾಗೆ ಸೇರಿದಾಳೇನು?" ಅಂತ ಒಬ್ಬರನ್ನೊಬ್ಬರು ಟೀಕಿಸಿ ಒಬ್ಬರ ಮೇಲೊಬ್ಬರು ಕಿಲುಬು ಕಾರಿ ಮನಸ್ಸು ಕೆಡಿಸಿಕೊಳ್ಳುತ್ತಾರೆ" ಅಂತ ಕಾವೇರಮ್ಮ ಹೇಳುತ್ತಾಳೆ. ಅವಳು ನಾಲ್ಕಾರು ಸಮಾಜ ಸದನ ತಿರುಗಿದಾಳೆ. ನನಗೆ ಗೊತ್ತಿರುವುದು ಇದೊಂದೇ ದಂಡಕಾರಣ್ಯ. ಆದರೂ, ಇಷ್ಟು ಮಾತ್ರ ಸರಿ ಅಂತ ನನಗೂ ತೋರುತ್ತೆ. ಗಂಡಸರು ಅವಮಾನವಾದರೆ ಒರಸಿಕೊಂಡು ಬಿಡುತ್ತಾರೆ, ಕೋಪ ಬಂದರೆ ನುಂಗಿಬಿಡುತ್ತಾರೆ ಆದರೆ ಹೆಂಗಸರದು ಬಲು ಕೋಮಲವಾದ ಚರ್ಮ, 'ಏನೇ!' ಅಂತ ಸ್ವಲ್ಪ ಸೊಟ್ಟಗೆ ಅಂದರೂನೂ ಅವರಿಗೆ ಚುಚ್ಚುತ್ತೆ ಅವರಿಗೆ ಹಠ ಜಾಸ್ತಿ ನಾನು ನನ್ನದು ನಮ್ಮವರು ಎಂಬ ಮಮತೆ ಹೆಚ್ಚು ಅವರು ಯಾವುದನ್ನೂ ಮರೆಯುವುದೇ ಇಲ್ಲ ಸಾಮಾನ್ಯವಾಗಿ ಅವರು ಗಂಡಸರಿಗಿಂತ ಹೆಚ್ಚು ವಾಚಾಳಿಗಳು ಉಪನ್ಯಾಸ ಕೊಡುವಾಗ ಪದ ಸಂಪತ್ತು, ಮಾತಿನ ವೇಗ, ನಟನ ಸಾಮರ್ಥ್ಯ, ಇವೆಲ್ಲದರಲ್ಲೂ ಅವರು ಗಂಡಸರನ್ನು ಮೀರಿಸುವರು ಅಲ್ಲದೆ, ಅವರು ಅಂತರ್ಮುಖಿಯರು, ಗಂಡಸರ ಹಾಗೆ ಬಹಿರ್ಮುಖಿಗಳಲ್ಲ ಆದ್ದರಿಂದ ಸದಾ ತಮಗಾದ ಮಾನಾವಮಾನಗಳನ್ನೇ ಮೆಲಕುಹಾಕುತ್ತಾ ಮಲಗಿರುತ್ತಾರೆ. ಗಂಡಸು ನೂರಾರು ಪೆಟ್ಟು ತಿಂದು ಒಂದು ವಿಗ್ರಹವಾಗಬಹುದು, ಆದರೆ, ಹೆಣ್ಣು ಮಾತ್ರ ಎಷ್ಟು ಪೆಟ್ಟು ತಿಂದರೂ ಗಡುಸಾದ ಬಂಡೆಯಾಗಿಯೇ ಉಳಿಯುತ್ತದೆ, ಅಂತ ನಮ್ಮತ್ತೆ ನಮ್ಮಜ್ಜಿ ಇವರ ಸಂಪರ್ಕದಿಂದ ಬಂದ ಅನುಭವದ ಮೇಲೆ ನಾನು ಧೈರ್ಯವಾಗಿ ಹೇಳಬಲ್ಲೆ ಇವರನ್ನೂ ನೋಡಿ ನೀವು, ಅವರನ್ನೂ ನೋಡಿ ಇವರು ದಿನದಿನಕ್ಕೂ ಹಣ್ಣಾಗುತ್ತಿದಾರೆ; ಅವರು ದಿನದಿನಕ್ಕೂ ಹುಳಿಯಾಗುತ್ತಿದಾರೆ!

ಇಷ್ಟೆಲ್ಲ ಮಾತು ಯಾಕೆ ಬಂತೀಗ? ಓ! ನಮ್ಮಪ್ಪನ ಕಾಗದ... ಹುಂ... ಕಾವೇರಮ್ಮನ ವಿಳಾಸಕ್ಕೆ ಬಂದ ಕಾಗದದಿಂದ ನನಗೆ ಕಣ್ಣಿಗೆ ಕೊಂಚ ನಿದ್ದೆ ಹತ್ತುತ್ತಿದೆ ಪಂಢರಾಪುರದಿಂದ ನಮ್ಮಪ್ಪ ಡಿಲ್ಲಿಗೆ ಹೊರಟರಂತೆ

ಅಲ್ಲಿಂದ ಮುಂದಕ್ಕೆ ಎಲ್ಲಿಗೋ ಹೋಗಿ ಇವರ ಸೋದರ ಮಾವಂದಿರು ಮೂರು ಜನ ಇದ್ದಾರಂತಲ್ಲಾ ಕಬ್ಬಿಣದ ಕಾರ್ಖಾನೆ, ಟಾಟಾ ಕಂಪನಿ, ಅಲ್ಲಿ ಸೇರಿ ಕೊಂಡಿದ್ದಾರಂತೆ ಮೈಸೂರಿನವರು ಅಂದರೆ ಅವರು ತುಂಬಾ ಪ್ರೀತಿಯಿಂದ ಬರಮಾಡಿಕೊಂಡು ಮ್ಯಾನೇಜರಿಗೆ ಹೇಳಿ ಸಂಬಳ ಮಾಡಿಸಿಕೊಟ್ಟರಂತೆ ಬೂದಿ ಹಾಳಿಗೆ ಮೂವತ್ತೋ ನಲವತ್ತೋ ಕಳುಹಿಸುತ್ತಾರಂತೆ. ಈ ಸಮಾಚಾರವೇನಾದರೂ ನಮ್ಮತ್ತೆ ಕಿವಿಗೆ ಬಿತ್ತೋ, ಆಯಿತು, ಸೂರು ಮುರಿಯುವ ತನಕ ಹಾರಾಡಿ ಬಿಡುತ್ತಾರೆ ಆ ಮುದುಕಿ ಕಿವುಡಾದ ಮೇಲೆ ಹಾಗೆ ಮಾಡದೆ ವಿಧಿಯೇ ಇಲ್ಲವಾಗಿದೆ, ಅವರಿಗೆ ಕೂತಕಡೆ ನಿಂತಕಡೆ ಒಟಗುಟ್ಟುತ್ತಾ ಇದ್ದರೆ, ಅಕೆಗೆ ಅರ್ಥವಾಗುವುದಿಲ್ಲವಲ್ಲಾ, ಸೊಸೆ ರೇಗಿ ದ್ದಾರೆ, ಅಂತ! ಆದ್ದರಿಂದ ಹಾರಾಡಿ ತೂರಾಡಿ ನಟರಾಜನ ತಾಂಡವವನ್ನೆಲ್ಲ ನೃತ್ಯದಲ್ಲೇ ತೋರಿಸುತ್ತಾರೆ ಅದನ್ನ ನೋಡಿ ನಗುತ್ತಾ ಸಿನಿಮ ತೆಗೆದರೆ ಚೆನ್ನಾಗಿರುತ್ತೆ, ಅಲ್ಲವೇನೆ, ಅಂತ ಇವರು ಹೇಳುತ್ತಾರೆ ನನಗೆ, 'ಆಕೆ ಹತ್ತಿರ ಹೇಳಿ' ಅಂದರೆ, "ಮಾತೃದೇವೋ ಭವ, ಶಾಂತಂ ಪಾಪಂ" ಅಂತ ಸುಮ್ಮನಾಗುತ್ತಾರೆ ತನ್ನ ತಮ್ಮಂದಿರು ಸನ್ನ ತಂದೆಗೆ ಕೆಲಸ ಕೊಡಿಸಿ ಕೊಟ್ಟರು, ಅವರು ಈಗ ಅಲ್ಲೇ ಇದ್ದಾರೆ, ಅಂದರೆ ನಮ್ಮತ್ತೆ "ವಿಟ್ಠಲ ವಿಟ್ಠಲ" ಅಂತ ನನ್ನನ್ನ ತಿವಿಯುವುದನ್ನ ನಿಲ್ಲಿಸಿಬಿಡುತ್ತಾರೆ, ಖಂಡಿತ, ಆದರೆ, ಆಕೆ ದೇವರ ಹೆಸರು ಹೇಳುವುದನ್ನ ನಾನು ಯಾಕೆ ನಿಲ್ಲಿಸಬೇಕು? ಹೇಳಿಕೊಳ್ಳಲಿ ನಮ್ಮಪ್ಪ ಈಗ ಅಲ್ಲಿ ಇಲ್ಲದೆ ಇರುವುದರಿಂದ ನನಗೇನೂ ತಾಕುವುದಿಲ್ಲ! ಇವರಿಗೂ ಹೇಳಿದೇನೆ, ಬಾಯಿ ಬಿಡಬೇಡಿ, ಸದ್ಯ, ಅಂತ ಆದರೂ ನಂಬಿಕೆ ಇಲ್ಲ ಇದೊಂದು ಕಷ್ಟ ನನಗೆ, ಯಾವುದನ್ನೂ ಇವರ ಹತ್ತಿರ ಹೇಳದೆ ಗೋಪ್ಯವಾಗಿ ಇಟ್ಟುಕೊಂಡಿರುವ ಹಾಗೆಯೇ ಇಲ್ಲ ಒಳ್ಳೆ ಮಾತು ನಾಲ್ಕು ಆಡಿಬಿಟ್ಟರೆ ಸರಿ, ಮನಸ್ಸಿನಲ್ಲಿರುವುದೆಲ್ಲ ಕೋಡಿ ಹರಿಯುತ್ತೆ ಕಾವೇರಮ್ಮನ ಹತ್ತಿರ ಏನೇನು ಹೇಳಿ ಬಿಟ್ಟಿದೇನೋ, ದೇವರೇ ಬಲ್ಲ ಸಾಳೆ ನಮ್ಮತ್ತೆ, "ಬಾ ಅಮ್ಮ! ಕೂತುಕೊ! ಎಷ್ಟು ಬಡವಾಗಿ ಬಿಟ್ಟಿ ದೀಯಾ ನೀನು? ಒಂದು ಮಿಳ್ಳೆ ತುಪ್ಪ ಹೆಚ್ಚಾಗಿ ಹಾಕಿಸಿಕೊಳ್ಳಬಾರದೇನೇ" ಅಂತ ಹೇಳಿದರೆ, "ನಮ್ಮಪ್ಪ ಈಗ ನಿಮ್ಮ ತಮ್ಮಂದಿರ ಹತ್ತಿರ ಇದ್ದಾರೆ" ಅಂತ ಒದರಿದರೂ ಒದರಿದೆ ಅಂಥಾ ಹಾಳು ಮನಸ್ಸು, ನನ್ನದು!

ಮುಖ್ಯವಾಗಿ ನಮ್ಮ ಮನಸ್ಸು ಹಂಬಲಿಸುವುದು ಯಾತಕ್ಕೆ? ಮರ್ಯಾದೆಯಿಂದ ಪ್ರೀತಿಯಿಂದ ಆಡುವ ಒಂದು ಮಾತಿಗೆ, ಅಲ್ಲವೆ? ಆದರೆ, ನನ್ನ ಅದೃಷ್ಟವೂ ಅಷ್ಟೆ, ಇವರ ಅದೃಷ್ಟವೂ ಅಷ್ಟೆ! ಅತ್ತೆ ಹೀಗೆ ಅಂದರು ಅಂತ ನಾನು ರಾತ್ರಿ ಇವರ ಕಿವಿಯಲ್ಲಿ ಪಿಸುಗುಟ್ಟಿದರೆ, "ಅಯ್ಯೋ! ನನ್ನನ್ನಿವತ್ತು ಸಾಹೇಬರು ಯದ್ವಾ ತದ್ವಾ ಬೈದುಬಿಟ್ಟರು ಕಣೆ! ಕುಡಿದು ಬಂದವರ ಹಾಗೆ ರೇಗಿಬಿಟ್ಟರು, ಕುಡಿದೂ ಇರಲಿಲ್ಲ" ಅಂತ ನಿಟ್ಟುಸಿರು ಬಿಡುತ್ತಾರೆ ಕಡೆಗೆ ಇಬ್ಬರೂ ಕತ್ತಲಲ್ಲೇ ಕಣ್ಣೊರಸಿಕೊಂಡು ನಿದ್ದೆ ಇಲ್ಲದೆ ಕೊರಗುವೆವು ಇನ್ನೇನೂ ಬೇಡ, ತನ್ನನ್ನ ಯಾರಾದರೂ ಹೀಗಂದರೆ ತನ್ನ ಮನಸ್ಸಿಗೆ ನೋವಾಗುವುದಿಲ್ಲವೆ, ಅಂತ ಅವರು ನೋಡಿಕೊಂಡರೆ ಸಾಕಾಗಿದೆ "ಒಂದು ಕೊಡ ನೀರು ತರುತ್ತೀಯಾ, ಅಮ್ಮಾ!" ಅಂದರೆ ನಾನು ಇಡೀ ಬಾವಿಯನ್ನೇ ಹಂಡೆಗೆ ತುಂಬಿಬಿಡುವೆ ಆದರೆ, "ನೀನೊಂದು ಕೊಡ ನೀರು ತಂದು ತಲೆ ಮೇಲೆ ಸುರಿಯದೆ ಇದ್ದರ ಇಲ್ಲಿ ಯಾರ ಹೆಣವೂ ಆಚೆ ಹೊರಡದೆ ಬಿದ್ದಿರುವುದಿಲ್ಲ" ಅಂದರೆ, ಕೂತಿದ್ದ ಹಾಗೆಯೇ ಎತ್ತಿ ಬಾವಿಯೊಳಕ್ಕೆ ತಳ್ಳಿ ಬಿಡೋಣ ಅನ್ನುವಷ್ಟು ಕೋಪ ಬರುತ್ತೆ, ಅಲ್ಲವೆ? ಪುರಾಣಕ್ಕೆ ಹೋಗುತ್ತಾರಲ್ಲಾ ಅವರು, ಯಾವ ಪುಣ್ಯಾತಿಗಿತ್ತಿ, ಹೀಗೆ ನಾಲಿಗೆಯಲ್ಲಿ ಕೆಸರು ತುಂಬಿಕೊಳ್ಳುತ್ತಾಳೆ ಹೇಳಲಿ! ಇದೊಂದು ಕೆಟ್ಟ ಅಭ್ಯಾಸ ಕಾವೇರಮ್ಮನ ಅತ್ತೆಗೂ ಪ್ರಾರಂಭವಾಗಿದೆಯಂತೆ, ಹಾಳು ರೋಗ ಅಲ್ಲಾ ಆಡಿದ್ದನ್ನೆಲ್ಲಾ ಹಾಡು ಹೇಳುತ್ತಾ ಮಾಡುವವರು ನಾವಿರುವಾಗ, ದಡಿ ಹಿಡಿದುಕೊಂಡು ಹೆದರಿಸಿದರೆ, 'ಬಿಡಿ' ಅಂತೇವೆ, ಅಷ್ಟೆ ನಮಗೇನು? ತಲೆನೋವು ಅಂತೇವೆ! ತವರು ಮನೆ ಅಂತೇವೆ! ತಡಿಯಿರಿ ಅಂತೇವೆ!

ನಮಗಿಂತ ಇಪ್ಪತ್ತು ವರ್ಷ, ನಲವತ್ತೈದು ವರ್ಷ ಹಿಂದೇನೆ ಹುಟ್ಟಿದರು ಅಂತ ನಾನು ಅವರಿಬ್ಬರನ್ನೂ ತಲೆ ಮೇಲೆ ಕೂರಿಸಿಕೊಂಡು ತಿರುಗಾಡಬೇಕೆ? ನನ್ನನ್ನ ಅವರೇ ಸೊಂಟ ಮುರಿದು ಮೂಲೆಯಲ್ಲಿ ಕೂರಿಸಿರುವಾಗ ನಾನು ಅವರನ್ನ ತಲೆ ಮೇಲೆ ಕೂರಿಸಿಕೊಳ್ಳುವುದು ತಾನೆ ಹೇಗೆ? ಬೀದಿಯಲ್ಲಿ ಮೆರವಣಿಗೆ ಮಾಡಿಸುವುದು ಹೇಗೆ? ಮನೆಯಲ್ಲಿ ಪರಸ್ಪರ ಮರ್ಯಾದೆ ಪ್ರೀತಿ ಇದ್ದರೆ ಘಮಘಮ ಅಂತ ಪರಿಮಳದ ಗಾಳಿ ಬೀಸಿದ ಹಾಗೆ! ಕೆಟ್ಟ

ಮಾತು ಆಡಬೇಕ, ಅಂತ ತೋರಿದಾಗ ಅದನ್ನು ನುಂಗಿ, ಒಳ್ಳೆಯದನ್ನು ಆಡಿದರೆ, ಆದೀಗ ಅವರು ಪುರಾಣ ಕೇಳಿದ್ದಕ್ಕೆ ಸಾರ್ಥಕ.. ಅಲ್ಲವೆ? ಇವರು ನನ್ನನ್ನು ಮದುವೆಯಾದದ್ದೇ ನನಗೆ ಮಹದುಪಕಾರವಂತೆ! "ಇಲ್ಲದಿದ್ದರೆ, ಇವಳು ಒಂಟಿಯಾಗಿ ಜಾತಿ ಕೆಟ್ಟು, ಬೀದಿಭಿಕಾರಿಯಾಗಿ ಅಲೆಯುತ್ತಿದ್ದಳ, ನನಗೆ ಗೊತ್ತಿಲ್ಲವೆ" ಅಂತ ನಮ್ಮತ್ತೆ ಆಗಾಗ ಕೂಗಾಡುತ್ತಾರೆ ಇದೊಂದು ಜಂಬ ಗಂಡು ಹೆತ್ತವರಿಗೆ ನಾನೂ ಒಂದು ಗಂಡು ಹೆತ್ತಿದ್ದೇನಲ್ಲ, ಇರಲಿ ಯಾವುದೋ ಜನ್ಮಾಂತರದ ಋಣಾನುಬಂಧದಿಂದ ಈ ಜನ್ಮದಲ್ಲಿ ಗಂಡ ಹೆಂಡತಿ ಅಂತ ಒಂದೇ ಒಂದು ನೊಗಕ್ಕೆ ಇಬ್ಬರು ಕತ್ತೊಡ್ಡುತ್ತಾರೆಯೆ ಹೊರತು 'ಇವಳನ್ನು ನಾನು ಉದ್ಧಾರಮಾಡಿದೆ' 'ಇವರಿಂದ ನಾನು ಬದುಕಿದೆ' ಅಂತ ತಿಳಿದುಕೊಳ್ಳುವುದು ಶುದ್ಧ ತಪ್ಪು ಅಂತ ನನಗನ್ನಿಸುತ್ತದೆ- "ನನ್ನ ಮಗ ಹೆಣ್ಣು ನೋಡಲೇ ಇಲ್ಲ ಹೋಗಿ ನೋಡೋ ಅಂದರೆ, ಬೇಡಲೇ ಬೇಡ ಅಂದುಬಿಟ್ಟ," ಅಂತ ಕೂಗಾಡುತ್ತಾರಲ್ಲಾ, ಇವರ ಮಗಳೇನು ರತೀದೇವಿಯೆ? ಆ ಪುರುಷಗರ್ಭದ ಗಂಡನಿಗೆ ತಕ್ಕ ಪುರುಷಾಮೃಗ ಅದು! ಗಂಡಸು ಮಾತ್ರ ಈ ಹುಡುಗಿ ಚೆನ್ನವೋ ಆ ಹುಡುಗಿ ಚೆನ್ನವೋ ಅಂತ ಮನೆಮನೆ ತಿರುಗುತ್ತಾ ರೂಪು ನೋಡಿ ಹಲ್ಲು ಕಿರಿದರೆ, ಹೆಣ್ಣಿಗೆ ಮಾತ್ರ ಕಣ್ಣಿಲ್ಲವೇನು? ಮಗನ ಲಕ್ಷಣ ಏನು ಅಂತ, ಗೊತ್ತಿರುವವರು ಸೊಸೆ ಲಕ್ಷಣವನ್ನು ಕುರಿತು ಚರ್ಚಿಸುವುದೇ ಇಲ್ಲ ಮದನನಿಗೆ ರತಿಯೇ ಹೊರತು, ದನನಿಗೆ ರತಿ ಸಿಗುತ್ತಾಳೆಯೇ? ಪಾಲಿಗೆ ಬಂದದ್ದನ್ನೇ ಪತಿ ಅಂತ ಪರಿಪಾಲಿಸಿಕೊಂಡು ಈ ಜನ್ಮ ಸಾಗಿಸಿದರೆ, ಮುಂದಿನ ಜನ್ಮದಲ್ಲಾದರೂ ಇದೇ ಗಂಡು, ಇನ್ನೂ ಹೆಚ್ಚಿನ ರೂಪು ಲಾವಣ್ಯ, ಅಂತಸ್ತು ಅಧಿಕಾರ, ಸಿದ್ಧಿ ಬುದ್ಧಿ ಸಹಿತವಾಗಿ ಅವತಾರ ಎತ್ತಿ, ನಾನು ಎಲ್ಲಿ ಹುಟ್ಟಿದ್ದರೂ ನನ್ನನ್ನೇ ಹುಡುಕಿಕೊಂಡು ಬಂದು ಕೈ ಹಿಡಿಯುತ್ತದೆ ಖಂಡಿತ! ಈ ಸಲ ವಿಧುರಾಶ್ವತ್ಥದ ಕೆಳಗೆ ಕಾಣಿಸಿತು; ಮುಂದಿನ ಜನ್ಮದಲ್ಲಿ ಇವರೇ ಹೇಳಿದರು ಮೊನ್ನೆ, ಅದೆಂಥದ್ದು ಬೋಧಿ ವೃಕ್ಷದ ಕೆಳಗಂತೆ!... ಅದೆಲ್ಲಿದೆಯೋ, ಗೊತ್ತಿಲ್ಲ, ನನಗೆ.. ಹಾಗೆಯೇ, ಗಂಡಸರಿಗೂ! ಕೈ ಹಿಡಿದವಳನ್ನ ಬಿಡದೆ ಇದ್ದರೆ ಕೈವಲ್ಯ, ಮುಂದಿನ ಜನ್ಮದಲ್ಲಿ ತಾನು ಮಾರ, ಆಕೆ ಮಾರಿ!

ಪರಂಗಿ ಹೆಂಗಸರಿಗೆ ಈ ಬಗೆಯ ಆಶ್ವಾಸನವಿಲ್ಲ, ಪಾಪ. ಅವರ ಜನ್ಮಾಂತರವನ್ನು ನಂಬುವುದಿಲ್ಲವಂತಲ್ಲಾ! ಆದ್ದರಿಂದ ಈ ಜನ್ಮದಲ್ಲೇ ಅವರು ರೂಪ ಲಾವಣ್ಯ ಎಲ್ಲವನ್ನೂ ಹೊಂದಿರುವ ಪತಿಯರನ್ನು ಪಡೆಯಬೇಕು. ಅದಕ್ಕೇ ಅವರಲ್ಲಿ ವಿವಾಹ ವಿಚ್ಛೇದನ ಹೆಚ್ಚು. ಪರಂಗಿ ಗಂಡಸರೂ ಇದಕ್ಕಾಗಿಯೇ ಸೋಡ ಚೀಟಿಗಳನ್ನು ಅಷ್ಟು ಹೇರಳವಾಗಿ ಹಾರಾಡಿಸುವುದು.

ಆ ಮೇಲೆ ಇನ್ನೊಂದು! ಹೆಣ್ಣು ಮನೆಗೆ ಬಂತು ಅಂದರೆ ಸರಿ, ಅಲ್ಲಾಗುವ ಸಾವು ನೋವು, ಸಾಲಸೋಲು ಎಲ್ಲವೂ ಅವಳಿಂದಲೇ ಅಂತೆ! ಮದುವೆಗೆ ಮೊದಲು ಕಣ್ಣಿಗೆ ಎಣ್ಣೆ, ಕೈಗೆ ದಕ್ಷಿಣೆ ಇಟ್ಟುಕೊಂಡು ಕೂತುಕೊಳ್ಳುತ್ತಾರೆ, ಮಹಾ ಮಹಾ ಪಂಡಿತರು ಜಾತಕ ತರಿಸುತ್ತಾರೆ, ನೋಡುತ್ತಾರೆ ಯಾರು ಯಾರು ಯಾವ ಮನೆಯಲ್ಲಿದ್ದಾರೆ, ಎಲ್ಲೆಲ್ಲಿಗೆ ದೃಷ್ಟಿ ಬೀರಿದ್ದಾರೆ, ಗಂಡಿನ ಜಾತಕದಲ್ಲಿ ಕೆಟ್ಟ ಯೋಗವಿದ್ದರೆ ಅದಕ್ಕೆ ಸರಿಯಾಗಿ ಅದೇ ಕಾಲದಲ್ಲಿ ಒಳ್ಳೆ ಯೋಗವಿರುವ ಹೆಣ್ಣಿನ ಜಾತಕವನ್ನೇ ಆರಿಸುತ್ತಾರೆ, ಆ ಮೇಲೆ, 'ಪ್ರಶಸ್ತವಾಗಿದೆ' 'ಅತ್ಯುತ್ತಮವಾಗಿದೆ' 'ಭಲೆ! ಭಲೆ' ಭುಜ ತಟ್ಟಿಕೊಳ್ಳುತ್ತಾರೆ ಗಂಡಿಗೂ ಹೆಣ್ಣಿಗೂ ಸರ್ವಮಂಗಳಗಳನ್ನೂ ಕೊಡುವ ಲಗ್ನವಿಡುತ್ತಾರೆ ಪುಣ್ಯಕ್ಷೇತ್ರಗಳಲ್ಲೇ ವಿವಾಹಕಾರ್ಯ ನಡೆಸುತ್ತಾರೆ . ಒಳ್ಳೆ ಮುಹೂರ್ತದಲ್ಲಿ ಹೆಣ್ಣನ್ನು ಮನೆಗೆ ತರುತ್ತಾರೆ .... ಆ ಮೇಲೆ, ಮನೆಯಲ್ಲಿ ಗಾಜಿನ ಗಲಾಸ್ ಒಡೆಯಿತು ಅಂದರೆ, ಸೊಸೆ ಬಂದ ಹೊತ್ತು, ಒಂದು ಎಮ್ಮೆ ಒದೆಯಿತು, ಅಂದರೆ ಸೊಸೆ ಹೊಸಲು ದಾಟಿದ್ದರಿಂದ, ಒಂದು ಪರೀಕ್ಷೆ ಹೋಯಿತು ಅಂದರೆ, ಅವಳ ಗ್ರಹಚಾರ, ಒಂದು ಸಾವು ಒಂದು ಸಂಕಟ, ಎಲ್ಲಕ್ಕೂ ಅವಳೇ ಹೊಣೆ! ಸತ್ತವರ ಹೆಂಡತಿ ತಾಳ ಗಟ್ಟಿಯಾಗಿರಲಿಲ್ಲ ಅಂತ ಯಾರೂ ಹೇಳುವುದಿಲ್ಲ, ಸೊಸೆ ನಕ್ಷತ್ರ ಸೊಟ್ಟಾಗಿತ್ತಂತೆ ಈ ನ್ಯಾಯಕ್ಕೆ ನಗಬೇಕೆ, ಅಳಬೇಕೆ? ಇವರೇನು? "ಸುಮ್ಮನಿರೆ!" ಅಂದುಬಿಡುತ್ತಾರೆ ಮೂರು ಹೊತ್ತೂ ಈ ಕಾಸಿದ ಸೀಸವನ್ನು ಕಿವಿಗೆ ಸುರಿಸಿಕೊಂಡು ಸೀದು ಹೋಗುತ್ತಿರುವುದು ನಾನು ತಾನೆ?.... ಸೊಸೆಯರಿಗೆಲ್ಲ ಮೂಗು ಚುಚ್ಚುವುದಕ್ಕೆ ಬದಲಾಗಿ ಕಿವಿ ಚುಚ್ಚಿಬಿಟ್ಟರೆ ವಾಸಿ, ಅನ್ನಿಸುತ್ತೆ ನನಗೆ, ಅನೇಕ ವೇಳೆ

ನಾನು ಈ ಮನೆಗೆ ಬಂದು ಒಂದು ವರ್ಷವಾಗಿತ್ತು ಅಂತ ಕಾಣುತ್ತೆ. ಮಾವನವರು ತೀರಿಕೊಂಡರು ಅದು ನನ್ನ ತಪ್ಪೋ, ನಮ್ಮತ್ತೆ ಜಾತಕ ತಲೆ

ಕೆಳಗಾದುದರತಪ್ಪೋ? ನೀವೇ ಹೇಳಿ ಅಶುಭವೆಲ್ಲವನ್ನೂ ಸೊಸೆತಲೆಗೆ ಕಟ್ಟುವಹಾಗೆ, ಶುಭವನ್ನೂ ಮಾಡಬಾರದೆ? ಊಹೂಂ ಅದು ಅವರವರ ಪುಣ್ಯ ಇವರು ನಾನು ಬಂದ ಮೇಲೆ ಅಕೌಂಟ್ಸ್ ಪಾಸುಮಾಡಿದರು ಹೆಚ್ಚು ಓದದೆಮಾಡದೆ ಕ್ರಿಮಿನಲ್‌ನಲ್ಲೂ ಚೆನ್ನಾಗಿ ಪಾಸ್‌ಮಾಡಿದರು ಹೆಡ್ ಗುಮಾಸ್ತೆ ಕೆಲಸ ಸಿಕ್ಕಿತು ಪುತ್ರಸಂತಾನವಾಗಿ ಇವರ ಕುಲಕೋಟಿ ಎಲ್ಲ ಉದ್ಧಾರವಾಯಿತು ಅವೆಲ್ಲ ಅವರ ಪುಣ್ಯವಂತೆ ನನ್ನಲೆಕ್ಕಕ್ಕೆ ಅವ್ಯೊಂದೂ ಜಮಾ ಆಗುವುದಿಲ್ಲ ನನ್ನ ಹೆಸರಿನಲ್ಲಿ ಇವರು ಒಂದು ಲಾಟರಿಗೆ ಮೂರು ರೂಪಾಯಿಕೊಟ್ಟು ಒಂದು ಟಿಕೀಟ್ ತೆಗಿದುಕೊಂಡಿದ್ದರು, ಯಾರದೊ ಬಲ ವಂತಕ್ಕೆ ಇವರಾಗಿ ಅಂಥದ್ದು ಯಾವುದಕ್ಕೂ ಹೋಗುವುದೇಇಲ್ಲ, ಅನ್ನಿ ಕಂಡವರ ಕಾಸಿಗೆ ಆಸೆಪಡಬಾರದು, ಹಾಲುಕುಡಿದ ಮಕ್ಕಳಿಗೇನೆ ಲಿವರ್ ಬಂದುಬಿಡುತ್ತದೆ, ಇನ್ನು ವಿಷಕುಡಿದರೆ ಅಂತ ಸಲ ಸಲಕ್ಕೂ ಹೇಳು ವರು ಆ ಲಾಟರಿಯಲ್ಲಿ ನಾವುಕೊಟ್ಟ ಮೂರುರೂಪಾಯಿಗೆ ಬದಲು ಯಾರು ಯಾರೋ ಕೊಟ್ಟದ್ದು ಮೂವತ್ತುರೂಪಾಯಿ ಬಂತು .ಮುಗುಕೈಲಿರುವ ಎರಡು ಚಿನ್ನದ ಬಳೇನೂ ಆ ದುಡ್ಡಿನಲ್ಲೇ ಮಾಡಿಸಿದ್ದು ಅದನ್ನೂ ಕೂಡ ಇವರ ಬಡತನದಲ್ಲಿ ಯಾವತ್ತು ಭಸ್ಮಮಾಡುತ್ತಾರೋ? ಸದ್ಯಃ ದೇವರು ಆ ಚೀಟಿಗೆ ಅಷ್ಟುರೂಪಾಯಿ ಕೊಟ್ಟು ನನ್ನ ಜಾತಕ ಉಳಿಸಿದ ಈಗ ಈ ಮನೆಯಲ್ಲಿ ನನ್ನ ಅದೃಷ್ಟದ ಮಾತು ಬಂದಾಗಲೆಲ್ಲ "ಆ ಮಾತು ಅಲ್ಲಿಗೇ ನಿಲ್ಲಿಸಿ! ಇನ್ನಾರ ಹೆಸರು ಹೇಳಿದ್ದರೂ ಒಂದಕ್ಕೆ ಹತ್ತುಲಾಭ ಯಾಕ ತ್ತೂ ಬರುತ್ತಿರಲಿಲ್ಲ" ಅಂದುಬಿಡುವೆ ನನ್ನನ್ನ ಅತೀ ಮುದ್ದುಮಾಡ ಬೇಕಾದರೆ, ಇವರೂ ಅಷ್ಟೆ, ಇವತ್ತಿಗೂ, "ಎಲ್ಲಿ! ನಿನ್ನ ಕೈಕೊಡು! ಭಾಗ್ಯ ರೇಖೆಯಾವುದು ನೋಡೋಣ" ಅನ್ನುವರು ಅದೊಂದು ಆಟವಾಗಿಬಿಟ್ಟಿದೆ ಇವರಿಗೆ ಮನೆಯಲ್ಲಿ!

ನಾನು ಇವರನ್ನ ಎಷ್ಟೋಸಾರಿ ಕೇಳಿದೇನೆ, "ನನ್ನ ವಯಸ್ಸಿನಲ್ಲಿ ನೀವು ಇಷ್ಟು ತಾಪತ್ರಯಕ್ಕೆ ಸಿಕ್ಕಿಕೊಂಡಿದ್ದೀರಾ?" ಅಂತ ಅವರಿಗಿಂತ ನನಗೆ ಆರುವಯಸ್ಸು ಕಡಿಮೆ ನನಗೀಗ ಇಪ್ಪತ್ತೆರಡು ಇಪ್ಪತ್ತೆರಡುವರ್ಷದ ಗಂಡಸಿಗೂ ಅದೇ ಇಪ್ಪತ್ತೆರಡುವರ್ಷದ ಹೆಂಗಸಿಗೂ, ಅನುಭವದಲ್ಲಿ ಎಷ್ಟು ವ್ಯತ್ಯಾಸ! ಯೋಚನೆಮಾಡಿ! ಆತ ಇನ್ನೂ ಸಂತೋಷವಾಗಿ ಸ್ನೇಹಿತ

ರೊಂದಿಗೆ ಅಂಕೆ ಅಂಕುಶ ಏನೂ ಇಲ್ಲದೆ ಹೋಟಲು ಸಿನಿಮಾ ಪಾರ್ಕು ಇತ್ಯಾದಿ ಗಳಲ್ಲೇ ನಿರತನಾಗಿ ಪೇಪರು ಪುಸ್ತಕ ಅಂತ ಓಡಾಡುತ್ತಿರುತ್ತಾನೆ ಅಥವಾ ಆಗತಾನೆ ಪದವೀದಾನ ಮಹೋತ್ಸವದಿಂದ ಹೊರಬಿದ್ದು ಆಯಾಸಪರಿಹಾರ ಮಾಡಿಕೊಳ್ಳುತ್ತಿರುತ್ತಾನೆ ಅವಳು ಆಗಲೇ ಗಂಡನ ಮನೆಯಲ್ಲಿ ಆರು ವರ್ಷದ ಆಯುರ್ಭಾಗವನ್ನು ತೇದಿರುತ್ತಾಳೆ. ಎರಡೋ ಮೂರೋ ಬಾಣಂತನಗಳಾಗಿ ರುತ್ತವೆ ಗಂಡನ ವರಮಾನ ಸಾಲದು, ಸಾಲಕ್ಕೆ ಬೀಳಬಾರದು, ಪದಾರ್ಥಗಳ ಬೆಲೆ ಏರಿದೆ, ಮನೆಯನ್ನು ಭೋಗ್ಯಕ್ಕೆ ಕೊಡಬೇಕು, ಇವೇ ಮುಂತಾದ ಕೋಟಲೆಗಳಿಗೆ ಸಿಕ್ಕಿ ಬೇಸತ್ತು ಆಗಲೇ ಅವಳು ಐವತ್ತು ವರ್ಷದ ಮುದುಕಿ ಆಗಿರುತ್ತಾಳೆ ಸಾಲದ್ದಕ್ಕೆ ಅತ್ತೆ ನಾದಿನಿಯರ ಚಿತ್ರಹಿಂಸೆ, ಓರಗಿತ್ತಿಯರ ಓರೆಗಣ್ಣುಗಳು, ಜುಚ್ಚುಮಾತ, ಹೊಟ್ಟೆಕಿಚ್ಚು ಒಂದು ಭಾರೀ ಸಾಮ್ರಾಜ್ಯದ ಆಡಳಿತದಲ್ಲಿರ ವಷ್ಟು ರಾಜತಂತ್ರವನ್ನು ಆ ಎಳೆ ಹುಡುಗಿ ನಿರ್ವಹಿಸ ಬೇಕಾಗಿ ಬಂದಿರುತ್ತದೆ ಇದನ್ನೆಲ್ಲ ನೋಡಿದರೆ, ಪುಣ್ಯಮಾಡಿ ಪುರುಷ ಜನ್ಮ ಪಡೆಯುತ್ತಾರೆ, ಅಂತ ಹೇಳುವುದು ನಿಜ ಅನ್ನಿಸುತ್ತದೆ ಇವರ ಹತ್ತಿರ ಇದನ್ನೆಲ್ಲ ಹೇಳಿದರೆ, ಇವರೂನೂ "ಹೌದು! ಹೆಣ್ಣು ಜನ್ಮ, ಅಯ್ಯೋ, ಅಯ್ಯೋ!" ಅಂತಾರೆ! ಆದರೆ, ತಮಾಷೆಗೋ ತತ್ವದ ದೃಷ್ಟಿ ಯಿಂದಲೋ ತಿಳಿಯುವುದೇ ಕಷ್ಟ! ಒಂದು ರೀತಿಯಾಗಿ ನಕ್ಕುಬಿಡುತ್ತಾರೆ, ಅದನ್ನು ಹೇಳಿದ ಕೂಡಲೇ ಆ ನಗುವಿನೊಳಗೆ ಏನು ಹುದುಗಿರುತ್ತೋ ಗೊತ್ತಾಗುವುದಿಲ್ಲ

ಕಾವೇರಮ್ಮನನ್ನು ಕೇಳಿದರೆ, ಆಕೆಯೂ ಕೂಡ 'ಹೌದು' ಅಂತಾಳೆ ಆದರೆ, ಅವಳು ಹೇಳುವುದು ಹೆಂಗಸರು ಸ್ವತಃ ಸಂಪಾದನೆಗೆ ತೊಡಗಬೇಕು, ಆಗ ಗಂಡಸರು ಅವರನ್ನು ಇಷ್ಟು ಅಲಕ್ಷ್ಯವಾಗಿ ಕಾಣುವ ಹಾಗಿಲ್ಲ, ಅಂತ ನನಗೇಕೋ ಇದು ಸಂಬೀಳುವುದಿಲ್ಲ ಗಂಡಸರು ಹೆಂಗಸರನ್ನು 'ಅಲಕ್ಷ್ಯ' ಮಾಡುತ್ತಾರೆ ಅಂದರೆ ನಾನೊಪ್ಪುವುದಿಲ್ಲ ಹೆಂಗಸನ್ನು ಒಂದು ಕಡೆ ಅಲಂಕಾರ ಮಾಡಿ ಕೂರಿಸಿ ತಾನು ದುಡಿದು ತಂದ ಹಣದಿಂದ ಆಕೆಯನ್ನು ತುಷ್ಟಿಪಡಿಸಿ ಆಕೆಯ ಪ್ರಸಾದ ಪಡೆಯಬೇಕೆಂಬುದೇ ಗಂಡಸಿನ ಉತ್ಸಾಹ ಪಾಪ! ಆ ಉತ್ಸಾಹದಲ್ಲೇ ಗಂಡಸು ದುಡಿಯಲಿ ನಾವು ಯಾಕೆ ಬೇಡ ಅನ್ನೋಣ ಅಂಬಲಿಯಾದರೂ ಅನ್ಯೋನ್ಯವಾಗಿ ಕುಡಿದರೆ ಇವರಿಗೂ

ತೃಪ್ತಿ; ನನಗೂ ತೃಪ್ತಿ. ಆದರೆ ಒಕ್ಕಲುತನದಲ್ಲಿ ಮಾಡುವ ಹಾಗೆ ಗಂಡನೂ ಹೆಂಡತಿಯೂ ಪರರ ಹಂಗಿಲ್ಲದೆ ಒಂದೇ ಕಡೆ ದುಡಿಯುವುದು ಸಮವೇ ಹೊರತು, ಹೆಣ್ಣು ಮಕ್ಕಳು ಪರಪುರುಷನ ಅಧಿಕಾರಕ್ಕೊಳಪಟ್ಟು ಚಾಕರಿ ಮಾಡುವುದು ಸರಿ ಬೀಳುವುದಿಲ್ಲ, ಅಂತ ನಾನು ಕಾವೇರಮ್ಮನ ಹತ್ತಿರ ವಾದಿಸಿದೆ. ಸಂಪಾದನೆಗೆ ಹೋದರೆ ಮಕ್ಕಳ ಆರೈಕೆ ಹೇಗೆ ನಡೆಯುತ್ತದೆ? "ನಿನ್ನ ಪಾಡು ನೀನು ನೋಡಿಕೊ" ಅಂತ ಸತಿಪತಿಯರಲ್ಲಿ ಯಾರೊಬ್ಬರೂ ಮತ್ತೊಬ್ಬರಿಗೆ ಹೇಳುವ ಹಾಗಿರಬಾರದು. ಮುಖ್ಯವಾಗಿ, ಅತ್ತೆ ನಾದಿನಿಯರು ನಮ್ಮನ್ನು ಪ್ರೀತಿಯಿಂದ ಕಂಡು, ನಮ್ಮ ಉಡಿಗೆ, ತೊಡಿಗೆ ಮಾತು ಮುಂತಾದ್ದರಲ್ಲಿ ಏನಾದರೂ ಅಲ್ಪ ಸ್ವಲ್ಪ ಮಾರ್ಪಾಟಿದ್ದರೂ ಸಹಿಸಬೇಕು. ಅವರ ಮಕ್ಕಳ ಸೇವೆಗಾಗಿ, ಅವರ ಸಹೋದರರ ಸೇವೆಗಾಗಿ, ಮನೆ ಮಾರು ಬಿಟ್ಟು ಬಂದಿರುವವರು ನಾವು ಎಂಬುದನ್ನು ನೆನಪಿನಲ್ಲಿಟ್ಟರೆ ಸುಖ ಕಂಡೇವು. ಇವರ ಹತ್ತಿರ ಹೇಳಿದರೆ, "ನನಗೆ ಇರುವ ಒಬ್ಬಳು ತಂಗಿ ಕೂಡ ನಿನಗೇನೂ ತಂಟೆ ಮಾಡುವುದಿಲ್ಲವಲ್ಲಾ" ಅಂತ ಗೋಳ್ಗರೆಯುತ್ತಾರ. ತುಂಬಾ ಮನಸ್ಸಿಗೆ ವ್ಯಥೆಯಾದರೆ, ವಾತಪುತ್ರಾ, ಪಿತ್ತಪುತ್ರಾ, ಅಂತೆಲ್ಲ ಕೂಗುತ್ತಾರೆ. ನನಗೆ ಭಯವಾಗುವುದು. ವಾತವೋ ಪಿತ್ತವೋ ಪ್ರಕೋಪಿಸಿದರೆ, ಗತಿ ಏನು, ಅಂತ ಸುಮ್ಮನಾಗುವ

ಈ ಮಗುವಿಗೆ ಇದರಿಂದಲೇ ಇನ್ನೂ ನಾವು ಹೆಸರಿಡದೆ ಇರುವುದು. ಬರೀ ಮಗು ಅಂತಲೇ ಕೂಗುತ್ತಿದ್ದೇವೆ. ಅದರ ತಾತನ ಹೆಸರನ್ನೇನೋ ನಾಮಕರಣ ಅಂತ ಮಾಡಿದೆ. ಆದರೆ, ಇಟ್ಟ ಹೆಸರನ್ನೇ ಕೊಟ್ಟವರುಂಟೆ? ಹುಟ್ಟು ಹೆಸರು ತಾತನದು! ಕೊಟ್ಟ ಹೆಸರು? ಅದೇ ಇಲ್ಲ, ನನ್ನ ಮಗುವಿಗೆ. ಈ ಮನೆಯೊಳಗೆ ಯಾವುದು ತಾನೆ ಕಡೆಯ ನಿರ್ಧಾರಕ್ಕೆ ಬಂದೀತು? ಅರ್ಜುನ ಅಂತ ಕರೆಯಬೇಕು ಅಂತ ನನ್ನ ಬಯಕೆ. ನಾವು ನಾರಾಯಣರಾಗುವುದಂತೂ ಸುಳ್ಳು, ನರರಾಗಿರುವುದೇನೊ ಖಂಡಿತ. ಅಂದ ಮೇಲೆ ನರನ ಹೆಸರಿಡುವುದಕ್ಕೆ ಅಂಜಿಕೆ ಏನು?, ಅಂತ ನಾನು ವಾದಿಸಿದೆ. ಅದೂ ಅಲ್ಲದೆ (ಇದನ್ನ ನಾನು ಇವರಿಗೆ ಮಾತ್ರ ಹೇಳಿದೇನೆ, ಇನ್ನು ಯಾರಿಗೂ ತಿಳಿಸಿಲ್ಲ) ನನಗೊಂದು ಕನಸು ಬಿತ್ತು. ಒಂದು ದಿನ ಬೆಳಗಿನ ಜಾವ ಯಾರೋ ಗಮಕಿಗಳು ನಾರಣಪ್ಪನ ಭಾರತ ಓದುತ್ತಿದ್ದರು, ಇದ್ದಕ್ಕಿದ್ದ

ಹಾಗೆ ದ್ವಾರಕೆ ಕಾಣಿಸಿತು, ಶ್ರೀಕೃಷ್ಣ ಮಲಗಿದ್ದ, ತಲೆದೆಸೆಯಲ್ಲಿ ದುರ್ಯೋಧನ, ಕಾಲ ಹತ್ತಿರ ಅರ್ಜುನ ಕೂತಿದ್ದರು ದೇವರು ಎದ್ದು ಅರ್ಜುನನನ್ನು ನೋಡಿ, ಇವರ ಹೆಸರು ಹೇಳಿ, ಇವರ ಮಗನಿಗೆ 'ನಿನ್ನ ಹೆಸರಿಡುತ್ತೇನೆ' ಅಂತ ಅಪ್ಪಣೆ ಕೊಟ್ಟು ಅಂತರ್ಧಾನವಾದರು ಆ ಮೇಲೆ, ಗಮಕಿಗಳು ಭಾರತವನ್ನ ಮುಂದುವರಿಸಿದರು ಈಗಲೂ ನೆನೆಸಿಕೊಂಡರೆ ರೋಮಾಂಚವಾಗುತ್ತೆ, ಈ ಕನಸನ್ನ ಕಂಡ ಕೂಡಲೇ ನಾನು ಇವರಿಗೆ ಹೇಳಿದೆ ಆಗಿನ್ನೂ ಎಂಟು ತಿಂಗಳು; ಅಂಥಾದ್ದರಲ್ಲಿ ಅದನ್ನ ಅಲ್ಪದರಲ್ಲೇ ಅಲ್ಲಗಳೆದರಲ್ಲಾ, ಇವರು! 'ನಾನು ಇನ್ನೊಂದು ಹೆಸರು ಗೊತ್ತುಮಾಡಿದೇನೆ ಆಗಲೇ! ಅರ್ಜುನನ ತಲೆ ಮೇಲೆ ಹಾರಾಡಿದ್ದು' ಅಂದರು ನಿಧಾನವಾಗಿ. ನಮ್ಮತ್ತೆಯವರು "ವಿಟ್ಠಲ" ಅಂತ ಹೆಸರಿಡಬೇಕು ಅಂತ ಹಠ ಹಿಡಿದಿದಾರೆ ವಿಧುರಾಶ್ವತ್ಥದಲ್ಲಿ ನಮಗೆ ಮದುವೆಯಾದ್ದರಿಂದ 'ವಿದುರ' ಅಂತ ಹೆಸರಿಡಬೇಕು ಅಂತ ಹರಕೆ ಹೊತ್ತಿದ್ದರಂತೆ, ಆಗಲೇ, ಅಜ್ಜಿ ಅಶ್ವತ್ಥವನ್ನು ಸುತ್ತುವಾಗಲೇ, ವಿದುರನ ಹಾಗಾದರೂ ಒಂದು ಗಂಡು ಸಂತತಿ ಕೊಡು ಇವರಿಗೆ ಅಂತ ಅಂತೂ ಇಂತೂ ಕುಂತೀ ಮಕ್ಕಳಿಗೆ ಕಿರೀಟವಿಲ್ಲ, ಅಂದ ಹಾಗೆ ನನ್ನ ಮಗುವಿಗೆ ನಾಜೋಕಾದ ಒಂದು ಹೆಸರಿಲ್ಲ ಅನಾಮಧೇಯದ ಹಾಗೆ ಬೆಳೆಯುತ್ತಿದೆ ಅದು ನಾಳೆ ಅವನನ್ನ ಸ್ಕೂಲಿಗೆ ಸೇರಿಸುವಾಗ "ಕೇಜೀ ಮಗು" ಅಂತ ಅಂದರೆ ಯಾವ ಲಕ್ಷಣ ಹೇಳಿ "ಅರ್ಜುನ ಅಂದರೆ, ಅಕಾರವಿದೆ, ಜಯಕಾರವಿದೆ" ಅಂತ ನಾನಂದರೆ ಅವಕ್ಕೂ ನಕಾರವೇ ಇವರ ಹತ್ತಿರ

ಇದೆಲ್ಲ ಯಾರೋ ಒಬ್ಬರು ಗುರುಗಳ ಪ್ರಭಾವ ಹೊಸ ಗುರುಗಳು ನಾನು ಇಲ್ಲಿಗೆ ಬಂದ ಹೊಸದರಲ್ಲಿ ಇವರ ಮೇಜಿನೊಳಗೆ ಯಾರೋ ಒಬ್ಬರು ಸಂನ್ಯಾಸಿಗಳ ಫೋಟೋ ಇತ್ತು ಹಣೆಗೆ ಕುಂಕುಮ ಬೇರೆ ಹಚ್ಚಿದ್ದರು ಇವರು ತಲೆಬೋಳಿಸಿಕೊಂಡು ಬಿಡುತ್ತೇನೆ ಅಂತ ಗಳಿಗೆಗಳಿಗೆಗೂ ಇವರು ಗದರಿಸಿದ್ದು ಕೇಳಿ ನಾನೊಂದು ದಿನ ಅದನ್ನು ಬೀದಿಗೆಸೆಯುವುದಕ್ಕೆ ಹೋದೆ ಆಗ ಇವರು, "ಇಲ್ಲ, ಕಣೆ! ಇವರೇ ನನಗೆ ಗೃಹಸ್ಥಾಶ್ರಮ ಸ್ವೀಕರಿಸು ಅಂತ ಹೇಳಿದ್ದು ನಾಲ್ಕಾಶ್ರಮಗಳೂ ತಾವಾಗಿ ಸಾಲಾಗಿ ಬರಬೇಕೆಂದು ಬೋಧಿಸಿದರು" ಅಂದರು. ಕುಂಕುಮ ಅಳಿಸಿ ಇವರ ಕೈಗೆ ಕೊಟ್ಟೆ "ಏನೇ ಆಗಲಿ! ಗೃಹಸ್ಥರು ಮಾತ್ರ ಸನ್ಯಾಸಿಗಳನ್ನು ಪೂಜೆ ಮಾಡಬಾರದು.

ಯಾವ ಗಳಿಗೆಯಲ್ಲಿ ವೈರಾಗ್ಯ ಒಳಹೊಕ್ಕು ನಮ್ಮನ್ನು ಕಾಡುಪಾಲು ಮಾಡಿ, ನೀವು ಮರ ಸೇರುತ್ತೀರೋ?" ಅಂದೆ ಈಚೆಗೆ ಇನ್ನೊಬ್ಬರು ಸಿಕ್ಕಿದಾರೆ ಅವರ ಪ್ರಭಾವವೇ ಪ್ರಯಾಸಕ್ಕಿಟ್ಟುಕೊಂಡಿರುವುದು

ಅವರು ಸಾಕ್ಷಾತ್ ಮಾರುತಿಯಂತೆ ನವನವೀನವಾದ ದೇಹವನ್ನು ತಾಳಿ ಭೂಲೋಕಕ್ಕಿಳಿದಿದಾರಂತೆ ಅವರ ಎದೆ ಸೀಳಿದರೆ ಶ್ರೀರಾಮನ ನೂರೆಂಟು ನಾಮಗಳೂ ಒಳಗೆ ಪ್ರಜ್ವಲಿಸುತ್ತವಂತೆ ಅವರು ತಿನ್ನುವುದೆಲ್ಲ ರಾಮಫಲವಂತೆ ಅವರು ಕುಡಿಯುವುದೆಲ್ಲ ರಾಮರಸವಂತೆ ಕತ್ತಲಾಯಿ ತೆಂದರೆ ಅವರು ಬಾಳೆತೋಟದ ಮಧ್ಯೆ ಒಂದು ಮಹಾವೃಕ್ಷದ ಮೇಲೆ ಕುಳಿತು ಬಿಡುವರಂತೆ ಬೆಳಕು ಹರಿಯುತ್ತಲೂ ಯಾರಾದರೂ ದಾರಿಗರು ಕಲ್ಲು ಹೊಡೆದು ಪಾಪ ಕಟ್ಟಿಕೊಳ್ಳುತ್ತಾರಲ್ಲಾ ಎಂಬ ಭೀತಿಯಿಂದ, ಬಾಲವನ್ನು ಮಾತ್ರ ಅಲ್ಲೇ ತೂಗಿರಿಸಿ ಕೆಳಗಿಳಿದು ಬರುವರಂತೆ ಅವರು ಸರ್ವ ವ್ಯಾಪಿ, ಸರ್ವಶಕ್ತ, ತ್ರಿಕಾಲಜ್ಞಾನಿಗಳಂತೆ ಆದ್ದರಿಂದ, ಇವರು ಅವರಿಗೆ ತಿಂಗಳಿಗೆ ಎಂಟು ರೂಪಾಯಿ ತೆತ್ತು ಎಂಟು ಪ್ರಶ್ನೆಗೆ ಅವರಿಂದ ಉತ್ತರ ತರಿಸಿ ಅದರಂತೆ ಚಾಚೂ ತಪ್ಪದೆ ನಡೆಯುತ್ತಿದಾರೆ ಕಚೇರಿ ಸಾಹೇಬರಿಗಿಂತ ಈ ಹೊಸ ಸಾಹೇಬರ ಹುಕುಂ ಅಂದರೆ ಇವರಿಗೆ ವೇದವಾಕ್ಯ

ಒಂದನೆ ತಾರೀಖು ಸಂಬಳ ಬಂತು ಅಂದರೆ ಸರಿ, ಎರಡನೆಯ ತಾರೀಖು ಪ್ರಾರಂಭ ಇವರ ಮಾರುತಿ ಹಾರಾಟ! ಬಾಗಿಲು ಹಾಕಿಕೊಂಡು ಒಳಗೆ ಕೂತುಬಿಡುತ್ತಾರೆ, ತಲೆ ಕೆರೆಯುತ್ತಾ, ಎಂಟು ಪ್ರಶ್ನೆಗಳು ಯಾವ ಯಾವುದು ಕೇಳುವುದು ಅಂತ ನಿರ್ಧರಿಸುವುದಕ್ಕೆ! ಅವತ್ತೇನು ಈ ಮಗು ಮುಖ ಕೂಡ ನೋಡುವಹಾಗಿಲ್ಲ ಅವನೆಲ್ಲಾದರೂ ಹೋಗಿ ಬಾಗಿಲು ಬಡಿದರೆ, ಸರಕ್ಕನೆ ಒಳಕ್ಕೆಳೆದುಕೊಂಡು ನಾಲ್ಕೈದು ಹೇರಿ ಮತ್ತೆ ಹೊರಕ್ಕ ದಬ್ಬುತ್ತಾರೆ "ಆಂಜನೇಯ ಸಂಸ್ಕೃತ ಭಾಷೆಯಲ್ಲೇ ಬಹು ಶುದ್ಧವಾಗಿ ವ್ಯಾಕರಣ ಗೀಕ ರಣ ತಪ್ಪದೆ ರಾಮಚಂದ್ರನ ಹತ್ತಿರ ಮಾತನಾಡಿದನಂತಲ್ಲಾ, ನಿಮ್ಮವರಿಗೆ ನೀವು ಒರೆಯುವುದು ಯಾವ ಭಾಷೆಯಲ್ಲಿ?" ಅಂದೆ, ನಾನು ಒಂದುದಿನ "ಕನ್ನಡ" ಅಂದರು ನಾನು ನಕ್ಕೆ ಇವರಿಗೆ ಕೋಪ ಉಕ್ಕಿಬಂತು "ನಮ್ಮಂಥವರ ಮೇಲಿನ ಕೃಪೆಯಿಂದ ಅಭಿನವಮಾರುತಿಗಳು ಕನ್ನಡ ವನ್ನೂ ಕಲಿತಿದ್ದಾರೆ" ಅಂದರು ನಾನು ಆ ಕೋಣೆಯೊಳಗೆ ನಿಲ್ಲಲೇ ಇಲ್ಲ

ತಿಂಗಳು ತಿಂಗಳಿಗೂ ಈ ಒಂದು ಹೊಸ ಖರ್ಚು ಬಂದು ವಕ್ರಿಸಿದಾಗ ನಾನು ಸಮಾಚಾರವನ್ನು ಅತ್ತೆಯವರಿಗೆ ಹೇಳಿದೆ. "ನನ್ನ ಮಗನ ಮೇಲೆ ಚಾಡಿ ಹೇಳುತ್ತೀಯಾ, ನಾಶೀಪತಿ!" ಅಂತ ನನ್ನನ್ನೇ ಬೈದರು ಆದರೂ ನನ್ನ ಮಾತು ನಿಜ ಅಂತ ನಂಬಿದರು ತನ್ನ ಅತ್ತೆಗೂ ಅದನ್ನು ತಿಳಿಸಿದರು ಆದರೆ, ಪರಮಶತ್ರುಗಳಾದ ಪಕ್ಕದ ಮನೆಯವರಿಗೆ ವಿಷಯ ತಿಳಿಯದೆ ಇರಲಿ ಅಂತ, ಅಜ್ಜಿಯನ್ನ ಅಡಿಗೆಮನೆಗೆ ಕರೆದು ಕಿಟಿಕಿ ಬಾಗಿಲುಗಳನ್ನ ಬಂಧಿಸಿ, ಅನಂತರ ಕೂಗಿಕೊಂಡರು ಸರಿ! ಇಬ್ಬರೂ ಮಂತ್ರಾಲೋಚನೆ ನಡೆಸಿ ಸಂಜೆ ಇವರು ಬರುತ್ತಲೂ ಮೇಲೆ ಬಿದ್ದರು ಗಲಾಟೆ ಕೇಳಿ ಮಗುವಿಗೆ ತೀರ ಹೆದರಿಕೆ ಹತ್ತಿ, ಅದು ಗೊಳೋ ಅಂತ ಉದ್ದಕ್ಕೂ ಅಳುತ್ತಿತ್ತು ಅದನ್ನ ಸಮಾಧಾನ ಪಡಿಸುವವರೇ ಇರಲಿಲ್ಲ ಆಫೀಸಿನಿಂದ ಬಂದವರು ತಲೆಮೇಲಿಂದ ರುಮಾಲು ಕೂಡ ಕಳಚಲಿಲ್ಲ ಹೆಂಗಸರ ಆರ್ಭಟದ ನಡುವೆ, ಅರೆಗಳಿಗೆ ಅಲ್ಲೇ ಅಲ್ಲಾಡದೆ ನಿಂತಿದ್ದರು ಆ ಮೇಲೆ ಧಟಕ್ಕನೆ ಹಿಂತಿರುಗಿ, ಹೊಸಲು ದಾಟಿ ಹೊರಟುಹೋದರು!

ಆ ರಾತ್ರಿ ಮನೆಗೆ ಬರಲೇ ಇಲ್ಲ ಮಾರನೆ ದಿನ ಮಂಗಳವಾರ ಆಫೀಸಿಗೆ ರಜ ಕೊಡಿ ಅಂತ ಬರೆಯಲಿಲ್ಲ, ಮನೆಗೂ ಬರಲಿಲ್ಲ ಅದರಾಚೆ ದಿನವೂ ಅದೇ ರೀತಿ . ನನಗಂತೂ ಪಂಚಪ್ರಾಣಗಳೂ ಹಾರಿಹೋದುವು ಒಂದು ಉದ್ಧರಣೆ ನೀರು ಕೂಡ ನಾನು ಬಾಯಿಗೆ ಬಿಡಲಿಲ್ಲ ಅವರಿಬ್ಬರೂ ಮನೆಯೊಳಗೆ ಓಡಾಡಿದ್ದೂ ಓಡಾಡಿದ್ದೆ , ಪರದಾಡಿದ್ದೂ ಆಡಿದ್ದೇ ಗುಸ ಗುಸ ಗುಸಗುಸ ಅಂತ ಮುಸಕಿನೊಳಗೆ ಅತ್ತಿದ್ದೂ ಅತ್ತಿದ್ದೇ ಎರಡನೆಯ ದಿನ ಮಧ್ಯಾಹ್ನ ಎದುರಂಗಡಿ ಕೆಂಚಣ್ಣ ನನಗೆ ಹೇಳಿದ, "ಸ್ವಾಮಿಯವರು ಊರಲ್ಲೇ ಇದಾರೆ, ನೀವು ಹೆದರಬೇಡಿ ಮನಸ್ಸಿಗೆ ಕೊಂಚ ನೆಮ್ಮದಿ ಬರುತ್ತಲೂ ಬರುತ್ತಾರೆ ಅಂತ ಕಾಣುತ್ತೆ ನಮ್ಮ ಮನೆ ಹೆಂಗಸರನ್ನ ಎಲ್ಲೋ ಕಂಡಾಗ, ಮನೆಯಲ್ಲಿ ಚಿಕ್ಕಮ್ಮನವರು ಹುಷಾರಾಗಿದಾರೇನೇ" ಅಂತ ವಿಚಾರಿಸಿದರಂತೆ" ಅಂದ ನನ್ನ ಮೇಲೆ ಇಷ್ಟಾದರೂ ಪ್ರೀತಿ ಇದೆಯಲ್ಲಾ ಅಂತ ಹಿಗ್ಗಿದೆ ಆದರೆ ಅವರಿಬ್ಬರೂ ನನ್ನನ್ನೇ ಬೈದರು "ನೀನು ಯಾಕೆ ನಮಗೆ ಹೇಳಬೇಕಾಗಿತ್ತು ? ಸಂಪಾದನೆ ಮಾಡುವವನು ಅವನು , ಖರ್ಚುಮಾಡುವ ಹಕ್ಕು ಅವನಿಗೆ! ಆದಾಯಕ್ಕೆ ಬಂದ ವಗ

ವೆಚ್ಚಕ್ಕಿಲ್ಲ ಅಂತ ಹೇಳಿ ಅವನನ್ನು ಮನೆಯಿಂದ ಓಡಿಸಿ ಏನು ಸುಖ ಕಂಡೆ, ಕಾಳಿಂಗೀ" ಅಂತ ನನ್ನ ಮೇಲೆ ಏರಿಬಂದರು ನಾನು ಕಂಬದ ಹಾಗೆ ನಿಂತಿದ್ದೆ. ನಾಲ್ಕನೆಯ ದಿನ ಬಂದರೂ ಇವರು ಎಲ್ಲರ ಮಾತೂ ಅಡಗಿತು ಗಲಾಟೆ ವಿಷಯವನ್ನು ಇವರೂ ಮುಂದೆ ಪ್ರಸ್ತಾಪಿಸಲೇ ಇಲ್ಲ

ಎರಡನೆಯ ತಾರೀಖು ಟಪಾಲಿಗೆ ಹಾಕಿದ ಕಾಗದಕ್ಕೆ ರುಕ್ಮೋರೀಕ್ ಹತ್ತನೆಯ ತಾರೀಖು ಜವಾಬು ಸಿದ್ಧ. ಅವತ್ತಿನ ಅವಾಂತರವೋ ಅವಾಂತರ! ಬೆಳಗಿನ ಹೊತ್ತು ಐದೂವರೆಗೆ ಅಲಾರಂ ತಿರುಗಿಸಿ ಅದು ಹೊಡೆದ ಕೂಡಲೇ ಎದ್ದು ತಣ್ಣೀರುಸ್ನಾನ ಮಾಡಿ ಹೊಸದಾಗಿ ತಯಾರಾದ ವಾತಪುತ್ರನ ಚಿತ್ರದ ಗೊಂಬೆ ಎದುರು ಧ್ಯಾನಾಸಕ್ತರಾಗಿ ಪದ್ಮಾಸನ ಹಾಕಿ ಕೂಡುವುದು, ಕಣ್ಣುಮುಚ್ಚಿಕೊಂಡು ಗಡಗಡನೆ ನಡುಗುತ್ತಾ ಎಡಕ್ಕೂ ಬಲಕ್ಕೂ ಬಾಗುತ್ತ ಓಲಾಡುವುದು, ಇದು ಇವರ ಪದ್ಧತಿ ಆ ಮೇಲೆ ಜೋರಾಗಿ ಗಂಟೆ ಬಾರಿಸಿ ಪೂಜೆ ಮುಗಿಸಿ ಓಡಿಹೋಗಿ ಪೋಸ್ಟಾಫೀಸ್ ಬಾಗಿಲಲ್ಲಿ ಕಾದಿರುವುದು. ಬಂದ ಉತ್ತರವನ್ನು ಬಲಗೈಯಲ್ಲೇ ಹಿಡಿದುಕೊಂಡು ಬಂದು ಒಳಗೆ ಸೇರಿಕೊಂಡು ಬಾಗಿಲು ಹಾಕಿಕೊಳ್ಳುವುದು ತಾನೇ ಓದಿಕೊಂಡು ಅದರ ಪ್ರಕಾರ ನಡೆಯುವುದು, ನಡೆಸುವುದು ನಾನೂ ಕೂಡ ಏನು ಎತ್ತ ಅಂತ ಕೇಳುತ್ತಲೇ ಇರಲಿಲ್ಲ ಬಲವಂತಜ್ಞಾನಸಂಪಾದನೆಯಿಂದ ಏನು ಬಂದ ಹಾಗಾಯಿತು? ನಮಗೆ ತಿಳಿಯಬೇಕಾದ್ದಿದ್ದರೆ, ಇವರೇ ಹೇಳುತ್ತಾರೆ ಅದೇನೋ ಬರೆದಿಟ್ಟಿದಾರಲ್ಲಾ, ಮನುಮಹರ್ಷಿಗಳು, ಸ್ತ್ರೀಗೆ ಸ್ವಾತಂತ್ರ್ಯದ ಅರ್ಹತೆ ಇಲ್ಲ, ಅಂತ ನಡೆಯಲಿ ಆ ಮಾತು, ಈ ಮನ್ವಂತರವೆಲ್ಲ . ಅಭಿನವಮಾರುತಿಯಿಂದ ಬಂದ ಕಾಗದಗಳನ್ನೆಲ್ಲ ಒಂದು ಪೆಟ್ಟಿಗೆಯೊಳಗಿಟ್ಟು ಬೀಗಹಾಕಿ ಕೀಲಿಕೈಯನ್ನ ಜನಿವಾರದಲ್ಲೇ ಕಟ್ಟಿಕೊಂಡು ತಿರುಗುತ್ತಿದಾರೆ ನಿದ್ದೆಮಾಡುವಾಗ ನಾನೇನಾದರೂ ಅದನ್ನ ಬಿಚ್ಚಿ ತೆಗಿದೇನೋ ಎಂಬ ಭೀತಿಯಿಂದ ಕೀಲಿಕೈಯನ್ನು ಬಾಯೊಳಕ್ಕೆ ಹಾಕೊಳ್ಳುತ್ತಾರೆ! ಹಾಗೆಯೇ ಹಲ್ಲು ಕಚ್ಚಿಕೊಂಡು ನಿದ್ದೆಹೋಗುತ್ತಾರೆ! ಯಾರ ಮೇಲೆ ಅವನಂಬಿಕೆ? ನಿಮ್ಮ ಕೈಯನ್ನೇ ನೀವು ನಂಬುವುದಿಲ್ಲವಲ್ಲಾ!" ಅಂತ ಎಷ್ಟು ಭರವಸೆ ಕೊಟ್ಟರೂ ಇವರಿಗೆ ಅನುಮಾನವೇ!

ಮಾರುತಿಯಿಂದ ಉತ್ತರ ಬಂದಮೇಲೆ ಆರೇಳುದಿನಗಳವರೆಗೆ ಬೆಳಗ್ಗೆ ಸಂಜೆ ಪೆಟ್ಟಿಗೆ ತೆರೆದು ಇವರು ಕಾಗದ ಓದುವರು ಆಗ ಮನೆಯವರನ್ನು

ಕಂಡರೆ ಅಲಕ್ಷ್ಯ! ಸ್ನಾನ ಪೂಜೆ ಜಪ ತಪ ಮಾತ್ರ ಯಥಾವಿಧಿಯಾಗಿ ಸಾಗುತ್ತಿರುತ್ತವೆ ಆ ಮೇಲೆ ಇವರಿಗೆ ಐದಾರುದಿನ ಕೊಂಚ ವಂಕು ಬಡಿದ ಹಾಗಾಗುತ್ತದೆ ಊಟ ತಿಂಡಿಗಳ ಮೇಲಿನ ಆಸಕ್ತಿಯೇ ಕಡಿಮೆಯಾಗ ವುದು ತಲೆತಗ್ಗಿಸಿಕೊಂಡು ಅತ್ತಲಾಗಿಂದಿತ್ತಲಾಗೆ ಶತಪಥ ತಿರುಗುತ್ತಾ ತನಗೆ ತಾನೇ ಏನೇನೋ ಹೇಳಿಕೊಳ್ಳುವರು. ಭಗವದ್ಗೀತೆಯನ್ನಲ್ಲ, ಬೇರೆ ಯಾವುದೋ ಒಂದನ್ನ ಆಯುರ್ವೇದದ ಚರಕವೂ ಅಲ್ಲ ಏನೂ ಅಂತ ಕೇಳುವುದಕ್ಕೆ ನನಗೆ ಭಯ ಆ ಪಾರವೆಲ್ಲ ನನಗೂ ಕಣ್ಣೀರೇಗತಿ ಸಂಸಾರ ಅಂತ ಈ ಒಂದು ಮನೆ ಕುದುರುವುದರೊಳಗೆ ಪ್ರಾಯದಗಂಡ ಹೀಗೆ ತಲೆ ಇಳೀಬಿಟ್ಟು ಪಾತ ಅಂತ ಹೇಳುತ್ತಾ ಪೂಜೆಗೆ ಮೊದಲುಮಾಡಿದರೆ ತಲೆಮೇಲೆ ಚಪ್ಪಡಿ ಎಳೆದಹಾಗೆ ತಾನೆ? ನನ್ನನ್ನ ಎಷ್ಟೋಸಲ ಇವರು ಹೊಡೆದಿದಾರೆ, ಬೈದಿದಾರೆ. ಕತ್ತುಹಿಡಿದು ಕೋಣೆಯಾಚೆ ನೂಕಿದಾರೆ. ಆದರೂ ನಾನು ಹಲ್ಲುಕಚ್ಚಿಕೊಂಡು, ಅದನ್ನೆಲ್ಲ ಸಹಿಸಿ, "ನಾನು ಇಲ್ಲಿಂದ ಕದಲುವುದಿಲ್ಲ, ಇಲ್ಲಿರುವುದಕ್ಕೆ ಸಂಸ್ಕೃತ ಮಂತ್ರಗಳೇ ನನಗೆ ಹಕ್ಕು ಕೊಟ್ಟಿವೆ ಹೆಂಡತಿ ಮಕ್ಕಳನ್ನ ಬಾವಿಗೆ ತಳ್ಳಿಬಿಟ್ಟು ನೀವು ಎಲ್ಲಿಗೆಬೇಕಾದರೂ ಹೋಗಿ" ಅಂತ ಧೈರ್ಯವಾಗಿಹೇಳುವೆ ಹೀಗೆ ನಮ್ಮ ಕೋಣೆಯೊಳಗೆ ಕಾಳಗವಾಗುವುದನ್ನು ನಮ್ಮತ್ತೆ ಇನ್ನೂ ಪತ್ತೆಹಚ್ಚಿಲ್ಲ ಮಗುಮಾತ್ರ ನಮ್ಮ ಸಲ್ಲಾಪ ಜೋರಾದಾಗ 'ಗುಮಾಸ್ತೇ! ಗುಮಾಸ್ತೇ! ಅಂತ ಕೂಗಿಕೊಳ್ಳುತ್ತೆ

ಆದರೆ, ಇವರ ಹೃದಯ ನಿಜವಾಗಿಯೂ ಗುಲಾಬಿಹೂವಿನಷ್ಟು ಮೃದು. "ನನ್ನ ಮಂತ್ರ ನನ್ನ ಪೂಜೆ ಎಲ್ಲ ನನ್ನ ಇಲಾಖೆ! ನೀನೇನೂ ಕೇಳಕೂಡದು." ಅಂತ ಗದರಿಸುತ್ತಾರಲ್ಲಾ! ಹೊಡೆದು ಬಡಿದು ನನ್ನನ್ನು ನೂಕುತ್ತಾರಲ್ಲಾ! ಆ ಮೇಲೆ ನಾನು ಅಲ್ಲೇ ಮೂಲೆಯಲ್ಲಿ ಗೋಳಿಡುತ್ತಾ ಬಿದ್ದಿರುವೆ ಐದು ನಿಮಿಷ ತಾನೂ ಸದ್ದಿಲ್ಲದೆ ಮಲಗಿರುತ್ತಾರೆ ಆ ಮೇಲೆ ಮೆಲ್ಲಗೆ ಎದ್ದು ಕತ್ತಲಲ್ಲೇ ನನ್ನ ಕಣ್ಣೊರಸುತ್ತಾರೆ "ಅಳಬೇಡ, ಅಳಬೇಡ ಎಲ್ಲವೂ ನಿನ್ನ ಶ್ರೇಯಸ್ಸಿಗೇನೆ! ನನ್ನ ಮನಶ್ಶಾಂತಿಗೇನೆ!" ಅಂತ ಹೇಳಿ ನನ್ನ ಹತ್ತಿರ ಬಂದು ಕೂತುಕೊಳ್ಳುತ್ತಾರೆ 'ಅಭಿನವ ಮಾರುತಿಗಳಿಗೆ ದಿವ್ಯ ದೃಷ್ಟಿಯಿದೆ, ದಿವ್ಯಜ್ಞಾನವಿದೆ, ತಿಂಗಳಿಗೆಂಟು ಪ್ರಶ್ನೆಗೆ ಎಂಟು ರೂಪಾಯಿ ಏನು ಮಹಾ' ಎಂದೆಲ್ಲ ಹೇಳುತ್ತ ನನ್ನನ್ನ ಸಂತೈಸುತ್ತಾರೆ. ಹೆಂಗಸನ್ನು

ಬಡಿದ ತನ್ನ ಬಲಗೈಯನ್ನು ಕ್ರೂರಪ್ರಾಣಿ ಅಂತ ಬೈದು ಚಿವುಟುತ್ತಾರೆ .. ಆಗ "ಅದು ಸರಿ! ಹಾಗಾದರೆ, ಮುಂದಿನ ತಿಂಗಳು ನನ್ನ ಪರವಾಗಿಯೂ ಒಂದು ಪ್ರಶ್ನೆ ಕೇಳಿ" ಅಂತ ನಾನೂ ಕೇಳುವೆ ಇವರಿಗೆ ಆಗ ಪರಮಾನಂದ ವಾಗಿಬಿಡುವುದು, ನಾನೂ ಅವರ ಮಾರುತಿಗೆ ಮರುಳಾದೆನಲ್ಲಾ, ಅಂತ ದೀಪ ಹಚ್ಚಿ ಶಾಯಿ ಕಡ್ಡಿ ಹಿಡಿದುಕೊಂಡು ಕೂತು ನನ್ನನ್ನೂ ಪಕ್ಕದ ಕುರ್ಚಿಯಲ್ಲೇ ಕೂರಿಸಿಕೊಳ್ಳುವರು. ಮೆಲ್ಲಗೆ ಮುಂಗುರುಳನ್ನೆಲ್ಲ ತಾವೇ ಸರಿಪಡಿಸಿ ಮುಖವೊರೆಸಿ "ಹೇಳು! ಯಾವ ವಿಷಯ 'ಕೇಳೋಣ" ಅಂತ ಬಹು ಪ್ರೀತಿಯಿಂದ ಬೇಡುವರು ಆಗ ನನಗೆ ಮತ್ತೊಮ್ಮೆ ಕಣ್ಣಲ್ಲಿ ನೀರು ತುಂಬಿ ಏನೂ ಕಾಣಿಸದಂತಾಗುವುದು "ನನಗಿನ್ನೇನು ವಿಷಯ ಇದೆ ಈ ಮನೆಯಲ್ಲಿ ನನ್ನ ಬಾಳು ಸುಖವಾಗಬೇಕಾದರೆ ನಿಮ್ಮ ತಾಯಿಗೆ ನನ್ನ ಮೇಲೆ ಪ್ರೀತಿ ವಿಶ್ವಾಸ ಬರುವ ಹಾಗೆ ನಿಮ್ಮ ದೇವರು ಕರುಣಿಸಬಾರದೆ?" ಅಂತ ಅಂಗಲಾಚಿಕೊಳ್ಳುವೆ ಒಂದು ಸಲ ಆದೇ ಪ್ರಶ್ನೆಯನ್ನು ಬರೆದು ಕಳು ಹಿಸಿದರು, ಹತ್ತನೆ ತಾರೀಖು ಅದಕ್ಕೆ ಉತ್ತರ ಬರುತ್ತೆ ಅಂತ ನಾನೂ ಕೂಡ ತುಂಬಾ ಕುತೂಹಲದಿಂದ ಇದ್ದೆ. "ಇಂದಿನಿಂದ ಹೊಸ ಬದುಕು" ಅಂತ ಅವತ್ತು ಹಿಗ್ಗಿದ್ದೆ ರಾತ್ರಿ ನನ್ನನ್ನು ಕರೆದು ದೂರ ಕೂರಿಸಿ ಬಂದ ಉತ್ತರವನ್ನು ಇವರು ಓದಿತೋರಿಸಿದರು "ಎಲಎಲವೋ! ನಿನ್ನ ಅರ್ಧಾಂ ಗಿಗೆ ಪೇಳ್! ಮಾಂಧಾತಿ ಅರುಂಧತಿ ಅಗಸ್ತಿನಿ ಸುಭಾಸ್ತಿನಿ ಮೊದಲಾದ ಋಷಿಪತ್ನಿಯರಂತೆ, ನಿನ್ನ ಪರಮೇಶ್ವರಿ ನಿನ್ನ ಪೂಜಾದಿ ಪುರಸ್ಕಾರಗಳೊಳಂ ನಿಚ್ಚಂ ನಿಶ್ಚಲಮಾದ ನೆಚ್ಚನಿಟ್ಟು, ಭಂಗಾರಂ ಭಸ್ಮಮಾದ ಮಾನಭಂಗಮಂ ಮನದಿಂದಂ ಮೂಲೋತ್ಪಾಟನಂಗೈಯ್ದು, ಪೊಚ್ಚಪೊಸ ಹೃದಯಮಂ ಅಭಿ ನವಮಾರುತೀ ಮಂದಾಕಿನಿಯೊಳ್ ಮೀಯಿಸಿದೊಡೆ ಅತ್ತೆಯೆಂಬ ಕುತ್ತ ಮೆತ್ತ ಪೋಕುವೋ ಪಿತ್ತಾತ್ತಾ!" ಅಂತ ಬರೆದಿತ್ತು

"ಒಳ್ಳೇ ಮಾರುತಿ!" ಅಂದೆ ನಾನು ಅಲ್ಲಾ, ಇವರ ತಂಗಿಮದುವೆ ಯಲ್ಲಿ ಯಾರ ಸರವನ್ನೋ ಯಾರೋ ಬೂದಿ ಮಾಡಿದರೆ ನನಗೇನು ಮಾನ ಭಂಗ? ಈಗ ಅದನ್ನ ಸಂಪೂರ್ಣ ಮರೆಯಬೇಕು ಅಂತ ಬರೆದಿದಾರಲ್ಲಾ, ಇನ್ನು ಅದು ಹೇಗೆ ಸಾಧ್ಯ? ಆ ಶೀಸೆಗಳನ್ನ ಇವರು ಮಾರಿದ ಮೇಲೂ ನೆನಪುಳಿದಿದೆ. ಇವರ ಮನೆಗಾದ ಕಳಂಕವನ್ನೇ ನಾನು ನೆನೆದುಕೊಂಡು

ನೆನೆದುಕೊಂಡು ಊರೆಲ್ಲ ಸಾರುತಿದೇನೆ ಅಂತ ಮತ್ತೆ ಇವರಿಗೂ ನನಗೂ ತಂದು ಹಾಕಿದ ಮಾರುತಿ, ಹಾಳು ಉತ್ತರದಿಂದ ಕೋತಿ ತಾನೂ ಕೆಟ್ಟಿತಲ್ಲದೆ ವನವನ್ನೆಲ್ಲ ಕಡಿಸಿತು, ಅಂದ ಹಾಗೆ ನನಗೆ ಇದ್ದ ನೆಮ್ಮದಿಯೂ ಹೋಯಿತು ಅಂದಿನಿಂದ ಇವರು, "ನೋಡು! ನೀನು ಆ ಬೂಡಿ ವಿಷಯ ಮರೆತಿಲ್ಲ, ನಿನಗೆ ಅತ್ತೆ ಕಾಟ ತಪ್ಪಿಲ್ಲ" ಅಂತಾರೆ, ನಾನು ಮರೆತಿದ್ದರೂ ನನಗೆ ಅದನ್ನ ಜ್ಞಾಪಿಸುತ್ತಾರೆ ನಾನೂನು ಎಷ್ಟೋ ಸಲ, ಅಭಿನವ ಮಾರುತಿಗಳು ಉಪದೇಶ ಮಾಡಿದ್ದು ಸುಳ್ಳಿರಲಾರದು ಅಂತ, ಅದನ್ನ ಮರೆಯಲು ಪ್ರಯತ್ನಪಟ್ಟಿದೇನೆ ಆದರೆ, ಹಾಳು, ಪ್ರಯತ್ನ ಪಟ್ಟಷ್ಟೂ ಬಲವಾಗಿ ಊರಿಕೊಳ್ಳುತ್ತದೆ

ಈಚೆಗೆ ಇವರಿಗೆ ಯಾವುದೋ ಒಂದು ಹೊಸ ಪ್ರಾಣಿ ಸಿಕ್ಕಿದೆ ಯಾವುದೋ ಕೀಚಲ ಗಂಟಲು, ಗಣಗಣಗಣ ಅಂತ ಬಾಗಿಲಲ್ಲೇ ಬಂದು ಬೊಡಕೊಳ್ಳುತ್ತದೆ ಅದರ ಪ್ರಭಾವವೇ ಇರಬೇಕು, ಈ ಮುಂತ್ರಪರನವೆಲ್ಲ ಅದರ ಸಂಗಡ ವಾಕಿಂಗ್ ಹೋದರೆ ಬರುವುದು ರಾತ್ರಿ ಹತ್ತಕ್ಕೋ ಹನ್ನೊಂದಕ್ಕೋ! ಇವರಿಗೆ ಬೆಂಗಳೂರಲ್ಲಿ ಅನ್ನಹಾಕಿದ ಪುಣ್ಯಾತ್ಮನ ಅಳಿಯ ಅಂತೆ ಅದು! ಆ ಅನ್ನದ ಮಾಹಾತ್ಮ್ಯದಿಂದಲೇ ಇರಬಹುದು, ಇವರಿಗೆ ಬಿ ಎ ಆದರೂ ಇಷ್ಟೇ ಸಂಬಳ ಈ ಹಾಳೂರಲ್ಲಿ ಸಿಗುತ್ತಾ ಇರುವುದು ಇನ್ನು ಈ ಅಳಿಯ ಇದ್ದದ್ದಕ್ಕೂ ಕಲ್ಲುಹಾಕಿ ತಲೆ ಬೋಳಿಸಿಬಿಡುತ್ತದೋ ಏನೋ? ಮಗುವಿಗೆ ಖಾಯಿಲೆ, ನನಗೆ ತಲೆನೋವು, ಅಜ್ಜಿಗೆ ಗೂರಲು, ಅಂತ ನಾನು ಎಷ್ಟು ನೆಪ ಹೂಡಿದರೂ, ಅದು ಬಂದು ಬಾಗಿಲಲ್ಲಿ "ರೀ" ಅಂತ ಗಂಟೆ ಬಾರಿಸಿದರೆ, ಹೊರಟೇಬಿಡುತ್ತಾರೆ, ಇವರು ಅದರ ಹತ್ತಿರ ಎಂಥಾ ವಶೀಕರಣ ಇದೆಯೋ ನನಗೆ ಗೊತ್ತಿಲ್ಲ ಈಚೆಗೆ ಇವರೂನೂ ಹೊಸ ಹೊಸದಾಗಿ ವಿಚಿತ್ರ ಪ್ರಾರಂಭಿಸಿಬಿಟ್ಟಿದ್ದರು "ಲೇ! ಮಾರುತಿಗಿಂತ ಮಾರುತಿ ಅಪ್ಪ ದೊಡ್ಡವನಲ್ಲವೇನೆ? ಮಗುವಿಗಿಂತ ನಾನು ಮಹಾತ್ಮನಲ್ಲವೇನೇ" ಅಂತ ನನ್ನ ಗಲ್ಲ ಬಡಿಯುವರು! "ನಿಮ್ಮ ಹೊಸ ಸ್ನೇಹಿತನ ಉಪದೇಶವೋ ಇದು?" ಅಂತ ನಾನು ಕೇಳಿದರೆ, "ನಾಳೆ ಅವನಿಗೂ ಅವನಂತಹ ಸಾವಿರಾರು ಸಬ್‌ರಿಜಿಸ್ಟ್ರಾರುಗಳಿಗೂ ನಾನೇ ಗುಗ್ಗುರು, ಕಣೆ" ಅಂತ ನನ್ನ ಕೈಗಳನ್ನ ಜೋಡಿಸಿ ಹಿಡಿದು, "ಮುಗಿಯೆ! ಮುಗಿಯೆ!' ಅನ್ನುವರು

ನಾನು ಕೆಂಚನನ್ನು ಕೇಳಿದೆ, ಯಾರದು , ಯಾತಕ್ಕೆ ಇವರನ್ನ ಕರೆದು ಕೊಂಡು ಹೋಗುತ್ತಾ ಇದಾನೆ, ಅಂತ. ಅವನಿಗೇನು ತಿಳಿಯುತ್ತದೆ, ದಡ್ಡನಿಗೆ? ಎಲ್ಲಾ ಬಿಟ್ಟು "ಇಸ್ಪೇಟ್ ಆಡುವುದಕ್ಕಿರಬೇಕು, ತಾಯಿ," ಅಂತಾನೆ!

ಈ ಹೊಸ ಹುಚ್ಚಿನ ಸಮಾಚಾರವನ್ನ ನಾನು ಮನೆಯಲ್ಲಿ ಯಾರಿಗೂ ತಿಳಿಸುವ ಹಾಗಿಲ್ಲ; ಕಾವೇರಮ್ಮನಿಗೂ ಕೂಡ ಹೇಳುವುದಕ್ಕೆ ಧೈರ್ಯ ಬರಲಿಲ್ಲ ಅವಳ ಗಂಡ ಊರಲ್ಲಿಲ್ಲದೆ ಇರುವಾಗ ಅವಳಿಗೆ ತಿಳಿಸಿದರೂ ತಿಳಿಸಬಹುದೇ ಹೊರತು ಆತ ಇರುವಾಗ ಪ್ರಸ್ತಾಪಿಸಿದರೆ ಕೂಡಲೇ ಖಂಡಿತ ಬಯಲುಮಾಡಿಬಿಡುವಳು ಕೆಂಚ ಬೇರೆ ಮೊನ್ನೆ ಹೆದರಿಸಿದ್ದ, "ತಾಯಿ! ಗೋಡೆಗಳಿಗೆಲ್ಲ ಕಿವಿ ಇರುವ ಕಾಲ ಇದು! ನಿಮ್ಮ ಯಜಮಾನರಿಗೆ ಈಗ ಕೊಂಚ ಗ್ರಹಗತಿ ಚೆನ್ನಾಗಿಲ್ಲ ಹುಷಾರಾಗಿರಿ ಮನೆ ಗುಟ್ಟು ಹೊರಗೆ ಬಿಡಬೇಡಿ" ಅಂತ. ನನಗೆ ದಿಕ್ಕೇ ತೋಚಲಿಲ್ಲ. ಹುಚ್ಚುನಾಯಿಯ ಹಾಗೆ ಮನೆಯೊಳಗೆ ದೇವರ ಕೋಣೆಯಿಂದ ಬೃಂದಾವನದ ಹತ್ತಿರಕ್ಕೆ, ಅಲ್ಲಿಂದ ಮತ್ತೆ ದೇವರ ಕೋಣೆಗೆ ನೂರುಸಾರಿ ಅಲೆದೆ ಕಡೆಗೆ ನಾನೇ ಒಂದು ನಿರ್ಧಾರಕ್ಕೆ ಬಂದೆ "ಇವರ ತಲೆಯನ್ನ ತಣ್ಣಗಿರಿಸಪ್ಪಾ, ಶ್ರೀರಾಮಾ" ಅಂತ ದೇವರೆದುರು ಅಡ್ಡಬಿದ್ದೆ ಮಾರುತಿಯಿಂದಾದ ಅನಾಹುತಕ್ಕೆ ಶ್ರೀ ರಾಮನೇ ಗತಿ, ಅಂತ ತೀರ್ಮಾನಿಸಿದೆ ಅವತ್ತಿನಿಂದ ದಿನವೂ ರಾತ್ರಿ ಇವರು ಮಲಗಿ ಚೆನ್ನಾಗಿ ನಿದ್ರೆಹೋದಮೇಲೆ ನಾನು ಎದ್ದು ಇವರ ಹತ್ತಿರ ಕೂತು ಇವರ ಹಣೆಯ ಮೇಲೆ ಮೆತ್ತಗೆ ನನ್ನ ಕೈಯನ್ನಿರಿಸಿಕೊಂಡು ಸಾವಿರ ಸಲ ರಾಮನಾಮ ಜಪ ಮಾಡುತ್ತಾ ಬಂದೆ

ಮೊದಮೊದಲು ಏನೂ ಪ್ರಯೋಜನವಾಗಲಿಲ್ಲ. ನನ್ನನ್ನ "ಹೇ! ಗುರುಪತ್ನಿ!" ಅಂತ ಕರೆಯುವರು. ಒಂದುದಿನ ಬೀಸಣಿಗೆಯನ್ನು ರೊಯ್ ಅಂತ ಕಿಟಕಿಯಾಚೆ ಬಿಸಾಕಿದರು. ಗಾಳಿ ಎಂಬುದು ದೇವರು, ಅದು ತಾನೇ ತಾನಾಗಿ ಬೀಸಬೇಕೇ ಹೊರತು ಕೃತ್ರಿಮವಿಧಾನಗಳಿಂದ ಅದರ ವೇಗವನ್ನು ಹೆಚ್ಚಿಸಕೂಡದು, ಹಾಗೆಮಾಡುವುದು ಪಾಪ; ಎಂದೆಲ್ಲ ನನಗೆ ಬೋಧನೆ ಮಾಡಿದರು. ಮಧ್ಯಾಹ್ನ ಕೆಂಚನ ಅಂಗಡಿಯಿಂದ ಮಗು ತಂದಿದ್ದ ಗಾಳಿಪಟ

ವನ್ನು ಹರಿದು ಚೂರುಮಾಡಿದರು. "ಗಾಳಿಗೋಪುರ" ಎಂಬ ಒಂದು ಪುಸ್ತಕವನ್ನೂ ಕೂಡ ಆಚೆಗೆ ಎಸೆದರು!

ಆದಿನ ರಾತ್ರಿ ನಾನು ಶ್ರೀರಾಮನ ಪಟವೊಂದನ್ನ ಮಡಿಲಲ್ಲಿಟ್ಟು ಕೊಂಡು ಅವರ ಹತ್ತಿರ ಕೂತು ಹತ್ತುಸಾವಿರಸಲ ರಾಮನಾಮವನ್ನು ಹೇಳಿದೆ ಸುಮಾರು ಐದುಗಂಟೆಗಳಕಾಲ ಹಿಡಿಯಿತು. ನಡುವೆ ಅವರಿಗೆ ಒಂದುಸಲ ಎಚ್ಚರವಾಯಿತು "ಏನೇ! ನೀನು ಮಲಗಿಲ್ಲವೆ?" ಅಂದರು. ನಿಮಗೆ ಮೈ ಬೆಚ್ಚಗಿತ್ತು, ಜ್ವರವೇನಾದರೂ ಬಂತೋ" ಅಂತ ನೋಡಿದೆ, ಅಷ್ಟೆ ಇಕೊ, ಮಲಗಿದೆ...ಅಂತ ಹೇಳಿ ಜಪವನ್ನು ನಿಲ್ಲಿಸಿ ಎದ್ದೆ ರಾಮ ದೇವರಪಟ ಕೆಳಗೆಬಿತ್ತು ಗಾಜು ಒಡೆಯಿತು. ಇವರು ಎದ್ದರು "ಏನೂ ಇಲ್ಲ ಸುಮ್ಮನಿರಿ! ನೀವು ಮಲಗಿ! ನೀರಿನ ಗಲಾಸು, ಅಷ್ಟೆ" ಅಂತ ಹೇಳಿ ಇವರನ್ನು ಹಿಡಿದು ಮಲಗಿಸಿದೆ ಕತ್ತಲಲ್ಲೇ ಗಾಜಿನಚೂರುಗಳನ್ನು ಆರಿಸಿದೆ ನನ್ನ ಪಾಲಿಗೆ ದೇವರಿಲ್ಲವಾದನೇ, ಅಂತ ಕಣ್ಣೀರುಬಿಡುತ್ತಾ ಮಲಗಿದೆ ಈ ಹುಚ್ಚು ಹೊಳೆ ಇವರನ್ನೂ ನಮ್ಮನ್ನೂ ಯಾವ ಸಮುದ್ರಕ್ಕೆ ತೆಗೆದುಕೊಂಡುಹೋಗಿ ಮುಳುಗಿಸುತ್ತದೋ ಅಂತ ಗಾಬರಿಗೊಂಡೆ

ಮರುದಿನ ಅವರದು ಟಪಾಲ್‌ದಿನ! "ಮಾರುತಿಯ ಉತ್ತರಗಳು ಬರುವ ದಿನ "ಬಾ! ನೀನೂ ಮರ ಹತ್ತಿಬಿಡು! ಗಾಳಿಯಲ್ಲಿ ಇಬ್ಬರೂ ತೇಲಿಹೋಗುವಾ," ಅಂತ ಬರೆದೇ ಇರುತ್ತದೆ, ಅಂತ ಇದ್ದೆ ಅವತ್ತಿನ ದಿವಸ" ಸೌದೆ ತರುವುದಕ್ಕೆ ಕಾಡಿಗೆ ಹೋಗುತ್ತೇನೆ ಕೊಡಲಿಕೊಡು" ಅಂತ ಸತ್ಯವಾನ ಕೇಳಿದಾಗ ಸಾವಿತ್ರಿಗೆ ಆದ ಸಂಕಟ, ನನಗೂ ಆ ದಿನ ಇವರು "ಪೋಸ್ಟಾಪೀಸಿಗೆ ಹೋಗಬೇಕು ಟವಲ್‌ಕೊಡು" ಅಂದಾಗ ಉಂಟಾಯಿತು.

ರಾಮಜಪವನ್ನು ಮಾತ್ರ ನಾನು ಬಿಡಲಿಲ್ಲ ಗಾಜೊಡೆದರೂ, ಪಟ ಇತ್ತಲ್ಲ. ಅದನ್ನ ಮಡಿಲಲ್ಲೇ ಇರಿಸಿಕೊಂಡು ತಲೆ ನೋವು ಅಂತ ಅತ್ತೆಗೆ ಸುಳ್ಳು ಹೇಳಿ, ದೇವರ ಕೋಣೆಯಲ್ಲೇ ಕುಳಿತಿದ್ದೆ.. ಟಪಾಲು ತಂದರು.... ಬಾಗಿಲು ಹಾಕಿಕೊಂಡರು. . ಒಳಗಿಂದ "ಉಸ್ಸಪ್ಪ!" ಅಂತ ಒಂದು ನಿಟ್ಟುಸಿರು ಕೇಳಿಸಿತು! "ಇಲ್ಲ! ಇನ್ನು ಮೇಲೆ ಇಲ್ಲ! ಆಯಿತು!.. ಮುಗಿಯಿತು!" ಅಂತ ಗಟ್ಟಿಯಾಗಿ ಹೇಳಿಕೊಂಡರು. . ನನಗೆ ಎದೆ ಒಡೆದು ಹೋಯಿತು "ಸನ್ಯಾಸವೇ ಸಿದ್ಧ" ಅಂತ ತೀರ್ಮಾನಿಸಿದೆ.....

ಆದರೆ, ಶ್ರೀರಾಮ ಕಾಪಾಡಿದ. ಕಾಗದ ಬಂದು ಈಗ ಹತ್ತು ಹನ್ನೆರಡು ದಿನಗಳಾಗಿವೆ. ಈಗ ಎಷ್ಟೋ ಗೆಲುವಾಗಿದಾರೆ ಆಂಜನೇಯನ ಪೂಜೆ ಮಾತ್ರ ನಡೆಯುತ್ತಿದೆ; ಆದರೆ ಹಿಂದಿನಷ್ಟು ಮಂತ್ರದ ಆರ್ಭಟವಿಲ್ಲ ಗುರು ಗುರು ಪತ್ನಿ ಮುಂತಾದ ಮಾತುಗಳು ನಿಂತಿವೆ ಊಟ ತಿಂಡಿಗಳಲ್ಲಿ ಅಭಿರುಚಿ ತೋರಿಸುತ್ತಿದಾರೆ. ಉಪ್ಪು ಖಾರ ಹೆಚ್ಚಿದ್ದರೆ ಕಡಿಮೆ ಇದ್ದರೆ ಟೀಕಿಸುತ್ತಾರೆ ನನ್ನನ್ನೂ ನಗಿಸುತ್ತಾರೆ, ಹಾಸ್ಯ ಮಾಡುತ್ತಾರೆ "ಮಗೂನ ಅರ್ಜುನ ಅಂತ ಕರೆದೇ ಬಿಡೋಣ, ಅಲ್ಲವೇನೆ" ಅಂತ ಹೇಳಿದರು, ನಿನ್ನೆ ರಾತ್ರಿ. .. ಶ್ರೀರಾಮ ರಕ್ಷೆ—

## ಸತಿಯ ಪ್ರಸಾರ ಮುಗಿಯಿತು

---

ಏನು ಉಪಚಾರವನು ಮಾಡೆ, ಬಾಯ್ದೆರೆಯದಿರೆ
—ಪುರಂದರದಾಸರು

ನಿನ್ನ ಆಶೀರ್ವಾದಪರಿವೇಷ ಮುತ್ತಿರಲಿ
ನನ್ನನುಸದಾ. .. —ಪುಟ್ಟಪ್ಪ

ಇದರ್ಕೆ ನಿಮ್ಮಂ ಮನದೊಳೇವಂ ಗೊಳ್ಳದೆ
ಕ್ಷಮಿಯಿಸಿಂ ಎಂದು ನುಡಿದು ವಂದಿಸಿ..... —ವಡ್ಡಾರಾಧನೆ

# ಮನೋಹರ ಗ್ರಂಥಮಾಲೆಯಲ್ಲಿ ಇದುವರೆಗೆ ಅರಳಿದ ಕುಸುಮಗಳು.

| | | | | | |
|---|---|---|---|---|---|
| ೧ | ಸುದರ್ಶನ | ಆನಂದಕಂದ | ೦ | ೧೪ | ೦ |
| ೨ | ನವಿಲುಗರಿ* | ಬೇರೆಬೇರೆಯವರು | ೦ | ೧೨ | ೦ |
| ೩ | ತ್ರಿಪುರದಹನ* | ಮ ಅ ದೊರೆಸ್ವಾಮಿ ಐಯ್ಯಂಗಾರ್ | ೦ | ೧೨ | ೦ |
| ೪ | ಬಾಳುರಿ* | ರಂ ಶ್ರೀ ಮುಗಳಿ | ೦ | ೧೨ | ೦ |
| ೫ | ಬ್ರಾಹ್ಮಣರ ಹುಡುಗಿ* | ಆರ್ ವ್ಯಾಸರಾವ | ೦ | ೧೨ | ೦ |
| ೬ ೭ | ವಿಶ್ವಾಮಿತ್ರನ ಸೃಷ್ಟಿ | ಶ್ರೀರಂಗ | ೧ | ೧೨ | ೦ |
| ೮ | ಜೀವನ* | ಕೃಷ್ಣಕುಮಾರ | ೦ | ೧೨ | ೦ |
| ೯ | ಕಾಳರಾತ್ರಿ* | ಮಧುರಚೆನ್ನ | ೦ | ೧೨ | ೦ |
| ೧೦ | ಧರ್ಮಶೆರೆ* | ಜಡಭರತ | ಅಚ್ಚಿನಲ್ಲಿ | | |
| ೧೧ | ರಾಜಯೋಗಿ | ಆನಂದಕಂದ | ೧ | ೦ | ೦ |
| ೧೨ | ಕೋಲ್ಮಿಂಚು* | ಬೇರಬೇರೆಯವರು | ೧ | ೦ | ೦ |
| ೧೩ ೧೪ | ಇಜ್ಜೋಡು* | ವಿ ಕೃ ಗೋಕಾಕ | ೧ | ೮ | ೦ |
| ೧೫ | ಕುರಿಹಿಂಡು* | ಜಲಧರ | ೧ | ೦ | ೦ |
| ೧೬ | ಧೂಮಕೇತು* | ಕಡೆಂಗೋಡ್ಲು ಶಂಕರಭಟ್ಟ | ೦ | ೧೪ | ೦ |
| ೧೭ | ಧರ್ಮಜ್ಯೋತಿ* | ದೊರೆಸ್ವಾಮಿ ಐಯ್ಯಂಗಾರ್ | ೧ | ೪ | ೦ |
| ೧೮ | ಸೇವಾಪ್ರದೀಪ | ರಂ ಶ್ರೀ ಮುಗಳಿ | ೦ | ೧೨ | ೦ |
| ೧೯ | ದಿಲ್ಲೀಶ್ವರನ ದಿನಚರಿ* | ನಾ ಕಸ್ತೂರಿ | ೦ | ೧೨ | ೦ |
| ೨೦ | ಪುಷ್ಪಮಾಲೆ | ಶ್ರೀಸ್ವಾಮಿ | ೧ | ೦ | ೦ |
| ೨೧ | ಸೋಲೋ ಗೆಲುವೋ | ದೇವುಡು | ೦ | ೧೨ | ೦ |
| ೨೨ | ಹಳ್ಳಿಯ ಸಮಾಜ* | ಆರ್ ವ್ಯಾಸರಾವ್ | ೦ | ೧೪ | ೦ |
| ೨೩ | ಪಾವನಪಾವಕ | ರಂ ಶ್ರೀ ಮುಗಳಿ | ೦ | ೮ | ೦ |
| ೨೪ | ಸಮುದ್ರದಾಚೆಯಿಂದ | ವಿ ಕೃ ಗೋಕಾಕ | ೧ | ೦ | ೦ |
| ೨೫ | ಸರಸಮ್ಮನ ಸಮಾಧಿ* | ಶಿವರಾಮ ಕಾರಂತ | ೦ | ೧೨ | ೦ |
| ೨೬-೨೭ | ಎರಡು ಧ್ರುವ | ವ್ಹಿ ಎಂ ಇನಾಮದಾರ | ೨ | ೦ | ೦ |
| ೨೮ | ಸಮುದ್ರದಾಚೆಯಿಂದ | ವಿ ಕೃ ಗೋಕಾಕ | ೧ | ೦ | ೦ |
| ೨೯ | ಹೂಬಾಣಗಳು* | ಪ. ರಮಾನಂದ | ೧ | ೮ | ೦ |
| ೩೦ | ಮಹಾಪೂರ | ಎಸ್ ಜಿ ಕುಲಕರ್ಣಿ | ೦ | ೧೨ | ೦ |
| ೩೧ | ಸಂಧ್ಯಾರಾಗ* | ಅ. ನ ಕೃಷ್ಣರಾಯ | ೧ | ೦ | ೦ |
| ೩೨ ೩೩ | ಪ್ರೇಮಾಹುತಿ | ಗುರುರಾಜ. ಜೋಶಿ | ೧ | ೮ | ೦ |
| ೩೪ | ಜನನಾಯಕ* | ವಿ. ಕೃ. ಗೋಕಾಕ | ೦ | ೧೪ | ೦ |
| ೩೫ | ಸುಳವು ಹೊಳವು | ಬೇರೆಬೇರೆಯವರು | ೧ | ೪ | ೦ |
| ೩೬ | ಕಾರಣಪುರುಷ | ರಂ. ಶ್ರೀ. ಮುಗಳಿ | ೧ | ೦ | ೦ |

| | | | | | |
|---|---|---|---|---|---|
| ೩೭ ಹತ್ತು ವರುಷ* | ಜಿ. ಪಿ. ರಾಜರತ್ನಂ | ೧ | ೦ | ೦ |
| ೩೮ ತುಟಿಮೀರಿದುದು* | ರಾ. ಶಿ | ೦ | ೧೪ | ೦ |
| ೩೯-೪೦ ಭಾರತಮಾರ್ಗ | ಗುರುರಾಜ ಜೋಶಿ | ೨ | ೮ | ೦ |
| ೪೧ ಗ್ರಾಮಪಂಚಾನನ | ಬಾ ಕೃ ಲಕ್ಷ್ಮೇಶ್ವರ | ೦ | ೧೨ | ೦ |
| ೪೨ ಮಾರ್ಗದರ್ಶಕ* | ಎಂ ವಿ. ಸೀತಾರಾಮಯ್ಯ | ೦ | ೧೪ | ೦ |
| ೪೩ ಗಾಳಿಗೋಪುರ* | ನಾ ಕಸ್ತೂರಿ | ೧ | ೪ | ೦ |
| ೪೪-೪೫ ಮಂಗಳಸೂತ್ರ* | ಅ ನ ಕೃಷ್ಣರಾಯ | ೧ | ೮ | ೦ |
| ೪೬ ಬಿಡುಗಡೆಯ ಬೆಲೆ* | ಅಶ್ವತ್ಥನಾರಾಯಣರಾವ್ | ೦ | ೧೪ | ೦ |
| ೪೭-೪೮ ವೈಯ್ಯಾರಿ | ಗೊ ರಾಮಸ್ವಾಮಿ ಐಯ್ಯಂಗಾರ್ | ೧ | ೧೨ | ೦ |
| ೪೯-೫೦-೫೧ ೫೨ ಮರಳಿ ಮಣ್ಣಿಗೆ* | ಶಿವರಾಮ ಕಾರಂತ | (ಅಚ್ಚಿನಲ್ಲಿ) | | |
| ೫೩ ಬರಮಪ್ಪನ ಭೂತ | ಶ್ರೀರಂಗ | ೦ | ೧೪ | ೦ |
| ೫೪ ಜಯಶ್ರೀ | ಚಿ ಸದಾಶಿವಯ್ಯ | ೧ | ೧೨ | ೦ |
| ೫೫ ಪಚ್ಚೆ ಉಂಗುರ | ಎಂ ಜಿ ವೆಂಕಟೇಶಯ್ಯ | ೧ | ೦ | ೧ |
| ೫೬ ಮೆಡೇಮ್ ಕ್ಯೂರಿ | ಕೆ ಎ ರತ್ನಮ್ಮ | ೧ | ೪ | ೦ |
| ೫೭ ಮೋಡಗಳು | ಶ್ರೀ ಸ್ವಾಮಿ | ೧ | ೪ | ೦ |
| ೫೮ ತೆನಾಲಿ ರಾಮಕೃಷ್ಣ | ಸಿ ಕೆ ವೆಂಕಟರಾಮಯ್ಯ | ೧ | ೦ | ೦ |
| ೫೯ ೬೦ ಬೆಟ್ಟದ ಜೀವ | ಶಿವರಾಮ ಕಾರಂತ | ೧ | ೧೪ | ೦ |
| ೬೧ ಹೂವಿನ ಹಾಸಿಗೆ | ಹೊಯ್ಸಳ | ೧ | ೦ | ೦ |
| ೬೨ ಕನಸಿನ ಕೆಳದಿ | ರಂ ಶ್ರೀ ಮುಗಳಿ | ೧ | ೪ | ೦ |
| ೬೩ ಕೆನ್ಸಿಂಗ್ಟನ್‌ಪಾರ್ಕ್ | ಕೆ ಗೋಪಾಲಕೃಷ್ಣ | ೧ | ೪ | ೦ |
| ೬೪ ಚಕ್ರದೃಷ್ಟಿ | ನಾ ಕಸ್ತೂರಿ | ೧ | ೮ | ೦ |
| ೬೫ ಮಿಂಚಿನ ಹುಡಿ | ಕೃಷ್ಣಕುಮಾರ | ಅಚ್ಚಿನಲ್ಲಿ | | |
| ೬೬ ಅನಂತ | ಸತ್ಯಬೋಧ | ,, | | |
| ೬೭ ನಟಸಾರ್ವಭೌಮ | ಅ ನ ಕೃಷ್ಣರಾಯ | ,, | | |
| ೬೮ ಮುಗಿದ ಯುದ್ಧ | ಶಿವರಾಮ ಕಾರಂತ | ,, | | |

## ಬಿಡಿಮುತ್ತುಗಳು.

| | | | | |
|---|---|---|---|---|
| ೧ ಸಖೀಗೀತ | ದ ರಾ ಬೇಂದ್ರೆ | ೧ | ೦ | ೦ |
| ೨ ಸಾಹಿತ್ಯ ಸಂಶೋಧನ | ,, | ೨ | ೦ | ೦ |
| ೩ ನಿರಾಭರಣ ಸುಂದರಿ | ,, | ೧ | ೦ | ೦ |
| ೪ ಬಾಸಿಗ | ರಂ ಶ್ರೀ ಮುಗಳಿ | ೧ | ೦ | ೦ |
| ೫ ಸಮುದ್ರಗೀತಗಳು | ವಿ ಕೃ ಗೋಕಾಕ | ೧ | ೦ | ೦ |
| ೬ ಆಶು ನಾಟಕಗಳು | ಬೇರೆಬೇರೆಯವರು | ೦ | ೧೦ | ೦ |

* ಈ ಗುರುತಿನ ಪುಸ್ತಕಗಳು ತೀರಿವೆ